# ಶ್ರೀಕೃಷ್ಣ ಚರಿತ್ರ.

( ಸಚಿತ್ರ )

ಬಾಲಪರ್ವ, ಮಥುರಾಪರ್ವ, ದ್ವಾರಕಾಪರ್ವ, ರಾಜಸೂಯ ಪರ್ವ, ಸಾಮಪರ್ವ, ಗೀತಾಪರ್ವ, ಯುದ್ಧಪರ್ವ, ಉತ್ತರ ಪರ್ವ, ಉಪಸಂಹಾರ, ಮತ್ತು ಐತಿಹಾಸಿಕ ಟಿಪ್ಪಣಿ ಇವುಗಳಿಂದೊಡಗೂಡಿದ್ದು.

ಗ್ರಂಥಕರ್ತರು ಮತ್ತು ಪ್ರಕಾಶಕರು:—

ಗ. ಹು. ಹೊನ್ನಾಪುರಮಠ

ವಕೀಲ, ಧಾರವಾಡ.

೨ ನೇ ಆವೃತ್ತಿ.

ಸನ್ನ ೧೯೩೧ ನೇ ಇ.

ಬೆಲೆ ಒಂದು ರೂಪಾಯಿ.

**ಮುದ್ರಕರು**—ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ, ಧಾರವಾಡ.

**ಮುದ್ರಣಾಲಯ**—ಚಂದ್ರೋದಯ ಮುದ್ರಣಾಲಯ, ಧಾರವಾಡ.

**ಪ್ರಕಾಶಕರು**—ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ, ಧಾರವಾಡ.

**ಪ್ರಕಾಶನದ ಸ್ಥಳ**—ಚಂದ್ರೋದಯ ಮುದ್ರಣಾಲಯ, ಧಾರವಾಡ.

**೧೯೩೧ ಮೇ.**

# ಮುನ್ನುಡಿ.



ಭಗವತ್ಕೃಪೆಯಿಂದ ಶ್ರೀಕೃಷ್ಣಚರಿತ್ರವೆಂಬ ಈ ಗ್ರಂಥವು ಇವತ್ತಿನ ದಿವಸ ನನ್ನ ಕೈಯಿಂದ ಪೂರ್ಣವಾದುದಕ್ಕಾಗಿ ನನಗೆ ಅತ್ಯಾನಂದವಾಗುತ್ತದೆ. ಇಂಥ ಉದಾತ್ತವಾದ ಚರಿತ್ರವನ್ನು ಬರೆದು ಮುದ್ರಿಸುವ ಭಾಗ್ಯವು ನನಗೆ ಒದಗಿದ್ದಕ್ಕಾಗಿ ನನಗಂತೂ ಒಂದು ಬಗೆಯ ಧನ್ಯತೆಯು ಉಂಟಾಗುವದು ಸ್ವಾಭಾವಿಕವಾಗಿರುತ್ತದೆ. ಯಾಕಂದರೆ ಈ ಚರಿತ್ರದಲ್ಲಿ ಇರತಕ್ಕಷ್ಟು ಅಧಿಭೌತಿಕ ಮತ್ತು ಆಧ್ಯಾತ್ಮಿಕ ಜ್ಞಾನವು ಇತರ ಯಾವ ಗ್ರಂಥದಲ್ಲಿಯೂ ದೊರಕಲಾರದೆಂದು ನನ್ನ ಅಭಿಪ್ರಾಯವಿರುತ್ತದೆ. ಶ್ರೀಕೃಷ್ಣನಂಥ ಅಪ್ರತಿಮ ಬುದ್ಧಿಶಾಲಿಯು, ಅಲೌಕಿಕ ಪರಾಕ್ರಮಿಯು, ಸ್ವಾರ್ಥತ್ಯಾಗಿಯು ಮತ್ತು ಸನ್ಮಾರ್ಗದರ್ಶಕನು ಈ ಜಗತ್ತಿನಲ್ಲಿ ಇಂದಿನ ವರೆಗೆ ಯಾರೂ ಆಗಲಿಲ್ಲವೆಂದು ನಿರ್ವಿವಾದವಾಗಿ ಹೇಳಬಹುದು. ಶ್ರೀಕೃಷ್ಣನು ರಾಜಕಾರಣದಲ್ಲಿ ಅಗ್ರಗಣ್ಯನಿದ್ದಂತೆ ಪಾರಮಾರ್ಥಿಕ ವಿಷಯದಲ್ಲಿಯೂ ಅಗ್ರಗಣ್ಯನಿದ್ದನು. ಅವನು ಸಾಮಾನ್ಯ ವ್ಯಕ್ತಿಯಲ್ಲ, ಭಗವಂತನ ಪ್ರತ್ಯಕ್ಷ ಅವತಾರ ಪುರುಷನಿದ್ದನು. ಆದುದರಿಂದ ಅವನ ಚರಿತ್ರವು ಐಹಿಕ ದೃಷ್ಟಿಯಿಂದಾಗಲಿ, ಪಾರಮಾರ್ಥಿಕ ದೃಷ್ಟಿಯಿಂದಾಗಲಿ ಓದುವವರಿಗೆ ಬಹು ರಮ್ಯವಾಗಿಯೂ ಬೋಧಪ್ರದವಾಗಿಯೂ ಇರುತ್ತದೆಂದು ಮನವರಿಕೆಯಾಗದೆ ಇರಲಾರದು. ಶ್ರೀಕೃಷ್ಣಚರಿತ್ರಕ್ಕೆ ಅವನ ಚರಿತ್ರದಲ್ಲಿ ಅಂತರ್ಗತವಾಗಿರುವ ಗೀತೋಪದೇಶವು ವಜ್ರಕ್ಕೆ ಕುಂದಣವನ್ನು ಕೂಡಿಸಿದಂತೆ ಆಗಿರುತ್ತದೆ. ಶ್ರೀರಾಮಚಂದ್ರನ ಉದಾತ್ತ ಚರಿತ್ರವನ್ನು ವಾಲ್ಮೀಕಿ ಮಹರ್ಷಿಗಳಂಥ ಪ್ರತಿಭಾಸಂಪನ್ನ ಆದ್ಯ ಕವಿಗಳು ಬರೆದುದರಿಂದ ಅದಕ್ಕೆ ಯಾವ ಪ್ರಕಾರ ಜಗತ್ತಿನಲ್ಲಿ ಅತ್ಯಂತ ಮಹತ್ವವು ಬಂದಿರುತ್ತದೋ, ಅದೇ ಪ್ರಕಾರ ಶ್ರೀಕೃಷ್ಣ ಚರಿತ್ರವನ್ನು ಮಹರ್ಷಿ ವ್ಯಾಸರಂಥ ವ್ಯವಹಾರ ಚತುರರರೂ ತತ್ವಜ್ಞಾನ ಪಾರಂಗತರೂ ಆದ ಆದ್ಯ ಇತಿಹಾಸಕಾರರು ಬರೆದಿರುವದರಿಂದ ಇದಕ್ಕೆ ಸಹ ಅತ್ಯಂತ ಮಹತ್ವವು ಬಂದಿರುತ್ತದೆ. **ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ** ಎಂಬ ನಾಣ್ಣುಡಿಯಂತೆ ಜಗತ್ತಿನಲ್ಲಿ

ಎಲ್ಲ ಸುಂದರ ಕಲ್ಪನೆಗಳು, ಎಲ್ಲ ಸುಂದರ ವರ್ಣನೆಗಳು ಮತ್ತು ಎಲ್ಲ ಸುಂದರ ಯುಕ್ತಿವಾದಗಳು ವ್ಯಾಸಮಹರ್ಷಿಗಳ ಎಂಜಲವೆಂದು ತಿಳಿಯಲಿಕ್ಕೆ ಏನೂ ಅಡ್ಡಿಯಿಲ್ಲ. ಆದುದರಿಂದ ಇಂಥವರ ವರದ ಹಸ್ತದಿಂದ ಮಹಾಭಾರತದೊಳಗೆ ಅತ್ಯಂತ ಸುಂದರವಾಗಿ ಮಂಡಿಸಲ್ಪಟ್ಟಿರುವ ಶ್ರೀಕೃಷ್ಣ ಚರಿತ್ರವನ್ನೂ ಅದರಲ್ಲಿ ಅಂತರ್ಗತವಾಗಿರುವ ಗೀತೋಪದೇಶವನ್ನೂ ನಾನು ಯಥಾಮತಿ ಕನ್ನಡ ವಾಚಕರ ಸಲುವಾಗಿ ಬರದಿದ್ದೇನೆ. ಈ ಗ್ರಂಥಕ್ಕೆ ಭಾರತ, ಭಾಗವತ ಮತ್ತು ಹರಿವಂಶ ಈ ಮೂರು ಗ್ರಂಥಗಳೇ ಮೂಲ ಸಾಧನವಾಗಿರುತ್ತವೆ. ಇವೇ ಸಾಧನಗಳ ಮೇಲಿಂದ ಮಹಾರಾಷ್ಟ್ರದ ಪ್ರಸಿದ್ಧ ಗ್ರಂಥಕರ್ತರಾದ ಶ್ರೀಯುತ ಚಿಂತಾಮಣರಾವ ವಿನಾಯಕ ವೈದ್ಯ ಇವರು ಮಹಾರಾಷ್ಟ್ರ ಭಾಷೆಯಲ್ಲಿ ಶ್ರೀಕೃಷ್ಣ ಚರಿತ್ರವೆಂಬ ಒಂದು ಸುಂದರವಾದ ಗ್ರಂಥವನ್ನು ಬರೆದಿರುತ್ತಾರೆ. ಅದೇ ಗ್ರಂಥದ ಮಾದರಿಯಂತೆ ಮತ್ತು ಮುಖ್ಯವಾಗಿ ಅದೇ ಗ್ರಂಥದ ಸಹಾಯದಿಂದ ನಾನು ಈ ಗ್ರಂಥವನ್ನು ಬರೆದು **ಕನ್ನಡ ವಾಗ್ದೇವಿಯ** ಅಡಿದಾವರೆಗಳಿಗೆ ಅರ್ಪಿಸಿರುತ್ತೇನೆ. ಹಾಗೂ ಈ ನನ್ನ ಗ್ರಂಥಕ್ಕೆ ಶ್ರೀ. ವೈದ್ಯರು ಬರೆದ ಮಹಾರಾಷ್ಟ್ರ ಗ್ರಂಥದಿಂದ ತುಂಬಾ ಸಹಾಯವು ದೊರಕಿದ್ದರಿಂದ ನಾನು ಅವರಿಗೆ ಇಲ್ಲಿ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಕನ್ನಡಿಗರ ಸೇವಕ

| ಶಕೆ ೧೮೫೫ ಕಾರ್ತಿಕ ಶುದ್ಧ ೧ | **ಗ. ಹು. ಹೊನ್ನಾಪುರಮಠ** |
| --- | --- |
| ಶನಿವಾರ ತಾ. ೨ ೧೧-೧೯೨೯ ಇಸವಿ. | ಗ್ರಂಥಕರ್ತ. |

# ೨ನೇ ಆವೃತ್ತಿಯ ಸೂಚನೆ.

ಇದನ್ನು ಮುಂಬಯಿ ವಿಶ್ವವಿದ್ಯಾಲಯುವರು ಈ ವರ್ಷದ ಮ್ಯಾಟ್ರಿಕ್ಯುಲೇಶನ್ನ ಪರೀಕ್ಷೆಯ ಸಲುವಾಗಿ ಹಚ್ಚಿದ್ದು ೧ನೇ ಆವೃತ್ತಿಯ ಪ್ರತಿಗಳು ಸಾಕಾಗದೆ ಇದ್ದುದರಿಂದ ಈ ಸುಧಾರಿಸಿದ ೨ನೇ ಆವೃತ್ತಿಯನ್ನು ಮುದ್ರಿಸಿ ಪ್ರಸಿದ್ಧಮಾಡಿರುತ್ತೇವೆ.

ತಮ್ಮ ವಿಧೇಯ

| **ಧಾರವಾಡ** | **ಗ. ಹು. ಹೊನ್ನಾಪುರಮಠ** |
| --- | --- |
| ತಾ. ೨೭-೪-೧೯೩೧ | ಗ್ರಂಥಕರ್ತ |

# ವಿಷಯಾನುಕ್ರಮಣಿಕೆ.



ಶ್ರೀಕೃಷ್ಣ ಜನ್ಮೋತ್ಸವ. (ಪುಟ ೮)

# ಶ್ರೀಕೃಷ್ಣ ಚರಿತ್ರ.

## ೧. ಬಾಲಪರ್ವ.



ಈ ಪುಣ್ಯ ಭೂಮಿಯಾದ ಆರ್ಯಾವರ್ತದಲ್ಲಿ ವಿಂಧ್ಯಾ ಪರ್ವತದ ಉತ್ತರ ದಿಕ್ಕಿನ ಕಡೆಗೆ ಶೂರಸೇನ ಎಂಬ ಹೆಸರಿನ ಒಂದು ಅತ್ಯಂತ ಫಲವತ್ತಾದ ಮತ್ತು ರಮಣೀಯವಾದ ದೇಶವಿದ್ದು ಅದರೊಳಗಿಂದ ಯಮುನಾ ನದಿಯು ವಾಯುವ್ಯ ದಿಕ್ಕಿನಿಂದ ಆಗ್ನೇಯ ದಿಕ್ಕಿನ ಕಡೆಗೆ ಹರಿಯುತ್ತಿತ್ತು. ಆ ದೇಶದ ಸಮೃದ್ಧ ರಾಜಧಾನಿಯು ಯಮುನಾ ನದಿಯ ದಕ್ಷಿಣ ತೀರದ ಮೇಲೆ ಇತ್ತು. ಅದನ್ನು ಮೊದಲು ಮಧು ಎಂಬ ರಾಕ್ಷಸನು ಸ್ಥಾಪಿಸಿದ ಕಾರಣ ಅದಕ್ಕೆ ಮಧುಪುರ ಅಥವಾ ಮಥುರಾ ಎಂದು ಅನ್ನುತ್ತಿದ್ದರು. ಆದರೆ ಮಧು ರಾಕ್ಷಸನ ಮಗನಾದ ಲವಣನು ಅಲ್ಲಿ ಇದ್ದ ಋಷಿಗಳಿಗೆ ಬಹಳ ಪೀಡಿಸ ಹತ್ತಿದ ಕಾರಣ ಆ ಋಷಿಗಳ ವಿನಂತಿಯ ಮೇಲಿಂದ ಅಯೋಧ್ಯೆಯ ಅರಸನಾದ ಶ್ರೀ ರಾಮಚಂದ್ರನು ಲವಣನನ್ನು ಸಂಹಾರ ಮಾಡುವದಕ್ಕಾಗಿ ಶತ್ರುಘ್ನನನ್ನು ಕಳಿಸಿದನು. ಆ ಪ್ರಕಾರ ಶತ್ರುಘ್ನನು ತನ್ನ ಸಂಗಡ ಶೂರ ಶೈನ್ಯವನ್ನು ತೆಗೆದುಕೊಂಡು ಹೋಗಿ ಲವಣನನ್ನು ಕೊಂದ ತರುವಾಯ ಮಧುಪುರದೊಳಗೆ ತನ್ನ ರಾಜ್ಯವನ್ನು ಸ್ಥಾಪಿಸಿದನು. ಶೂರಸೇನ ಪ್ರದೇಶವು ನಿಬಿಡಾರಣ್ಯದಿಂದ ತುಂಬಿಹೋಗಿದ್ದ ಕಾರಣ ಶತ್ರುಘ್ನನ ಸಂಗಡ ಹೋದ ಸೈನಿಕರು ಆ ಅಡವಿಯೊಳಗಿನ ಎಲ್ಲ ಮರಗಳನ್ನು ಕಡಿದುಹಾಕಿ ಅಲ್ಲಿ ವಾಸ ಮಾಡಹತ್ತಿದರು. ಈ ಸೈನಿಕರು ಸೂರ್ಯವಂಶದ ಕ್ಷತ್ರಿಯರಿದ್ದರು. ಅವರು ಕಾಲಗತಿಯಿಂದ ನಾಶಹೊಂದಿದ ಬಳಿಕ ಅಲ್ಲಿ ಚಂದ್ರವಂಶದ ಕ್ಷತ್ರಿಯರು ಅಂದರೆ ಯಾದವರು, ಅಂಧಕರು, ಭೋಜರು ಮೊದಲಾದವರು ಇರಹತ್ತಿದರು.

ಅವರಲ್ಲಿ ಭೋಜಕುಲದೊಳಗೆ ಹುಟ್ಟಿದ ಶೂರಸೇನನೆಂಬವನು ಅಲ್ಲಿ ಮೊದಲಿಗೆ ರಾಜ್ಯವನ್ನು ಸ್ಥಾಪನ ಮಾಡಿದನು. ಆದುದರಿಂದ ಆ ಪ್ರದೇಶಕ್ಕೆ ಮೇಲಿನ ಎರಡೂ ಕಾರಣಗಳ ಸಲುವಾಗಿ ಶೂರಸೇನ ಎಂಬ ಹೆಸರು ಬಂತು. ಆ ಕಾಲಕ್ಕೆ ಆ ದೇಶವು ನಾನಾ ಪ್ರಕಾರದ ವ್ಯಾಪಾರಸ್ಥರಿಂದಲೂ ಕಲಾಕೋವಿದರಿಂದಲೂ ವೀರಭಟರಿಂದಲೂ ತುಂಬಿ ಹೋಗಿ ಐಶ್ವರ್ಯದ ಮತ್ತು ವೈಭವದ ಶಿಖರಕ್ಕೆ ಮುಟ್ಟಿತ್ತು. ಇಂಥ ರಮ್ಯ, ವೈಭವಶಾಲಿ ಮತ್ತು ಸುಖಸಂಪನ್ನ ದೇಶದಲ್ಲಿ ಶೂರಸೇನ ರಾಜನ ವಂಶದೊಳಗೆ ಹುಟ್ಟಿದ ಉಗ್ರಸೇನನೆಂಬ ಅರಸನು ಸುಮಾರು ೫೧೦೦ ವರ್ಷಗಳ ಪೂರ್ವದಲ್ಲಿ ನ್ಯಾಯದಿಂದಲೂ, ನೀತಿಯಿಂದಲೂ ರಾಜ್ಯಭಾರವನ್ನು ಮಾಡುತ್ತಿದ್ದನು. ಹೀಗಿರಲು ಅವನ ದುಷ್ಟ ಹಿರಿಯ ಮಗನಾದ ಕಂಸನು ಅವನನ್ನು ಒಮ್ಮಿಂದೊಮ್ಮೆ ಕಾರಾಗೃಹದಲ್ಲಿಟ್ಟು ತಾನು ಅವನ ಸಿಂಹಾಸನದ ಮೇಲೆ ಕುಳಿತು ರಾಜ್ಯವಾಳಹತ್ತಿದನು. ಈ ಕಂಸನು ಅತ್ಯಂತ ಶೂರನೂ, ಕ್ರೂರನೂ, ಸಿಟ್ಟಿನವನೂ, ಸೊಕ್ಕಿನವನೂ ಇದ್ದನು. ಇವನ ಕೃತ್ಯಗಳೆಲ್ಲ ಭಯಂಕರವಾಗಿದ್ದವು. ಇವನು ರಾಜಧರ್ಮವನ್ನು ಬಿಟ್ಟು ಅನೀತಿಯಿಂದ ವರ್ತಿಸಲಿಕ್ಕೆ ಎಂದೂ ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಇವನ ದರ್ಪವನ್ನು ನೋಡಿ ಜನರು ಥರಥರ ನಡುಗುತ್ತಿದ್ದರು. ಇವನಿಗೆ ಮಗಧ ದೇಶದ ಅರಸನಾದ ಜರಾಸಂಧನ ಹೊಟ್ಟೆಯಿಂದ ಹುಟ್ಟಿದ ಅಸ್ತಿ ಮತ್ತು ಪ್ರಾಪ್ತಿ ಎಂಬ ಇಬ್ಬರು ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಟ್ಟಿತ್ತು. ಆ ಕಾಲಕ್ಕೆ ಜರಾಸಂಧ ಅರಸನು ಬಹಳ ಬಲಾಢ್ಯನಿದ್ದು ಹಿಂದುಸ್ಥಾನದ ಸಾರ್ವಭೌಮ ಪದವಿಯನ್ನು ಪಡೆದಿದ್ದನು. ಆದುದರಿಂದ ಕಂಸನು ತನ್ನ ಮಾವನಾದ ಜರಾಸಂಧನ ಸಹಾಯದ ಬಲದಿಂದ ಬಹಳ ಸೊಕ್ಕಿಗೆ ಬಂದು ತನ್ನ ಹಡೆದ ತಂದೆಯಾದ ಉಗ್ರಸೇನನನ್ನು ಕಾರಾಗೃಹದಲ್ಲಿಟ್ಟು ಅನೀತಿಯಿಂದಲೂ, ಅನ್ಯಾಯದಿಂದಲೂ ರಾಜ್ಯವಾಳಹತ್ತಿದನು. ಈ ಅವನ ಅನೀತಿಯ ಮತ್ತು ಅನ್ಯಾಯದ ಕೃತ್ಯಗಳಿಗೆ ಮುಖ್ಯವಾಗಿ ಕೇಶಿ ಮತ್ತು ಸುನಾಮಾ ಎಂಬ ಇಬ್ಬರು ತಮ್ಮಂದಿರು ಸಹಾಯಕರಿದ್ದರು. ಇದರಿಂದ ಅವರಿಗೆ ಅಲ್ಪ ಸ್ವಲ್ಪ ಲಾಭವಾಗಿದ್ದರೂ ಅವನ ಉಳಿದ ತಮ್ಮಂದಿರಿಗೆ ಅಥವಾ ಅನುಯಾಯಿಗಳಿಗೆ ಅವನ ದುಷ್ಟ, ಕ್ರೂರ ಮತ್ತು ಗರ್ವಿಷ್ಠ ಸ್ವಭಾವದ ಮೂಲಕ ತಾದೃಶವಾದರೂ ಲಾಭವು ಅಥವಾ ಸುಖವು ಇರಲಿಲ್ಲ.

ಶೂರಸೇನ ದೇಶದಲ್ಲಿ ಭೌಮ, ಕುಕುರ, ಅಂಧಕ, ದಾಶಾರ್ಹ, ಯಾದವ, ವೃಷ್ಣಿ ಮತ್ತು ಭೋಜ ಎಂಬ ಏಳುಮಂದಿ ಚಂದ್ರವಂಶದ ಕ್ಷತ್ರಿಯರು ವಾಸಿಸುತ್ತಿದ್ದರು. ಅವರಲ್ಲಿ ಯಾದವರು ಮುಖ್ಯರಿದ್ದು ವಸುದೇವನೆಂಬ ಯಾದವ ಸರದಾರನು ಭೋಜರಾಜನ ಮಾಂಡಲಿಕನಿದ್ದನು. ಅವನು ಯಮುನಾ ನದಿಯ ಆಚೆಯ ದಂಡೆಗೆ ಗೋವರ್ಧನವೆಂಬ ಗುಡ್ಡದ ಸಮೀಪದಲ್ಲಿ ತನಗೆ ಉಂಬಳಿ ಹಾಕಿಕೊಟ್ಟ ಊರಲ್ಲಿ ಇರುತ್ತಿದ್ದನು. ಯಾದವರಿಗೆ ರಾಜ್ಯಭಾರ ಮಾಡುವ ಅಧಿಕಾರವಿಲ್ಲೆಂಬ ತಿಳುವಳಿಕೆಯಿಂದ ಯಾದವವಂಶದವರು ಬಹುಶಃ ಗೋಪಾಲಕರ ಉದ್ಯೋಗವನ್ನು ಮಾಡುತ್ತಿದ್ದರು. ಶೂರಸೇನ ದೇಶದ ಭೂಮಿಯಲ್ಲಿ ಆಕಳುಗಳಿಗೆ ಮೇಯಿಸಲಿಕ್ಕೆ ಬಹಳ ಉತ್ತಮವಾದ ಹುಲ್ಲು ಬೆಳೆಯುತ್ತಿದ್ದುದರಿಂದ ಯಾದವರಲ್ಲಿ ಅನೇಕ ಜನರು ಅಲ್ಲಿ ಆಕಳುಗಳನ್ನು ಸಾಕಿಕೊಂಡು ಹಾಲು ಮೊಸರು ಬೆಣ್ಣೆ ತುಪ್ಪಗಳ ಮಾರಾಟದಿಂದ ತಮ್ಮ ಚರಿತಾರ್ಥವನ್ನು ನಾಗಿಸಿಕೊಳ್ಳುತ್ತ ಆನಂದದಿಂದ ಇರುತ್ತಿದ್ದರು.

ದುಷ್ಟರು ತಾವು ಮಾಡುವ ಅನ್ಯಾಯದ ಅಥವಾ ಪಾಪದ ಕೃತ್ಯಗಳಿಗೆ ಶಿಷ್ಟರು ಬೆಂಬಲವನ್ನು ಕೊಡುವದಿಲ್ಲೆಂದು ಅಥವಾ ತಮ್ಮ ಕೃತ್ಯಗಳನ್ನು ಕಂಡು ಸೇರುವದಿಲ್ಲೆಂದು ಶಿಷ್ಟರಕೂಡ ನಿಷ್ಕಾರಣವಾಗಿ ದ್ವೇಷ ಮಾಡುತ್ತಾರೆ. ಒಂದು ಪಾಪದಿಂದ ಅನೇಕ ಪಾಪದ ಕಲ್ಪನೆಗಳು ಅವರ ಮನಸ್ಸಿನಲ್ಲಿ ಹುಟ್ಟಿ ಅವರ ಪಾಪದ ಕೃತ್ಯಗಳು ಬೆಳೆಯುತ್ತ ಹೋಗುತ್ತವೆ. ಇದೇ ಪ್ರಕಾರ ಕಂಸನ ಸ್ಥಿತಿಯಾದರೂ ಆಯಿತು. ಉಗ್ರಸೇನನ ಪಕ್ಷದಿಂದ ತನ್ನ ಕೂಡ ಯಾರು ಯಾರು ವೈರತ್ವವನ್ನು ಮಾಡುವರೆಂದು ಅವನು ತನ್ನ ಮನಸ್ಸಿನಲ್ಲಿ ವಿಚಾರ ಮಾಡುತ್ತಿರಲಾಗಿ ಅವನ ಮನಸ್ಸಿನೊಳಗೆ ವಸುದೇವನ ಹೆಸರು ಸ್ವಾಭಾವಿಕವಾಗಿ ಬಂತು. ಉಗ್ರಸೇನನ ತಮ್ಮನಾದ ದೇವಕನ ಮಗಳಾದ ದೇವಕಿಯು ವಸುದೇವನ ಹೆಂಡತಿಯಿದ್ದಳು. ಆದುದರಿಂದ ಉಗ್ರಸೇನನನ್ನು ಬಂಧಮುಕ್ತ ಮಾಡಲಿಕ್ಕೆ ತನ್ನ ಚಿಕ್ಕಪ್ಪನಾದ ದೇವಕನೂ, ದೇವಕನ ಅಳಿಯನಾದ ವಸುದೇವನೂ ಪ್ರಯತ್ನ ಮಾಡದೆ ಇರಲಿಕ್ಕಿಲ್ಲವೆಂದು ಕಂಸನು ಊಹಿಸಿಕೊಂಡು ತನ್ನ ಕೂಡ ಅವರು ದ್ವೇಷಮಾಡುತ್ತಾರೆಂದು ಸಂಶಯಗ್ರಸ್ತನಾದನು. ಈ ಪ್ರಕಾರ ಕಂಸನಿಗೆ ಸಂಶಯಪಿಶಾಚಿಯು ಬಡಕೊಂಡಿರಲಾಗಿ ಒಂದುಸಾರೆ ದೇವಋಷಿಯಾದ ನಾರದಮುನಿಯು ಅವನ ಕಡೆಗೆ ಬಂದು "ಕಂಸಾ, ನೀನು ಬಹಳ

ಉನ್ಮತ್ತನಾಗಿ ಪ್ರಜೆಗಳ ಕೂಡ ಅನ್ಯಾಯದಿಂದ ನಡೆಯುವದಲ್ಲದೆ ನಿನ್ನ ಪ್ರತ್ಯಕ್ಷ ತಂದೆಯನ್ನು ಕಾರಾಗೃಹದಲ್ಲಿಟ್ಟಿರುವಿಯೆಂತಲೂ, ನಿನಗೆ ನಿನ್ನ ಮಾವನಾದ ಜರಾಸಂಧನ ಆಶ್ರಯವಿರುವದರಿಂದ ನೀನು ಅಜಿಂಕ್ಯನಾಗಿರುವಿಯೆಂತಲೂ ದೇವತೆಗಳ ಸಭೆಯಲ್ಲಿ ಮಾತುಗಳು ನಡೆದು, ನಿನ್ನನ್ನು ಸಂಹಾರ ಮಾಡುವ ದಕ್ಕಾಗಿ ಶ್ರೀ ವಿಷ್ಣುವು ವಸುದೇವದೇವಕಿಯರ ಹೊಟ್ಟೆಯಿಂದ ಅವರ ಎಂಟನೇ ಮಗನಾಗಿ ಹುಟ್ಟಬೇಕೆಂದು ನಿರ್ಣಯವಾಗಿರುತ್ತದೆ. ಆದುದರಿಂದ ನೀನು ಒಳ್ಳೇ ಎಚ್ಚರಿಕೆಯಿಂದ ನಡೆ” ಎಂದು ಹೇಳಿದನು. ನಾರದನ ಬಾಯಿಂದ ಇಷ್ಟು ಬಂದದ್ದೇ ಸಾಕಾಯಿತು. ಇದನ್ನು ಕೇಳಿದ ಕ್ಷಣವೇ ಆ ದುಷ್ಟ ಕಂಸನು ನಾರದನನ್ನುದ್ದೇಶಿಸಿ-“ ದೇವಕಿಯ ಎಂಟನೇ ಮಗನು ನನ್ನನ್ನು ಕೊಲ್ಲುವ ಮುಂಚೆ ನಾನೇ ಅವನನ್ನು ಅವನು ಹುಟ್ಟಿದ ಕೂಡಲೆ ಕೊಂದು ಬಿಡುತ್ತೇನೆ. ದೇವಕಿಗೆ ಮಕ್ಕಳು ಹುಟ್ಟಿದ ಕೂಡಲೆ ಆ ಯಾವತ್ತರನ್ನು ನಾನು ಕೊಂದುಬಿಟ್ಟರೆ ಎಂಟನೆಯವನು ಯಾವನು, ಒಂಬತ್ತನೆಯವನು ಯಾವನು ಎಂಬುವ ಸಂಶಯವೇ ಉಳಿಯಲಾರದು. ಒಂದು ವೇಳೆ ವಿಷ್ಣುವು ತಾನು ದೇವಕಿಯ ಎಂಟನೇ ಮಗನಾಗಿ ಹುಟ್ಟುವೆನೆಂದು ಹೇಳಿ ಅದಕ್ಕಿಂತ ಮೊದಲೇ ಹುಟ್ಟಿ ನನ್ನನ್ನು ವಂಚಿಸಬಹುದು. ಆದುದರಿಂದ ನಾನೇ ದೇವಕಿಯ ಎಲ್ಲ ಮಕ್ಕಳನ್ನು ಕೊಂದು ಆ ಕಪಟನಾಟಕ ಸೂತ್ರಧಾರನನ್ನು ವಂಚಿಸುತ್ತೇನೆ” ಎಂದು ನುಡಿದು ಗಹಿ ಗಹಿಸಿ ನಕ್ಕನು. ಈ ಕಂಸನ ಭಯಂಕರವಾದ ವಿಚಾರವನ್ನು ಕೇಳಿ ನಾರದನು ತನ್ನ ಮನಸ್ಸಿನಲ್ಲಿ ಹಿರಿ ಹಿರಿ ಹಿಗ್ಗಿದನು. ತನ್ನ ಜಗಳ ಹಚ್ಚುವ ಕೆಲಸವು ಉತ್ಕೃಷ್ಟವಾಗಿ ಸಿದ್ಧಿಗೆ ಹೋದದ್ದಲ್ಲದೆ ಕಂಸನ ನೂರು ವರ್ಷಗಳು ನೂರು ವರ್ಷಗಳಾದ ಮೇಲೆ ತುಂಬುವದಕ್ಕಿಂತ ಹತ್ತು ಹನ್ನೆರಡು ವರ್ಷಗಳಲ್ಲಿಯೇ ಅವನ ಪಾಪಗಳಿಂದ ತುಂಬುವವೆಂದು ತಿಳಿದು “ ನೀನು ದೇವತೆಗಳಿಗಿಂತ ಬಹಳ ಬುದ್ಧಿಶಾಲಿಯು ” ಎಂದು ಕಂಸನಿಗೆ ಶ್ಲಾಘನ ಮಾಡಿ ದೇವಲೋಕಕ್ಕೆ ಹೊರಟು ಹೋದನು. ಇತ್ತಲಾ ಕಂಸನು ವಸುದೇವ ದೇವಕಿಯರನ್ನು ಗೋವರ್ಧನದಿಂದ ಕರೆಸಿ ಅವರಿಗೆ ಸಂಕೋಲೆಗಳನ್ನು ಬಿಗಿದು ಕಾರಾಗೃಹದಲ್ಲಿಟ್ಟನು. ಆ ಮೇಲೆ ದುಷ್ಟನಾದ ಕಂಸನು ತನ್ನ ತಂಗಿಯಾದ ದೇವಕಿಯಿಂದ ಹುಟ್ಟಿದ ಪ್ರತಿಯೊಂದು ಕೂಸನ್ನು ಅವಳ ಕೈಯಿಂದ ಕಸದುಕೊಂಡು ಅದನ್ನು ಕಲ್ಲಿನ ಮೇಲೆ ಅಪ್ಪಳಿಸಿ ಕೊಂದನು. ಈ ಪ್ರಕಾರ ಅವನು

ದೇವಕಿಯು ಆರುಮಂದಿ ಮಕ್ಕಳನ್ನು ಕೊಂದ ತರುವಾಯ ಮುಂದೆ ಏಳನೇ ಸಾರೆ ಅವಳು ಬಸುರಾಗಲು ಅವಳು ತನ್ನ ಅಣ್ಣನ ದುಷ್ಟತನದ ಸಲುವಾಗಿ ಬಹಳ ಹೆದರಿ ಹೊಟ್ಟೆಬೇನೆ ಹಚ್ಚಿ ಕೊಂಡಿದ್ದರಿಂದ ಆ ಕೂಸು ಅವಳ ಹೊಟ್ಟೆ ಯಲ್ಲಿಯೇ ಕರಗಿ ಹೋಯಿತು. ಇದೇ ಸಮಯಕ್ಕೆ ವಸುದೇವನ ಹಿರೆಹೆಂಡತಿ ಯಾದ ರೋಹಿಣಿಯು ಸಹ ಬಸುರಾದಳು. ಒಂದುವೇಳೆ ಕಂಸನು ರೋಹಿ ಣಿಯು ಹೊಟ್ಟೆಯಿಂದ ಹುಟ್ಟಿದ ಮಗನನ್ನು ಸಹ ಕೊಂದಾನೆಂಬ ಅಂಜಿಕೆ ಯಿಂದ ವಸುದೇವನು ಅವಳನ್ನು ಗೋಕುಲದೊಳಗೆ ತನ್ನ ಜೀವದ ಗೆಳೆಯನಾದ ನಂದಗೋಪಾಲಕನ ಮನೆಯಲ್ಲಿ ಇಟ್ಟುಬಂದನು. ಆ ಮೇಲೆ ಕೆಲವು ದಿವಸ ಗಳ ನಂತರ ದೇವಕಿಯು ಎಂಟನೇ ಸಾರೆ ಬಸುರಾದಳು.

## ಶ್ರೀ ಕೃಷ್ಣಜನ್ಮ.

ಈ ವರ್ತಮಾನವು ಕಂಸನಿಗೆ ಮುಟ್ಟಲಾಗಿ ದೇವಕಿಯು ಯಾವಾಗ ಹಡೆಯುವಳೆಂಬುದನ್ನು ತಿಳಿದುಕೊಳ್ಳುವದಕ್ಕಾಗಿ ಅವನು ಕಾರಾಗೃಹದ ಸುತ್ತ ಲು ಚನ್ನಾಗಿ ಕಾವಲು ಇಡಿಸಿ ಕಾರಾಗೃಹದಿಂದ ಯಾರೂ ಹೊರಗೆ ಹೋಗ ದಂತೆ ಕಟ್ಟಪ್ಪಣೆಯನ್ನು ಮಾಡಿದನು. ಮುಂದೆ ದೇವಕಿಯು ಒಂಬತ್ತು ತಿಂಗಳು ಮುಗಿಯುವ ಮುಂಚಿತವಾಗಿ ಎಂಟನೇ ತಿಂಗಳೊಳಗೆ ಅಕಸ್ಮಾತ್ತಾಗಿ ಹಡೆದಳು. ಎಲ್ಲರೂ ಗೊರ್ರೆಂದು ನಿದ್ರೆ ಮಾಡುವ ಮಧ್ಯರಾತ್ರಿಯ ಹೊತ್ತಿನಲ್ಲಿ ಶ್ರಾವಣ ವದ್ಯ ಅಷ್ಟಮಿಯ ದಿವಸ ಮಳೆಯು ಜಗ್ಗಿ ಸುರಿಯುವಾಗ ಶ್ರೀಕೃಷ್ಣನ ಜನ್ಮ ವಾಯಿತು. ಆ ದಿವ್ಯ ಬಾಲಮೂರ್ತಿಯಲ್ಲಿ ಶ್ರೀವತ್ಸಾದಿ ದಿವ್ಯ ಚಿಹ್ನಗಳು ಇರುವದನ್ನು ನೋಡಿ ಶ್ರೀಹರಿಯು ಅವತಾರವಾಯಿತೆಂದು ವಸುದೇವ ದೇವಕಿ ಯರು ಬಹಳ ಆನಂದಪಟ್ಟರು. ಆ ಮೇಲೆ ದೇವಕಿಯು ಪ್ರೇಮಾತಿಶಯದಿಂದ ಬಾಲಕನನ್ನು ತನ್ನ ಎದೆಗೆ ಅವಚಿಕೊಂಡು ವಸುದೇವನಿಗೆ—“ನೀವು ಹೇಗಾ ದರೂ ಮಾಡಿ ಈ ಕಂದಮ್ಮನ ಜೀವ ಉಳಿಸಿಕೊಳ್ಳಬೇಕು” ಎಂದು ಅಂಗ ಲಾಚಿ ಹೇಳಿದಳು. ವಸುದೇವನಿಗಾದರೂ ಆ ಬಾಲಕನ ಜೀವ ಉಳಿಸಬೇಕೆಂಬ ಉತ್ಕಟವಾದ ಇಚ್ಛೆಯು ಉತ್ಪನ್ನವಾಯಿತು. ಆಗ ಅವನು ವಿಜಯ ಮುಹೂರ್ತ ದಲ್ಲಿ ಹುಟ್ಟಿದ ಆ ಯಶೋವಂತನಾದ ಬಾಲಕನನ್ನು ಅವಸರದಿಂದ ಎತ್ತಿಕೊಂ ಡು ಅನುಮಾನ ಮಾಡದೆ ಕಾರಾಗೃಹದ ಹೊರಗೆ ಬಂದನು. ಆಗ ಅಲ್ಲಿಯ

ಕಾವಲುಗಾರರಿಗೂ ನಗರನಿವಾಸಿಗಳಿಗೂ ಗಾಢ ನಿದ್ರೆಯುಹತ್ತಿತ್ತು. ಇದ ಲ್ಲದೆ ಆ ಕಾಲಕ್ಕೆ ಒಂದೇ ಸವನೆ ಮಳೆಯು ಸುರಿಯುತ್ತಿತ್ತು. ಆದುದರಿಂದ ಮಳೆಯ ಸಪ್ಪಳದಲ್ಲಿ ಯಾರಿಗೂ ಬಾಗಿಲ ತೆರೆಯುವ ಸಪ್ಪಳವು ಕೇಳಿಸಲಿಲ್ಲ. ಈ ಪ್ರಕಾರ ವಸುದೇವನು ನಗರದ ಮಾರ್ಗಗಳಿಂದ ಸುರಕ್ಷಿತವಾಗಿ ಯಮುನಾ ನದಿಗೆ ಬಂದನು. ಆಗ ಯಮುನಾ ನದಿಯು ತುಂಬಿ ಹರಿಯುತ್ತಿತ್ತು. ಆ ನದಿ ಯ ನೀರಿಗೆ ಶ್ರೀಕೃಷ್ಣನ ಕಾಲು ಮುಟ್ಟಿದ ಕೂಡಲೆ ಅದರ ನೀರು ಕಡಿಮೆ ಯಾದುದರಿಂದ ವಸುದೇವನು ಆ ನದಿಯನ್ನು ದಾಟಿ ನಂದನಿರುತ್ತಿದ್ದ ಗೋ ಕುಲಕ್ಕೆ ಬಂದು ಮುಟ್ಟಿದನು. ಅಲ್ಲಿ ನಂದನ ಹೆಂಡತಿಯಾದ ಯಶೋ ದೆಯು ಅಕಸ್ಮಾತ್ತಾಗಿ ಒಂದು ಹುಡಿಗೆಯನ್ನು ಹಡೆದಿದ್ದಳು. ಆಗ ವಸು ದೇವನು ಶ್ರೀಕೃಷ್ಣನನ್ನು ಯಶೋದೆಯ ಹಾಸಿಗೆಯ ಮೇಲೆ ಮಲಗಿಸಿ, ಅಲ್ಲಿ ಮಗಿಲಕೊಂಡಿದ್ದ ಹುಡಿಗೆಯನ್ನು ತಾನು ಎತ್ತಿಕೊಂಡು ತಾನು ಬಂದ ದಾರಿಯಿಂದ ತಿರುಗಿ ಕಾರಾಗೃಹಕ್ಕೆ ಬಂದು ಮುಟ್ಟಿದನು. ಇಷ್ಟಾಗಲಿಕ್ಕೆ ಸುಮಾರು ಎರಡು ಮೂರು ತಾಸುಗಳು ಹಿಡಿದಿರಬಹುದು. ಎಲ್ಲವು ನಿಶ್ಯಬ್ದ ವಾಗಿತ್ತು. ಅಲ್ಲಿ ಯಾರಿಗೂ ಏನೂ ಗೊತ್ತಾಗಿದ್ದಿಲ್ಲ. ಬೆಳಗುಮುಂಜಾನೆ ಕಾರಾಗೃಹದ ಸೇವಕರು ಎಚ್ಚರಾಗಲಿಕ್ಕೆ ಆರಂಭ ಮಾಡಲು ವಸುದೇವನು ಅಂಜಿಕೆಯಿಂದ ತನಗೆ ಹೆಣ್ಣು ಹುಡಿಗಿಯು ಹುಟ್ಟಿದ ವರ್ತಮಾನವನ್ನು ಕಂಸ ನಿಗೆ ಹೇಳಿ ಕಳಿಸಿದನು. ಇದನ್ನು ಕೇಳಿ ಕಂಸನು ಅವಸರದಿಂದ ಎದ್ದು ದೇವ ಕಿಯು ಎಂಟನೇ ತಿಂಗಳದಲ್ಲಿ ಹಡೆದದ್ದಕ್ಕೆ ಆಶ್ಚರ್ಯಗೊಂಡು ವಸುದೇವನು ಇದ್ದ ಕಾರಾಗೃಹಕ್ಕೆ ತ್ವರೆಯಿಂದ ಬಂದನು. ಆಗ ದೇವಕಿಯು ಕಂಸನಿಗೆ— "ಅಣ್ಣಾ, ಈ ಕೂಸು ಹೆಣ್ಣಿರುವದು. ಇದನ್ನು ವ್ಯರ್ಥವಾಗಿ ಕೊಲ್ಲಬೇಡ" ಎಂದು ಅವನಿಗೆ ಬಹಳ ವಿನಯದಿಂದ ಹೇಳಿಕೊಂಡಳು. ಆದರೂ ಅವನು ಅವಳ ಮಾತನ್ನು ಲಕ್ಷಿಸದೆ ಅವಳ ಕೈಯಿಂದ ಆ ಹಸಗೂಸನ್ನು ಜಗ್ಗಿ ಕಸ ಕೊಂಡು—"ಇದು ಹೆಣ್ಣು ಕೂಸು ಇದ್ದಲ್ಲಿ ಇದನ್ನು ಕೊಲ್ಲಲಿಕ್ಕೆ ಏನೇನೂ ಅಡ್ಡಿಯಿಲ್ಲ. ಇದು ಮೊದಲೇ ಸತ್ತಿರುತ್ತದೆ" ಎಂದು ಹೇಳಿ ತನ್ನ ಮುಂಚಿನ ಪದ್ಧತಿಯಂತೆ ಆ ಕೂಸನ್ನು ಕಲ್ಲಿನ ಮೇಲೆ ಅಪ್ಪಳಿಸಿದನು. ಆ ಕ್ಷಣವೇ ಆ ಮೃತ ಶರೀರದೊಳಗಿಂದ ಆದಿಶಕ್ತಿಯು ಉತ್ಪನ್ನಳಾಗಿ ಅಂತರಿಕ್ಷಕ್ಕೆ ಹೋದಳು.

ಅವಳ ತಲೆಯ ಮೇಲೆ ಒಂದು ಕಿರೀಟವಿದ್ದು ಅವಳ ತಲೆಯ ಕೂದಲುಗಳು ಹರವಿದ್ದವು. ಅವಳ ಮೋರೆಯು ಚಂದ್ರನಂತೆ ಕಾಂತಿಯುಳ್ಳದ್ದಿದ್ದು ಅವಳ ಶರೀರವು ಬಂಗಾರದ ಬಣ್ಣದ್ದಿತ್ತು. ಅವಳಿಗೆ ನಾಲ್ಕು ಕೈಗಳು ಇದ್ದು ಆ ಕೈಗಳಲ್ಲಿ ಅವಳು ದಿವ್ಯವಾದ ಆಯುಧಗಳನ್ನು ಹಿಡಿದಿದ್ದಳು. ಈ ಪ್ರಕಾರ ಆ ಕಗ್ಗತ್ತಲೆಯ ರಾತ್ರಿಯಲ್ಲಿ ದೇದೀಪ್ಯಮಾನಳಾದ ದೇವಿಯು ಅಂತರಿಕ್ಷಕ್ಕೆ ಹೋಗುವಾಗ ಕಂಸನನ್ನು ಉದ್ದೇಶಿಸಿ—“ ಎಲಾ ಮೂರ್ಖಾ ಕಂಸಾ, ನಿನ್ನ ಶತ್ರುವು ಈ ಮೊದಲೇ ಹುಟ್ಟಿದ್ದು ಎರಡನೇ ಕಡೆಗೆ ಸುರಕ್ಷಿತವಾಗಿರುವನು. ಇನ್ನು ಮೇಲೆ ಎರಡನೆಯವರನ್ನು ಸುಮ್ಮನೆ ಕೊಲ್ಲಬೇಡ. ನಿನ್ನ ಶತ್ರುವು ನಿನ್ನನ್ನು ಕೊಲ್ಲುವಾಗ ನಾನು ಬಂದು ನನ್ನ ತೀಕ್ಷ್ಣವಾದ ಉಗುರುಗಳಿಂದ ನಿನ್ನ ಶರೀರವನ್ನು ಹರಿದು ನಿನ್ನ ಬಿಸಿ ಬಿಸಿ ರಕ್ತವನ್ನು ಕುಡಿಯುವೆನು” ಎಂದು ಹೇಳಿ ಅಂತರ್ಧಾನ ಹೊಂದಿದಳು. ಇದನ್ನು ಕೇಳಿ ಕಂಸನು ಬಹಳ ಅಂಜಿದ್ದಲ್ಲದೆ ಪಶ್ಚಾತ್ತಾಪಪಟ್ಟನು. ಆಗ ಅವನು ತನ್ನ ತಂಗಿಗೆ ವಿನಯದಿಂದ—“ ತಂಗೀ, ನಾನು ನಿನ್ನ ಮಕ್ಕಳನ್ನು ವ್ಯರ್ಥವಾಗಿ ಕೊಂದದ್ದಕ್ಕಾಗಿ ನನ್ನನ್ನು ಕ್ಷಮಿಸು. ನಿನ್ನ ಮಕ್ಕಳು ತಮ್ಮ ಕರ್ಮಾನುಸಾರವಾಗಿ ಸತ್ತದ್ದಕ್ಕೋಸ್ಕರ ನೀನು ಶೋಕಿಸಬೇಡ. ನಾನು ನಿನ್ನನ್ನು ಬಂಧಮುಕ್ತ ಮಾಡುತ್ತೇನೆ” ಎಂದು ಹೇಳಿ ವಸುದೇವ ದೇವಕಿಯರಿಬ್ಬರನ್ನು ಕಾರಾಗೃಹದಿಂದ ಬಿಡುಗಡೆ ಮಾಡಿದನು.

ರೋಹಿಣಿಯು ಗೋಕುಲದೊಳಗೆ ನಂದನ ಮನೆಯಲ್ಲಿ ಮಗನನ್ನು ಹಡೆದ ಸುದ್ದಿಯು ವಸುದೇವನಿಗೆ ಮೊದಲೇ ಗೊತ್ತಾಗಿತ್ತು. ನಂದನ ಮನೆಯಲ್ಲಿ ತನ್ನ ಇನ್ನೊಬ್ಬ ಮಗನು ಸಹ ಇರುತ್ತಾನೆಂಬ ಸುದ್ದಿಯನ್ನು ವಸುದೇವನು ಯಾರ ಮುಂದೂ ಉಸುರಿದ್ದಿಲ್ಲ. ನಂದನಿಗೂ ಯಶೋದೆಗೂ ತಮಗೆ ಹೊಸದಾಗಿ ಹುಟ್ಟಿದ ಮಗನು ವಸುದೇವನ ಮಗನೆಂಬುದು ಗೊತ್ತಾಗಿದ್ದಿಲ್ಲ. ಯಶೋದೆಯು ರಾತ್ರಿಯಲ್ಲಿ ಹಡೆದ ಬಳಿಕ ಇನ್ನೂ ಪ್ರಸವಮೂರ್ಛೆಯಲ್ಲಿರುವಾಗಲೇ ವಸುದೇವನು ಭಗವನ್ಮೂರ್ತಿಯಾದ ತನ್ನ ದಿವ್ಯ ಬಾಲಕನನ್ನು ಅವಳ ಹಾಸಿಗೆಯ ಮೇಲೆ ಮಲಗಿಸಿ ಅವಳು ಹಡೆದಂಥ ಹೆಣ್ಣು ಕೂಸನ್ನು ತೆಗೆದುಕೊಂಡು ಹೋದ ಕಾರಣ ಯಶೋದೆಗೆ ಸಹ ನಿಜಸ್ಥಿತಿಯು ಗೊತ್ತಾಗಲಿಲ್ಲ. ಯಶೋದೆಯು ಪ್ರಸವ ಮೂರ್ಛೆಯಿಂದ ಎಚ್ಚತ್ತ ಬಳಿಕ ತನ್ನ

ಮಗ್ಗಲಲ್ಲಿ ಬಾಲಕನು ಮಲಗಿಕೊಂಡದ್ದನ್ನು ಕಂಡು ತನಗೆ ಪುತ್ರರತ್ನವು ಪ್ರಾಪ್ತವಾಯಿತೆಂದು ಬಹಳ ಆನಂದಪಟ್ಟಳು. ಆವಳ ಗಂಡನಾದ ನಂದನಾದರೂ ಪರಮ ಹರ್ಷಿತನಾದನು. ಆಗ ಅವರಿಬ್ಬರೂ ಬೆಳಗಾದ ಮೇಲೆ ಗೋಕುಲದಲ್ಲಿ ಸಕ್ಕರಿಯನ್ನು ಹಂಚಿದರು. ಜನರಾದರೂ ಅವರ ಮನೆಗೆ ಹೋಗಿ ಅವರ ಧನ್ಯವಾದವನ್ನು ಮಾಡಿದರು. ಗೋಪಾಲಕರ ಸ್ತ್ರೀಯರು ತಮ್ಮ ಉತ್ತಮೋತ್ತಮವಾದ ಸೀರೆಗಳನ್ನು ಉಟ್ಟುಕೊಂಡು ಹಾಗೂ ತಮ್ಮ ತಲೆಯ ಮೇಲೆ ಕಲಶಗಳನ್ನು ಇಟ್ಟುಕೊಂಡು ನಂದನ ಮನೆಗೆ ಬಂದು ಪುತ್ರೋತ್ಸವದ ಹಾಡುಗಳನ್ನು ಸುಸ್ವರದಿಂದ ಹಾಡಿದರು. ನಂದನು ಊರವರಿಗೆಲ್ಲ ಊಟಕ್ಕೆ ಹಾಕಿ ಬಹಳ ಉತ್ಸವವನ್ನು ಮಾಡಿದನು. ಊರವರು ಹುಡುಗನಿಗೆ ಅಂಗಿ ಟೊಪ್ಪಿಗೆಗಳನ್ನು ಕೊಟ್ಟು ನಂದನಿಗೂ ಯಶೋದೆಗೂ ಉಡುಗರೆ ಮಾಡಿ ಹುಡುಗನ ಹೆಸರನ್ನು "ಕೃಷ್ಣ"ನೆಂದು ಇಟ್ಟರು. ಈ ಹುಡುಗನು ಶ್ಯಾಮವರ್ಣದವನಿದ್ದರೂ ಬಹಳ ಸುಂದರನೂ, ಮೋಹಕನೂ ಇದ್ದನು. ಇವನನ್ನು ಯಶೋದೆಯು ಯಾವಾಗಲು ತನ್ನ ಬಗಲೊಳಗೆ ಎತ್ತಿಕೊಂಡಿರುತ್ತಿದ್ದಳು. ಅವಳಿಗೆ ತನ್ನ ಬಾಲಕನನ್ನು ಬಗಲೊಳಗೆ ಎತ್ತಿಕೊಂಡಿರುವದರಿಂದಲೇ ಬಹಳ ಸೌಖ್ಯವೆನಿಸುತ್ತಿತ್ತು. ಅವಳು ಈ ತನ್ನ ಸುಂದರ ಸುಕುಮಾರನನ್ನು ಒಂದು ಕ್ಷಣಹೊತ್ತು ಸಹ ತನ್ನ ಬಗಲೊಳಗಿಂದ ಕೆಳಗೆ ಇಳಿಸುತ್ತಿದ್ದಿಲ್ಲ.

ಕೃಷ್ಣನು ಮೂರು ನಾಲ್ಕು ತಿಂಗಳದವನು ಆದ ತರುವಾಯ ನಂದನು ತನ್ನ ಹೆಂಡತಿಯನ್ನೂ, ಮಗನನ್ನೂ ಕರಕೊಂಡು ರಾಜನಿಗೆ ಕರಭಾರವನ್ನು ಕೊಡುವದಕ್ಕಾಗಿ ಮಥುರೆಗೆ ಹೋಗಿದ್ದನು. ನಂದನು ಬಂದ ವರ್ತಮಾನವು ವಸುದೇವನಿಗೆ ಗೊತ್ತಾದ ಕೂಡಲೆ ಅವನು ನಂದನನ್ನು ಏಕಾಂತದಲ್ಲಿ ಕಾಣಲಿಕ್ಕೆ ಹೋದನು. ಆಗ ಆ ಇಬ್ಬರು ಒಬ್ಬರಿಗೊಬ್ಬರು ಪ್ರೇಮಾಲಿಂಗನ ಕೊಟ್ಟು ತಮ್ಮ ಸುಖದುಃಖದ ಸಂಗತಿಗಳನ್ನು ಮಾತಾಡಿದ ಬಳಿಕ ವಸುದೇವನು ನಂದನಿಗೆ—"ನಂದಾ, ನೀನು ನಿನ್ನ ಮಗನನ್ನು ಕರಕೊಂಡು ಬೇಗನೆ ಊರಿಗೆ ಹೊರಟು ಹೋಗು. ಇಲ್ಲಿ ಬಹಳ ಹೊತ್ತು ನಿಂತುಕೊಳ್ಳಬೇಡ. ಸಣ್ಣ ಹುಡುಗರಿಗೆ ಅನೇಕ ತರದ ಕುತ್ತುಗಳು ಬರುತ್ತವೆ. ನನಗೆ ರೋಹಿಣಿಯನ್ನು ನಿಮ್ಮ ಮನೆಯಿಂದ ಕರಕೊಂಡು ಬರಲಿಕ್ಕೆ ಇನ್ನೂ ಅನುಕೂಲವಿಲ್ಲ. ಅದು

ದರಿಂದ ನೀನು ರೋಹಿಣಿಯ ಮಗನಾದ ಬಲರಾಮನನ್ನೂ ಯಶೋದೆಯ ಮಗನಾದ ಕೃಷ್ಣನನ್ನೂ ಸರಿಯಾಗಿ ಜೋಪಾನ ಮಾಡು. ನನ್ನ ದೈವದಲ್ಲಿ ಪುತ್ರಸುಖವಿಲ್ಲ. ನಿನಗೆ ಮಾತ್ರ ಅದು ನಿನ್ನ ಸುಕೃತದಿಂದ ಲಭಿಸಿರುತ್ತದೆ. ನೀನು ಧನ್ಯನು" ಎಂದು ಹೇಳಿದನು. ಆಗ ನಂದನು ವಸುದೇವನ ನಿರೂಪವನ್ನು ತೆಗೆದುಕೊಂಡು ತನ್ನ ಹೆಂಡತಿಯಾದ ಯಶೋದೆಯನ್ನೂ, ಮಗನಾದ ಕೃಷ್ಣ ನನ್ನೂ ಕೂಡಿಕೊಂಡು ತನ್ನ ಬಂಡಿಯಲ್ಲಿ ಕುಳಿತು ಹೊರಟು ಹೋದನು.

## ಪೂತನಾ ಪ್ರಾಣಹರಣ.

ನಂದನು ಮಥುರೆಗೆ ಹೋಗಿ ರಾಜನಿಗೆ ಕರಭಾರವನ್ನು ಕೊಟ್ಟು ಗೋ ಕುಲಕ್ಕೆ ತಿರುಗಿ ಬಂದ ತುಸು ದಿವಸಗಳಲ್ಲಿಯೇ ಸಣ್ಣ ಮಕ್ಕಳನ್ನು ಕೊಲ್ಲಲಿಕ್ಕೆ ಕಂಸನಿಂದ ಕಳುಹಿಸ್ಪಟ್ಟ ಪೂತನಾ ರಾಕ್ಷಸಿಯು ಅನೇಕ ಸ್ಥಳಗಳಿಗೆ ಹೋ ಗಿ ಅಲ್ಲಿಯ ಶಿಶುಗಳನ್ನು ಕೊಂದು ತನ್ನ ಮಾಯಾ ಶಕ್ತಿಯಿಂದ ಒಬ್ಬ ಸುಂದರ ಸ್ತ್ರೀಯ ರೂಪವನ್ನು ಧರಿಸಿ ಗೋಕುಲಕ್ಕೆ ಬಂದು ಸಹಜವಾಗಿ ನಂದನ ಮನೆ ಯೊಳಗೆ ಹೋದಳು. ಆಗ ಶ್ರೀಕೃಷ್ಣನು ತನ್ನ ಹಾಸಿಗೆಯ ಮೇಲೆ ಮಲಗಿ ದ್ದನು. ಅವನಿಗೆ ನಿಜವಾಗಿಯೂ ನಿದ್ರೆ ಹತ್ತಿದ್ದಿಲ್ಲ. ಆದರೆ ಶ್ರೀಕೃಷ್ಣನು ಈ ರಾಕ್ಷಸಿಯ ದುಷ್ಟ ಉದ್ದೇಶವನ್ನು ತಿಳಿದವನಾಗಿ ನಿದ್ರೆ ಹತ್ತಿದವನಂತೆ ಕಣ್ಣು ಮುಚ್ಚಿದನು. ಆಗ ಆ ಪೂತನೆಯು ಶ್ರೀಕೃಷ್ಣನ ಮೇಲೆ ಬಹಳ ಪ್ರೀತಿಯನ್ನು ತೋರಿಸಿದಂತೆ ಮಾಡಿ ಅವನನ್ನು ತನ್ನ ತೊಡೆಯ ಮೇಲೆ ತೆಗೆ ದುಕೊಂಡು ಭಯಂಕರವಾದ ವಿಷವು ತುಂಬಿದ ತನ್ನ ಮೊಲೆಯನ್ನು ಅವನ ಬಾಯೊಳಗೆ ಇಟ್ಟಳು. ಅವಳ ಸುಂದರ ರೂಪವನ್ನೂ, ಅವಳ ವೈಭವದ ಉಡಿಗೆ ತೊಡಿಗೆಯನ್ನೂ, ಅವಳು ತುರುಬಿಗೆ ಮುಡಿದ ಹೂವಿನ ಮಾಲೆಯ ನ್ನೂ, ಅವಳ ಮುಂದೆಲೆಯ ಉಂಗುರುಗೂದಲುಗಳನ್ನೂ, ಅವಳ ಮುಗುಳ ನಗೆಯನ್ನೂ ನೋಡಿ ಯಶೋದೆ ರೋಹಿಣಿಯರು ಯಾವಳೋ ಒಬ್ಬ ದೊಡ್ಡ ಯೋಗ್ಯತೆಯ ಸ್ತ್ರೀಯು ಶ್ರೀಕೃಷ್ಣನನ್ನು ನೋಡಲಿಕ್ಕೆ ಬಂದಿರುತ್ತಾಳೆಂದು ತಿಳಿದುಕೊಂಡು ಸುಮ್ಮನೆ ನಿಂತಿದ್ದರು. ಆದರೆ ಶ್ರೀಕೃಷ್ಣನು ತನ್ನ ಬಾಯೊ ಳಗೆ ಪೂತನೆಯು ಈ ಪ್ರಕಾರ ಕಪಟದಿಂದ ವಿಷ ತುಂಬಿದ ಮೊಲೆಯನ್ನು ಇಟ್ಟ ಕೂಡಲೆ ಸಿಟ್ಟಿನಿಂದ ಅವಳ ಮೊಲೆಯನ್ನು ತನ್ನ ವಜ್ರಹಸ್ತದಿಂದ ಗಟ್ಟಿ

ಯಾಗಿ ಒತ್ತಿ, ಅದರೊಳಗಿನ ವಿಷವನ್ನೂ, ರಕ್ತವನ್ನೂ ಕೂಡಿಯೇ ಹೀರಿಬಿಟ್ಟನು. ಈ ಪ್ರಕಾರ ಶ್ರೀಕೃಷ್ಣನು ಪೂತನೆಯು ಮೊಲೆಯನ್ನು ಕುಡಿಯುವಾಗ ಅವಳ ಯಾವತ್ತು ಮರ್ಮಸ್ಥಾನಗಳಿಗೆ ಪೀಡನೆಯಾದ್ದರಿಂದ ಅವಳು-"ಇನ್ನು ಸಾಕಪ್ಪಾ ಸಾಕು, ಬಿಡು ಬಿಡು" ಎಂದು ಒದರಾಡಿ, ಜೋರನೆ ಬೆವತು, ಕಣ್ಣು ಬೆಳ್ಳಗೆ ಮಾಡಿ, ಕಸವಿಸಿಪಡುತ್ತ ಪ್ರಾಣವನ್ನು ಬಿಟ್ಟಳು.

ಈ ಇಬ್ಬರು ಹುಡುಗರು ಸಣ್ಣವರಿದ್ದಾಗ್ಗೆ ಅವರ ಬಾಲಲೀಲೆಗಳನ್ನು ನೋಡಿ ಅವರ ತಂದೆತಾಯಿಗಳೂ, ಗೋಕುಲದ ಯಾವತ್ತು ಜನರೂ ಬಹಳ ಆನಂದಪಡುತ್ತಿದ್ದರು. ಈ ಹುಡುಗರು ತೊಟ್ಟಿಲ ಬಿಟ್ಟು ನೆಲದ ಮೇಲೆ ಕೂಡ್ರಲಿಕ್ಕೆ ಹತ್ತಿದ ಬಳಿಕ ಅಂಬೇಗಾಲು ಹಚ್ಚಿ ಸರಿಯುತ್ತ ಸರಿಯುತ್ತ ದನಗಳನ್ನು ಕಟ್ಟಿದ ಹಕ್ಕಿಯೊಳಗೆ ಹೋಗಿ ತಮ್ಮ ಮೈಯನ್ನು ಗೋಮಯ ಗೋಮೂತ್ರಗಳಿಂದ ಹೊಲಸು ಮಾಡಿಕೊಳ್ಳುತ್ತಿದ್ದರು. ಅವರು ಎಂದೂ ಒತ್ತಟ್ಟಿಗೆ ನಿಲ್ಲುತ್ತಿದ್ದಿಲ್ಲ. ಅವರನ್ನು ಹಿಡಿಯುವದು ಅವರ ತಾಯಂದಿರಿಗೆ ಸಾಕು ಸಾಕಾಗಿ ಹೋಯಿತು. ಈ ಮೊಂಡ ಹುಡುಗರ ಸಲುವಾಗಿ ತಮಗೆ ಮನೆಯ ಕೆಲಸಗಳೇ ಆಗುವದಿಲ್ಲವೆಂದು ಅವರು ತಮ್ಮ ಮಕ್ಕಳಿಗೆ ತೋರಿಕೆಯ ಸಿಟ್ಟು ಮಾಡಿದರೂ, ಮನಸಿನಲ್ಲಿ ಹಿರಿ ಹಿರಿ ಹಿಗ್ಗುತ್ತಿದ್ದರು. ಈ ಬಾಲಕರಿಗೆ ಸ್ವಲ್ಪ ನಡೆದಾಡಲಿಕ್ಕೆ ಕಾಲುಗಳು ಬಂದ ಬಳಿಕಂತೂ ಅವರ ತಾಯಂದಿರಿಗೆ ಅವರನ್ನು ಹಿಡಿಯುವದು ಅಸಾಧ್ಯವಾಯಿತು. ಅವರು ಯಾವಾಗಲು ಆಕಳದ ಕರುಗಳ ಬೆನ್ನು ಹತ್ತಿ ಹೋಗಿ ಅವುಗಳನ್ನು ಬಾಲ ಹಿಡಿದು ಜಗ್ಗುತ್ತಿದ್ದರು. ಆಗ ಅವರನ್ನು ಆ ಕರುಗಳು ದರ ದರ ಎಳಕೊಂಡು ತಮ್ಮ ಸುತ್ತಲು ತಿರುಗುತ್ತಿದ್ದವು. ಈ ಕೌತುಕವನ್ನು ನೋಡಲಿಕ್ಕೆ ಯಶೋದೆಯೂ, ರೋಹಿಣಿಯೂ, ಬೇರೆ ಗೋಪಿಯರೂ ಬಂದು ನಿಂತು ನಗುತ್ತಿದ್ದರು. "ರಾಮಾ, ಕೃಷ್ಣಾ, ನಿಮಗೆ ಹಸಿವೆಯಾಗಿಲ್ಲವೇ? ಬನ್ನಿರಿ. ಹೊಟ್ಟೆಗೆ ಕೊಡುತ್ತೇವೆ" ಎಂದು ರೋಹಿಣಿಯೂ, ಯಶೋದೆಯೂ ತಮ್ಮ ಹುಡುಗರನ್ನು ಎತ್ತಿಕೊಂಡು ಅವರಿಗೆ ಮುದ್ದಾಡಿ ಹೊಟ್ಟೆಗೆ ಕೊಡುತ್ತಿದ್ದರು. ಮುಂದೆ ಅವರಿಬ್ಬರೂ ದೊಡ್ಡವರಾದ ಬಳಿಕ ತಮ್ಮ ಓರಿಗೆಯವರನ್ನು ಕರಕೊಂಡು ಬಹಳ ಕಿಡಿಗೇಡಿತನವನ್ನು ಮಾಡಲಿಕ್ಕೆ ಆರಂಭಿಸಿದರು. ಅವರು ಎರಡನೆಯವರ ಮನೆಗಳನ್ನು ಹೊಕ್ಕು ಅವರ ಆಕಳುಗಳ ಹಿಂಡುವ

ಮೊದಲೇ ಅವರ ಕರುಗಳನ್ನು ಬಿಚ್ಚಿ ಹೊರಗೆ ಬಿಡುತ್ತಿದ್ದರು. ಗೋಪಿಯರು ಆ ಕರುಗಳನ್ನು ತಿರುಗಿ ತರಲಿಕ್ಕೆ ಓಡಿ ಹೋದ ಕೂಡಲೆ ಅವರು ಗಡಿಗೆ ಮಡಿಕೆಗಳಲ್ಲಿ ಇಟ್ಟ ಹಾಲು ಮೊಸರು ಬೆಣ್ಣೆಗಳನ್ನು ಕದ್ದು ತಿನ್ನುತ್ತಿದ್ದರು. ಅಡಕಲದ ಮೇಲೆ ಒಟ್ಟಿದ ಹಾಲು ಮೊಸರು ಬೆಣ್ಣೆಯ ಗಡಿಗೆ ಮಡಿಕೆಗಳು ಕೈಗೆ ನಿಲುಕದಿದ್ದರೆ ಅವುಗಳನ್ನು ತಮ್ಮ ಕೈಯೊಳಗಿನ ಕೋಲಿನಿಂದ ಒಡೆಯುತ್ತಿದ್ದರು. ಈ ಪ್ರಕಾರ ಅವರಿಬ್ಬರೂ ಊರಲ್ಲಿ ನಾನಾತರದ ಕಿಡಿಗೇಡಿತನವನ್ನು ಮಾಡಲಿಕ್ಕೆ ಹತ್ತಿದರು.

## ವಿಶ್ವರೂಪ ದರ್ಶನ.

ಒಂದು ಸಾರೆ ರಾಮಕೃಷ್ಣಾದಿ ಗೋಪಬಾಲಕರೆಲ್ಲರು ಕೂಡಿಕೊಂಡು ಆಟಗಳನ್ನು ಆಡುವಾಗ ಕೃಷ್ಣನು ಮಣ್ಣು ತಿಂದದ್ದನ್ನು ಕಂಡು ಕೆಲವು ಹುಡುಗರು ಯಶೋದೆಯ ಬಳಿಗೆ ಬಂದು—"ಕೃಷ್ಣನು ಮಣ್ಣು ತಿಂದನು" ಎಂದು ಹೇಳಿದರು. ಆಗ ಯಶೋದೆಯು ಅವನನ್ನು ಬೆದರಿಸುವದಕ್ಕಾಗಿ— "ಪುಂಡಾ, ಯಾಕೆ ಮಣ್ಣು ತಿಂದೆ?" ಎಂದು ಕೇಳಲು ಅವನು—"ಅವ್ವಾ, ನಾನು ಮಣ್ಣು ತಿಂದಿಲ್ಲ. ಬೇಕಾದರೆ ನನ್ನ ಬಾಯಿ ನೋಡಿಕೋ" ಎಂದು ಹೇಳಿ ತನ್ನ ಬಾಯಿ ತೆರೆದು ತೋರಿಸಲಾಗಿ ಅವನ ಬಾಯಿಯಲ್ಲಿ ಯಾವತ್ತು ಚರಾಚರ ಜಗತ್ತು, ಆ ಜಗತ್ತಿನಲ್ಲಿ ಒಂದು ಕಡೆಗೆ ಗೋಕುಲವು, ಮತ್ತು ಒಂದು ಕಡೆಗೆ ಸ್ವತಃ ತಾನು ಇರುವದನ್ನು ಕಂಡು ಯಶೋದೆಯು ಆಶ್ಚರ್ಯ ಚಕಿತಳಾದಳು. ಹಾಗೂ ಅವಳಿಗೆ ಕೂಡಲೆ ತತ್ವಜ್ಞಾನವುಂಟಾಗಲು, ಅವಳು ಪರಮೇಶ್ವರನಿಗೆ—"ನನ್ನನ್ನು ಮಾಯಾ ಮೋಹಗಳಿಂದ ರಕ್ಷಣ ಮಾಡು" ಎಂದು ಬೇಡಿಕೊಂಡಳು. ಈ ಪ್ರಕಾರ ಯಶೋದೆಗೆ ತತ್ವಜ್ಞಾನವುಂಟಾದಾಗ್ಯೂ ಪರಮೇಶ್ವರನು ಅವಳ ಮೇಲೆ ತೀವ್ರದಲ್ಲಿ ಪುತ್ರವ್ಯಾಮೋಹವನ್ನು ಪಸರಿಸಿದ್ದರಿಂದ ಅವಳು ಆ ತತ್ವಜ್ಞಾನವನ್ನು ಮರೆತುಬಿಟ್ಟು ಕೃಷ್ಣನನ್ನು ತನ್ನ ತೊಡೆಯ ಮೇಲೆ ತೆಗೆದುಕೊಂಡು ಮುಂಚಿನಂತೆ ಅವನ ಮೇಲೆ ಪುತ್ರಪ್ರೇಮವನ್ನು ಮಾಡಹತ್ತಿದಳು. ದಿನಾಲು ಗೋಪಿಯರು ಯಶೋದೆಯ ಬಳಿಗೆ ಬಂದು—"ಅಮ್ಮಾ, ನಿನ್ನ ಮಗನಾದ ಕೃಷ್ಣನ ಪುಂಡತನವನ್ನು

ಎಷ್ಟೆಂತ ಹೇಳೋಣ? ಅವನು ತನ್ನ ಸಂಗಡಿಗರಾದ ಪುಂಡ ಹುಡುಗರನ್ನು ಕರಕೊಂಡು ನಮ್ಮ ಮನೆಯೊಳಗೆ ಹೊಕ್ಕು ಹಾಲು ಮೊಸರು ಬೆಣ್ಣೆಗಳನ್ನು ಕದ್ದು ತಿನ್ನುತ್ತಾನೆ. ನಮ್ಮ ಗಡಿಗೆಮಡಿಕೆಗಳನ್ನು ಒಡೆಯುತ್ತಾನೆ. ಅವನಿಗೆ ಚನ್ನಾಗಿ ಬುದ್ಧೀ ಹೇಳಿರಿ. ಆದರೆ ಹೊಡಿಯಬೇಡಿರಿ" ಎಂದು ಹೇಳಲಾರಂಭಿಸಿದರು. ಆದರೆ ಯಶೋದೆಯು ಅವನಿಗೆ ಏನೂ ಸಿಟ್ಟು ಮಾಡದೆ ಅವನ ಮೋರೆಯ ಕಡೆಗೆ ನೋಡಿ ನಗುತ್ತಿದ್ದಳು.

## ಉಲೂಖಬಂಧನ.

ಕೃಷ್ಣನು ಸ್ವಲ್ಪ ದೊಡ್ಡ ಹುಡುಗನಾದರೂ ಇನ್ನೂ ಮೊಲೆ ಕುಡಿಯುವದನ್ನು ಬಿಟ್ಟದ್ದಿಲ್ಲ. ಒಮ್ಮೆ ಯಶೋದೆಯು ಮಜ್ಜಿಗೆ ಕಡೆಯುತ್ತಿದ್ದಾಗ ಕೃಷ್ಣನು ಅವಳ ಹಿಂದೆ ಬಂದು ನಿಂತು--"ಅವ್ವಾ, ನನಗೆ ಅಮ್ಮಣ್ಣಿ ಕೊಡು" ಎಂದು ಹಟ ಮಾಡಿದನು. ಆಗ ಅವಳು ಮಜ್ಜಿಗೆ ಕಡೆಯುವದನ್ನು ಬಿಟ್ಟು ಅವನನ್ನು ತೊಡೆಯ ಮೇಲೆ ತೆಗೆದುಕೊಂಡು ಮೊಲೆ ಉಣ್ಣಿಸಲಿಕ್ಕೆ ಹತ್ತಿದಳು. ಆದರೆ ಒಲಿಯ ಮೇಲೆ ಕಾಸುವದಕ್ಕಾಗಿ ಇಟ್ಟ ಹಾಲು ಉಕ್ಕಲಿಕ್ಕೆ ಹತ್ತಲು ಅವಳು ಸ್ತ್ರೀ ಸ್ವಭಾವಕ್ಕನುಸರಿಸಿ ಅವನನ್ನು ಅಲ್ಲಿಯೇ ಬಿಟ್ಟುಕೊಟ್ಟು ಒಲಿಯ ಕಡೆಗೆ ತ್ವರೆಯಿಂದ ಹೋದಳು. ಆಗ ಕೃಷ್ಣನು ಸಿಟ್ಟಿಗೆದ್ದು ಕಡಗೋಲಿನಿಂದ ಮಜ್ಜಿಗೆಯ ಗಡಿಗೆಯನ್ನು ಒಡೆದು ಒಂದು ಕೋಣೆಯೊಳಗೆ ಹೋಗಿ ಅಡಗಿಕೊಂಡು ಕೂತನು. ಇದನ್ನು ನೋಡಿ ಯಶೋದೆಯು ಬಹಳ ಸಿಟ್ಟಿಗೆ ಬಂದು ಕಣ್ಣು ಕೆಂಪಗೆ ಮಾಡಿ--"ಕೃಷ್ಣಾ, ನೀನು ಬಹಳ ಮೊಂಡತನವನ್ನು ನಡಿಸಿರುತ್ತೀ. ಸಿಕ್ಕ ಸಿಕ್ಕವರ ಗಡಿಗೆಮಡಿಕೆಗಳನ್ನು ಒಡಿಯುತ್ತೀ. ನಿಲ್ಲು. ನಿನಗೆ ಈಹೊತ್ತು ಚನ್ನಾಗಿ ಕೈ ಹಚ್ಚುತ್ತೇನೆ" ಎಂದು ಗದ್ದರಿಸಿದಳು. ಆಗ ಕೃಷ್ಣನು ಆ ಕೋಣೆಯಿಂದ ಹೌರಗೆ ಜಾರಿಕೊಂಡು ಹೊರಗೆ ಓಡಿ ಹೋದನು. ಯಶೋದೆಯು ಅವನ ಬೆನ್ನು ಹತ್ತಿ ಎಷ್ಟು ದೂರ ಓಡಿ ಹೋದರೂ ಅವನು ಅವಳ ಕೈಗೆ ಸಿಗಲಿಲ್ಲ. ಆದುದರಿಂದ ಅವಳು ನಿರಾಶೆಯಾಗಿ ತಿರುಗಿ ಬಂದು ಮನೆಯಲ್ಲಿ ಸುಮ್ಮನೆ ಕುಳಿತುಬಿಟ್ಟಳು. ಇಷ್ಟರಲ್ಲಿ ಕೃಷ್ಣನು ತಾನಾಗಿ ಅವಳ ಸಮೀಪದಲ್ಲಿ ಬಂದು ಅವಳ ಕೈಯೊಳಗೆ ಸಿಕ್ಕನು. ಆಗ ಅವಳು ಅವನನ್ನು ಗಟ್ಟಿಯಾಗಿ ಹಿಡಿದು ಒಂದು ಹಗ್ಗದಿಂದ ಅವನನ್ನು ಅಕ್ಕೀ ಕುಟ್ಟುವ ಒಂದು ಒರಳಿಗೆ ಕಟ್ಟ

ಲಿಕ್ಕೆ ಹೋದಳು. ಆದರೆ ಆ ಹಗ್ಗವು ಎರಡು ಬೆರಳು ಕಡಿಮೆಯಾಯಿತು. ಆಗ ಅವಳು ಆ ಹಗ್ಗಕ್ಕೆ ಇನ್ನೊಂದು ಹಗ್ಗವನ್ನು ಗಂಟು ಹಾಕಿ ಕಟ್ಟಿದಳು. ಆದರೂ ಅದು ಪುನಃ ಎರಡು ಬೆರಳು ಕಡಿಮೆಯಾಯಿತು. ಆಮೇಲೆ ಅವಳು ತನ್ನ ಮನೆಯೊಳಗಿನ ಎಲ್ಲ ಹಗ್ಗಗಳನ್ನು ಒಂದರ ಹಿಂದೊಂದು ಗಂಟು ಹಾಕಿ ಕಟ್ಟಿದರೂ ಅದು ಎರಡು ಬೆರಳು ಕಡಿಮೆಯೇ ಆಯಿತು. ಈ ಪ್ರಕಾರ ಯಶೋದೆಯು ಕೃಷ್ಣನನ್ನು ಕಟ್ಟಲಿಕ್ಕೆ ಅಸಮರ್ಥಳಾಗಿ ಸುಮ್ಮನೆ ಕೈ ಮೈ ನೋಯಿಸಿಕೊಂಡು ದಣಿದು ನಿರಾಶೆಯಿಂದ ಕುಳಿತುಬಿಟ್ಟಳು. ಇದನ್ನು ನೋಡಿ ಅಲ್ಲಿ ನೆರೆದಿದ್ದ ಗೋಪಿಯರೆಲ್ಲರು ನಗಲಿಕ್ಕೆ ಹತ್ತಿದರು. ಅವರು ನಗುವದನ್ನು ನೋಡಿ ಯಶೋದೆಯು ತಾನೂ ನಕ್ಕಳು. ಆಮೇಲೆ ಕೃಷ್ಣನು ತಾಯಿಯ ಮೇಲಿನ ಮಮತೆಯಿಂದ ಆ ಹಗ್ಗ ಸಾಲುವಂತೆ ಮಾಡಿ ತನ್ನನ್ನು ಕಟ್ಟಿಸಿಕೊಳ್ಳ ಲಾಗಿ ಯಶೋದೆಯು ಅವನಿಗೆ—“ಕಳ್ಳಾ, ಇನ್ನು ಎಲ್ಲಿ ಓಡಿ ಹೋಗುತ್ತೀ ಹೋಗು” ಎಂದು ಅಂದು ತನ್ನ ಕೆಲಸಕ್ಕಾಗಿ ಮನೆಯೊಳಗೆ ಹೋದಳು. ಆ ಮೇಲೆ ಕೃಷ್ಣನು ತನ್ನ ಅವ್ವನು ತನ್ನನ್ನು ಆಕಳ ಕರುವು ಕಟ್ಟಿದಂತೆ ಕಟ್ಟಿರುವ ಳೆಂದು ಬಗೆದು ಆ ಒರಳನ್ನು ಎಳೆದುಕೊಂಡು ಅವಳಿಜವಳಿಯಾಗಿ ಹುಟ್ಟಿದ ಎರಡು ಅರ್ಜುನ ವೃಕ್ಷಗಳ ನಡುವೆ ಹೋಗಲಾಗಿ ಅದು ಆ ಗಿಡಗಳ ನಡುವೆ ಸಿಕ್ಕು ಅವುಗಳು ಬೇರು ಸಹಿತ ಕಿತ್ತು ಬಿದ್ದವು. ಈ ಪ್ರಕಾರ ಆ ಗಿಡಗಳು ಕಿತ್ತು ಬಿದ್ದ ಸಪ್ಪಳವನ್ನು ಕೇಳಿ ನಾಲ್ಕೂ ಕಡೆಯಿಂದ ಹೆಂಗಸರು, ಹುಡು ಗರು, ಗಂಡಸರು ಅಲ್ಲಿಗೆ ಓಡಿ ಬಂದರು. ಯಶೋದೆಯಂತೂ ಹೆದರಿ ಹೌಹಾರಿ ದಳು. ನಂದನು ಇದನ್ನು ನೋಡಿ ಯಶೋದೆಗೆ ಸಿಟ್ಟು ಮಾಡಿ ಕೃಷ್ಣನಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿ ಅವನನ್ನು ಎತ್ತಿಕೊಂಡು ಮುದ್ದಾಡಿ ಯಶೋದೆಯ ಕಡೆಗೆ ಕೊಟ್ಟನು. ಆಗ ಅವಳು ಪ್ರೇಮಭಾವದಿಂದ ಅವನನ್ನು ತನಗೆ ಎದೆಗೆ ಅವಚಿಕೊಂಡು, ಅವನಿಗೆ ಚುಂಬನ ಕೊಟ್ಟು, ಕಡೆಗೆ ಹೊಟ್ಟೆಗೆ ಕೊಟ್ಟಳು.

ಹೀಗೆ ಮಾಡುತ್ತ ಮಾಡುತ್ತ ಬಲರಾಮ ಕೃಷ್ಣರು ಏಳು ವರ್ಷದವ ರಾದರು. ಬಲರಾಮನು ಕೃಷ್ಣನಿಗಿಂತ ಐದಾರು ತಿಂಗಳು ಹಿರಿಯನಿದ್ದನು. ಆಗ ನಂದನು ಇವರಿಬ್ಬರನ್ನೂ ಆಕಳುಗಳನ್ನು ಕಾಯಲಿಕ್ಕೆ ಕಳಿಸಿಕೊಡಹತ್ತಿ ದನು. ಇವರು ಮುಂಜಾನೆ ಎದ್ದು ನೇಹರಿ ( ಅಲ್ಪಾಹಾರ ) ಮಾಡಿಕೊಂಡು

ಊರೊಳಗಿನ ಸಣ್ಣ ಹುಡುಗರ ಸಂಗಡ ಊರ ಹೊರಗೆ ಸಮೀಪದಲ್ಲಿಯೇ ಆಕಳುಗಳನ್ನು ಮೇಯಿಸಿಕೊಂಡು ಅವುಗಳಿಗೆ ಯಮುನಾ ನದಿಯಲ್ಲಿ ನೀರು ಕುಡಿಸಿಕೊಂಡು ಮಧ್ಯಾಹ್ನಕ್ಕೆ ಮನೆಗೆ ಊಟಕ್ಕೆ ಬರುತ್ತಿದ್ದರು. ಹಾಗೂ ಮಧ್ಯಾಹ್ನಕ್ಕೆ ಊಟ ಮುಗಿಸಿಕೊಂಡು ಪುನಃ ಆಕಳು ಕಾಯಲಿಕ್ಕೆ ಹೋಗುತ್ತಿದ್ದರು. ಆದರೆ ಇವರಿಗೆ ಹನ್ನೆರಡು ವರ್ಷಗಳು ತುಂಬಿದ ಬಳಿಕ ಇವರು ಮುಂಜಾನೆ ಹೋಗಿ ಸಂಜೆಯ ತನಕ ಅಡವಿಯಲ್ಲಿಯೇ ಇರಹತ್ತಿದರು. ಇವರಿಬ್ಬರೂ ಮೊದಲು ಸಣ್ಣ ಕೂಸುಗಳಿದ್ದಾಗ ತಮ್ಮ ತಂದೆ ತಾಯಿಗಳಿಗೆ ಹೇಗೆ ಪ್ರಿಯಕರರಾಗಿದ್ದರೋ ಹಾಗೆಯೇ ಇವರು ತಮ್ಮ ಓರಿಗೆಯ ಗೆಳೆಯರಿಗೆ ಪ್ರಿಯಕರರಾದರು. ಇವರು ಅಡವಿಗೆ ಹೋದ ಬಳಿಕ ತಮ್ಮ ಆಕಳುಗಳನ್ನೂ, ಕರುಗಳನ್ನೂ ಮೇಯಲಿಕ್ಕೆ ಬಿಟ್ಟು ತಾವು ಕೊಳಲು ಊದುತ್ತ ತಮ್ಮ ಸ್ವಂತ ಮನೋರಂಜನವನ್ನು ಮಾಡಿಕೊಳ್ಳುವದಲ್ಲದೆ ತಮ್ಮ ಗೆಳೆಯರ ಮನೋರಂಜನವನ್ನು ಸಹ ಮಾಡುತ್ತಿದ್ದರು. ಇವರು ಕೆಲವು ಸಾರೆ ಅಡವಿಯಲ್ಲಿ ಹುಲ್ಲಿನ ಹಾಸಿಗೆ ಹಾಸಿ ಅದರ ಮೇಲೆ ತಾವೂ ತಮ್ಮ ಗೆಳೆಯರೂ ಬಿದ್ದುಕೊಂಡು ವಿಶ್ರಾಂತಿ ಸುಖವನ್ನು ಅನುಭವಿಸುತ್ತಿದ್ದರು. ಕೆಲವು ಸಾರೆ ಚಿಣಿಫಣಿ, ಗುಂಡು ಗಜಗಗಳನ್ನು ಆಡುತ್ತಿದ್ದರು. ಕೆಲವು ಸಾರೆ ತಮ್ಮ ಕವಣಿಗಲ್ಲು ಎಸೆದು ಗಿಡಗಳ ಮೇಲಿನ ಹಣ್ಣು ಕಾಯಿಗಳನ್ನು ಉದುರಿಸಿಕೊಂಡು ತಿನ್ನುತ್ತಿದ್ದರು. ಕೆಲವು ಸಾರೆ ತಾವೂ ತಮ್ಮ ಗೆಳೆಯರೂ ಮೈಮೇಲೆ ಕಂಬಳಿ ಹೊತ್ತುಕೊಂಡು ದನಗಳ ಆಟವನ್ನು ಆಡುತ್ತಿದ್ದರು. ಮತ್ತೆ ಕೆಲವು ಸಾರೆ ಮಂಗಗಳಂತೆ ಗಿಡಗಳನ್ನು ಹತ್ತಿ ಚೀರಾಡುವದೂ, ಕುಣಿದಾಡುವದೂ ಮಾಡುತ್ತಿದ್ದರು. ಈ ಪ್ರಕಾರ ಇವರು ಮುಂಜಾನೆಯಿಂದ ಸಂಜೆಯ ವರೆಗೆ ಆನಂದದಿಂದ ಅಡವಿಯಲ್ಲಿ ಹೊತ್ತುಗಳೆದು ಸಂಜೆಯ ಹೊತ್ತಿಗೆ ತಮ್ಮ ಆಕಳುಗಳನ್ನೂ, ಕರುಗಳನ್ನೂ ಅಟ್ಟಿಕೊಂಡು ತಮ್ಮ ಮನೆಗೆ ತಿರುಗಿ ಬರುತ್ತಿದ್ದರು.

ಕೆಲವು ದಿವಸಗಳಾದ ನಂತರ ನಂದಾದಿ ಗೋಪಾಲಕರು ಗೋಕುಲದಲ್ಲಿ ಹುಡುಗರು ಹುಪ್ಪಡಿಗಳು ಮೇಲಿಂದ ಮೇಲೆ ಬೇನೆ ಬೀಳುವದನ್ನೂ, ಕೃಷ್ಣನಿಗೆ ಮೂರು ನಾಲ್ಕು ದೊಡ್ಡ ದೊಡ್ಡ ಕುತ್ತುಗಳು ಬಂದು ಹೋದದ್ದನ್ನೂ, ತೋಳಗಳ ಉಪದ್ರವವು ಹೆಚ್ಚಾಗಿ ಅವು ತಮ್ಮ ದನಕರುಗಳನ್ನು

ಮೇಲಿಂದ ಮೇಲೆ ಎತ್ತಿಕೊಂಡು ಹೋಗುವದನ್ನೂ ನೋಡಿ ತಾವು ಗೋಕು ಲವನ್ನು ಬಿಟ್ಟು ವೃಂದಾವನದಲ್ಲಿ ಇರಲಿಕ್ಕೆ ಹೋಗಬೇಕೆಂದು ಒಂದು ದಿವಸ ನಿಶ್ಚಯಿಸಿದರು. ಆ ಪ್ರಕಾರ ಅವರು ಮರುದಿವಸ ಎದ್ದ ಕೂಡಲೆ ಬಂಡಿಗ ಳನ್ನು ಹೂಡಿಕೊಂಡು ಅವುಗಳಲ್ಲಿ ತಮ್ಮ ಯಾವತ್ತು ಸಾಮಾನುಗಳನ್ನು ತುಂಬಿ ದ ತರುವಾಯ ಹುಡುಗರು ಹುಪ್ಪಡಿಗಳನ್ನು ಕುಳ್ಳಿರಿಸಿಕೊಂಡು ವೃಂದಾವನ ದಿಂದ ಗೋಕುಲಕ್ಕೆ ಹೊರಟರು. ಆಗ ಗೋಪಿಯರು ಕಡಗೋಲುಗಳನ್ನೂ, ಮಜ್ಜಿಗೆಯ ಗಡಿಗೆಮಡಿಕೆಗಳನ್ನೂ ತಮ್ಮ ತಲೆಯ ಮೇಲೆ ಹೊತ್ತುಕೊಂಡರು. ಗೋಪಾಲಕರು ಆಕಳಗಳನ್ನು ಕಟ್ಟುವ ಕಣ್ಣಿಗಳನ್ನೂ, ಗೂಟಗಳನ್ನೂ ತಮ್ಮ ತಲೆಯ ಮೇಲೆ ತೆಗೆದುಕೊಂಡರು. ಆಕಳು ಕರುಗಳ ಹಿಂಡು ಒಂದ ಕ್ಕೊಂದು ಕೂಡಿಕೊಂಡು ಮುಂದೆ ನಡೆಯುಹತ್ತಿದವು. ಅವುಗಳ ಹಿಂದಿನಿಂದ ಕಪ್ಪು, ಹಳದಿ, ಕೆಂಪು ಸೀರೆಗಳನ್ನು ಉಟ್ಟುಕೊಂಡು ಗೋಪಿಯರು ಸಾಲು ಸಾಲಾಗಿ ನಡೆದಿರುವದನ್ನು ನೋಡಿದವರಿಗೆ ಆಕಾಶದಲ್ಲಿ ಮೂಡುವ ಇಂದ್ರ ಧನುಷ್ಯವು ಭೂಮಿಯ ಮೇಲೆ ಮೂಡಿರುತ್ತದೋ ಏನೋ ಎಂದು ಭ್ರಾಂತಿ ಯಾಗುವಂತೆ ಇತ್ತು. ಅವರ ನಡುವೆ ಒಂದು ರಥದಲ್ಲಿ ಯಶೋದೆಯೂ, ರೋ ಹಿಣಿಯೂ ತಮ್ಮ ಇಬ್ಬರು ಸುಂದರ ಮಕ್ಕಳನ್ನು ಕುಳ್ಳಿರಿಸಿಕೊಂಡು ಕೂತಿ ದ್ದರು. ಈ ಪ್ರಕಾರ ಇವರೆಲ್ಲರು ಪ್ರಯಾಣ ಮಾಡುವಾಗ ಯಶೋದಾ ರೋ ಹಿಣಿಯರೂ, ಇತರ ಗೋಪಿಕಾ ಸ್ತ್ರೀಯರೂ ದಾರಿಯಲ್ಲಿ ಶ್ರೀಕೃಷ್ಣಲೀಲೆಯ ಪದಗಳನ್ನು ತಮ್ಮ ಮಂಜುಳವಾದ ಸ್ವರದಿಂದ ಹಾಡುತ್ತಿದ್ದರು. ವೃಂದಾವ ನದ ನಡುವೆ ಯಮುನಾ ನದಿಯು ಹರಿದಿದ್ದು ಅದರ ಗಾಳಿ ನೀರುಗಳು ಬಹು ಉತ್ತಮವಾಗಿದ್ದುದರಿಂದಲೂ, ಅಲ್ಲಿ ದನಕರುಗಳಿಗೆ ಮೇಯಲಿಕ್ಕೆ ಬೇಕಾದಷ್ಟು ಹುಲ್ಲಿನ ಸಮೃದ್ಧಿಯು ಇದ್ದುದರಿಂದಲೂ, ಅದರ ಪೂರ್ವ ದಿಕ್ಕಿಗೆ ಗೋವ ರ್ಧನ ಪರ್ವತವಿದ್ದು ಅದರ ಬುಡದಲ್ಲಿ ಸಾವಿರಾರು ಆಕಳು ಕರುಗಳು ನಿಲ್ಲ ಲಿಕ್ಕೂ, ಮಲಗಿಕೊಳ್ಳಲಿಕ್ಕೂ ವಿಶಾಲವಾದ ನೆರಳುಳ್ಳ ದೊಡ್ಡ ದೊಡ್ಡ ಗಿಡ ಗಳು ಇದ್ದುದರಿಂದಲೂ, ತಮಗೆ ತಿನ್ನಲಿಕ್ಕೆ ಬೇಕಾದಷ್ಟು ಮಧುರವಾದ ಫಲಗಳು ಮತ್ತು ಕಂದಮೂಲಗಳು ಇದ್ದುದರಿಂದಲೂ ಆ ರಮ್ಯವಾದ ಸ್ಥಳವು ತಮಗೆ ವಸತಿ ಮಾಡಲಿಕ್ಕೆ ಅತ್ಯಂತ ಯೋಗ್ಯವಾಗಿರುತ್ತದೆಂದು ನೋಡಿ ಯಾವತ್ತು ಗೋಪಾಲಕರೂ, ಗೋಪಿಯರೂ ಬಹಳ ಆನಂದಪಟ್ಟರು.

ಈ ಪ್ರಕಾರ ಬಲರಾಮ ಕೃಷ್ಣರು ವೃಂದಾವನದಲ್ಲಿ ಇರಲಿಕ್ಕೆ ಹತ್ತಿದ ಬಳಿಕ ಹದಿನಾಲ್ಕು ವರ್ಷಗಳು ತುಂಬಿ ಹೋಗಿ, ಅವರು ಕುಮಾರಾವಸ್ಥೆಯಿಂದ ತರುಣಾವಸ್ಥೆಗೆ ಬಂದು, ಭರದಿಂದ ಎತ್ತರವಾಗಿ ಬೆಳೆದರು. ಆಗ ಅವರ ಶರೀರವು ಅತ್ಯಂತ ಸುದೃಢವೂ ಮೋಹಕವೂ ಕಾಣಿಸಹತ್ತಿತು. ಈ ಮೇರೆಗೆ ಅವರಿಬ್ಬರೂ ದೊಡ್ಡವರಾಗಿ ಇತರ ಗೋಪಾಲಕರಂತೆ ಆಕಳುಗಳನ್ನು ಮೇಯಿಸಲಿಕ್ಕೆ ಒಯ್ಯುವಂಥ ಸ್ವತಂತ್ರ ಯೋಗ್ಯತೆಯುವರಾಗಿ, ತಮ್ಮ ಕೂಡ ಆಡಿ ಬೆಳೆದ ಗೋಪಾಲಕರನ್ನೂ, ಇತರ ದೊಡ್ಡ ಗೋಪಾಲಕರನ್ನೂ ಕೂಡಿಕೊಂಡು ಆಕಳುಗಳನ್ನು ಮೇಯಿಸಲಿಕ್ಕೆ ಅಡವಿಗೆ ಹೋಗಹತ್ತಿದರು. ಅವರು ತಮಗೆ ಅಡವಿಯಲ್ಲಿ ಹುಲಿ, ತೋಳ, ಮೊದಲಾದ ಹಿಂಸಕ ಪಶುಗಳು ಎದುರಾದಲ್ಲಿ ಅವುಗಳನ್ನು ಕೊಲ್ಲುವದಕ್ಕಾಗಿ ತಮ್ಮ ಸಂಗಡ ಧನುಷ್ಯ ಬಾಣಗಳನ್ನು ಒಯ್ಯುತ್ತಿದ್ದರು. ಇದಲ್ಲದೆ ಪ್ರಸಂಗವು ಬಹಳ ಬಿಕ್ಕಟ್ಟು ಬಂದಾಗ್ಗೆ ಜನರಿಗೆ ಎಚ್ಚರಿಕೆಯನ್ನು ಕೊಡುವ ಸಲುವಾಗಿ ಊದಲಿಕ್ಕೆ ಕೊಂಬನ್ನು ಸಹ ಒಯ್ಯುತ್ತಿದ್ದರು. ಅವರು ಆಕಳುಗಳನ್ನು ಮೇಯಿಸುತ್ತಿದ್ದಾಗ ತಮ್ಮ ಕೊಳಲನ್ನು ಮನೋಹರವಾಗಿ ಊದಿ ತಮ್ಮ ಸಂಗಡಿಗರ ಮನೋರಂಜನವನ್ನು ಮಾಡುತ್ತಿದ್ದರು. ಅವರು ತಮ್ಮ ಕೊರಳಲ್ಲಿ ಅಡವಿಯೊಳಗೆ ಬೆಳೆದ ಹೂವಿನ ಹಾರಗಳನ್ನು ಧರಿಸಿ, ತಮ್ಮ ತಲಿಗೆ ನವಿಲುಗಳ ಮುಕುಟವನ್ನು ಹಾಕಿಕೊಂಡು ಗೋಪಾಲಕರ ಸಂಗಡ ಕುಣಿಯುವದನ್ನೂ, ಹಾಡುವದನ್ನೂ ಮಾಡುತ್ತಿದ್ದರು. ಒಮ್ಮೊಮ್ಮೆ ಅವರು ತಮ್ಮ ಸಂಗಡ ಇದ್ದಂಥ ಗೋಪಾಲಕರನ್ನು ಕುಣಿಯಲಿಕ್ಕೆ ಹಚ್ಚಿ ತಾವು ಕೊಳಲು ಊದುತ್ತ ಕೈಯಿಂದ ತಾಳ ಹಿಡಿಯುತ್ತಿದ್ದರು. ಒಮ್ಮೊಮ್ಮೆ ಗೋಪಾಲಕರು ತಾಳ ಹಿಡಿದಾಗ್ಗೆ ಮತ್ತು ಕೊಳಲು ಊದುತ್ತಿದ್ದಾಗ್ಗೆ ತಾವು ಕುಣಿಯುತ್ತಿದ್ದರು. ಅವರು ಗೋಪಾಲಕರ ಸಂಗಡ ನಾನಾಪ್ರಕಾರದ ಆಟಗಳನ್ನು ಆಡುವದನ್ನೂ, ಹಾಡುವದನ್ನೂ, ವಾದ್ಯ ಬಾರಿಸುವದನ್ನೂ ಮಾಡುತ್ತಿದ್ದರು. ಆ ಎಲ್ಲ ಆಟಗಳಲ್ಲಿ ಕುಸ್ತಿಯಾಡುವದು ಅವರಿಗೆ ಅತ್ಯಂತ ಪ್ರಿಯಕರ ಆಟವಾಗಿತ್ತು. ಅವರು ಕುಮಾರಾವಸ್ಥೆಯಲ್ಲಿರುವಾಗ ಓಡುವದು, ಮರವನ್ನು ಏರುವದು, ನದಿಯಲ್ಲಿ ಈಸುವದು ಮುಂತಾದ್ದರಲ್ಲಿ ನಿಷ್ಣಾತರಾಗಿದ್ದರು. ಈಗ ಅವರು ತರುಣಾವಸ್ಥೆಗೆ ಬಂದ ಬಳಿಕ

ಮಲ್ಲವಿದ್ಯೆಯಲ್ಲಿಯೂ ನೈಪುಣ್ಯವನ್ನು ಸಂಪಾದಿಸಿದರು. ಹದಿನಾರು ಹದಿನೇಳು ವರ್ಷದವರಿರುವಾಗ ಈ ಕುಮಾರಮಲ್ಲರು ಮಾಡಿದ ಅಮಾನುಷ ಕೃತಿಗಳನ್ನು ಕಂಡು ಯಾವತ್ತು ಗೋಪಾಲಕರು ಆಶ್ಚರ್ಯದಿಂದ ತಮ್ಮ ಬಾಯಿಯಲ್ಲಿ ಬೆರಳು ಕಚ್ಚಿದರು. ಅದರಲ್ಲಿಯೂ ಅವರು ಮೂರು ನಾಲ್ಕು ಸಾರೆ ತಮ್ಮ ಶಕ್ತಿಯ ಅತರ್ಕ್ಯ ಲೀಲೆಗಳನ್ನು ಮಾಡಿ ತೋರಿಸಿದ್ದನ್ನು ಕಂಡು ಅವರು ಈಶ್ವರನ ಅವತಾರವಿರುತ್ತಾರೆಂದು ಜನರು ಭಾವಿಸಹತ್ತಿದರು.

## ವತ್ಸಾಸುರವಧ.

ಒಂದು ಸಾರೆ ರಾಮಕೃಷ್ಣರು ಯಮುನಾ ನದಿಯ ತೀರದಲ್ಲಿ ತಮ್ಮ ಗೆಳೆಯರನ್ನು ಕೂಡಿಕೊಂಡು ದನಕರುಗಳನ್ನು ಮೇಯಿಸುತ್ತಿದ್ದಾಗ ಅವರನ್ನು ಕೊಲ್ಲುವದಕ್ಕಾಗಿ ವತ್ಸಾಸುರನೆಂಬ ರಾಕ್ಷಸನು ಒಂದು ಆಕಳಕರುವಿನ ವೇಷದಿಂದ ಆ ದನಗಳ ಹಿಂಡಿನಲ್ಲಿ ಹೊಕ್ಕದ್ದನ್ನು ಕಂಡು ಕೃಷ್ಣನು ಅದನ್ನು ಬಲರಾಮನಿಗೆ ತೋರಿಸುತ್ತ ಒಬ್ಬ ಅರಿಯದ ಹುಡುಗನಂತೆ ಆ ಕರುವಿನ ಹತ್ತರ ಹೋಗಿ ಅದರ ಬಾಲಸಹಿತವಾಗಿ ಹಿಂಗಾಲನ್ನು ಹಿಡಿದು ಗಿವಿ ಗಿವಿ ತಿರುಗಿಸಿ ಒಂದು ಬೆಳವಲ ಗಿಡದ ಟೊಂಗೆಯ ಮೇಲೆ ಒಗಿಯಲಾಗಿ ಅದರಲ್ಲಿ ಆಗಿದ್ದ ಯಾವತ್ತು ಬೆಳವಲ ಕಾಯಿಗಳು ಉದುರಿ ನೆಲದ ಮೇಲೆ ಬಿದ್ದದ್ದಲ್ಲದೆ ಆ ಭಯಂಕರ ರಾಕ್ಷಸನು ಸಹ ಧುಪ್ಪನೆ ಬಿದ್ದು ಸತ್ತನು.

## ಬಕಾಸುರವಧ.

ಇನ್ನೊಂದು ಸಾರೆ ಯಾವತ್ತು ಗೋಪಬಾಲಕರು ತಮ್ಮ ತಮ್ಮ ದನಕರುಗಳನ್ನು ಮೇಯಿಸಿ ಅವುಗಳಿಗೆ ನೀರು ಕುಡಿಸಿಕೊಂಡು ತಾವೂ ನೀರು ಕುಡಿದು ಬರುವಾಗ ಬಕಾಸುರನೆಂಬ ರಾಕ್ಷಸನು ಬಕಪಕ್ಷಿಯ ರೂಪವನ್ನು ಧರಿಸಿ ಅಲ್ಲಿಗೆ ಬಂದು ಕೃಷ್ಣನನ್ನು ನುಂಗಿದನು. ಇದನ್ನು ನೋಡಿ ಬಲರಾಮಾದಿ ಗೋಪಬಾಲಕರು ಹೆದರಿ ಮೂರ್ಛಿತರಾದರು. ಆಗ ಭಗವನ್ಮೂರ್ತಿಯಾದ ಕೃಷ್ಣನು ಅವನ ಹೊಟ್ಟೆಯೊಳಗೆ ಅಗ್ನಿಯಾಗಿ ಕುಳಿತು ಭಯಂಕರವಾದ ಸಂಕಟವನ್ನು ಹುಟ್ಟಿಸಿದನು. ಇದರಿಂದ ಆ ಬಕಪಕ್ಷಿಯು ಸಂಕಟವನ್ನು ತಡೆಯಲಾರದೆ ಕೃಷ್ಣನನ್ನು ಉಗುಳಿ ಬಿಟ್ಟಿತು. ಆ ಮೇಲೆ ಆ ಪಕ್ಷಿಯು

ತನ್ನ ತೀಕ್ಷ್ಣವಾದ ಚಂಚುಪುಟದಿಂದ ಅವನನ್ನು ಚುಚ್ಚಿ ಕೊಲ್ಲಲಿಕ್ಕೆ ಹೋಗಲು ಅವನು ತನ್ನ ಎರಡೂ ಕೈಗಳಿಂದ ಅದರ ಚಂಚುಪುಟದ ಎರಡು ಭಾಗಗಳನ್ನು ಹಿಡಿದು ಆ ಕಂಸನ ಮಿತ್ರನಾದ ಬಕಾಸುರ ರಾಕ್ಷಸನನ್ನು ಹರಿದು ಕೊಂದುಬಿಟ್ಟನು.

## ಅಘಾಸುರವಧ.

ಇದೇ ಪ್ರಕಾರ ಒಮ್ಮೆ ಕೃಷ್ಣನು ತನ್ನ ಗೆಳೆಯರೊಂದಿಗೆ ಅಡವಿಯಲ್ಲಿ ಆಟಗಳನ್ನು ಆಡುತ್ತಿದ್ದಾಗ ಪೂತನಾ-ಬಕರಾಕ್ಷಸರ ಕನಿಷ್ಠಬಂಧುವಾದ ಅಘಾಸುರನು ಒಂದು ದೊಡ್ಡ ಅಜಗರ ಹಾವಿನ ರೂಪವನ್ನು ಧರಿಸಿ ಕೃಷ್ಣಾದಿ ಗೋಪಾಲಕರನ್ನು ನುಂಗಬೇಕೆಂದು ಅವರ ದಾರಿಯೊಳಗೆ ಬಂದು ಆ ಎಂದು ಬಾಯಿ ತೆರೆದುಕೊಂಡು ಅಡ್ಡಬಿದ್ದಿದ್ದನು. ಆ ಹಾವಿನ ಕೆಳದುಟಿಯು ಭೂಮಿಯಲ್ಲಿ ಸೇರಿಕೊಂಡು ಅದರ ಮೇಲದುಟಿಯು ಆಕಾಶಮಂಡಲಕ್ಕೆ ಮುಟ್ಟಿತ್ತು. ಇದನ್ನು ಗೋಪಾಲಕರು ನೋಡಿ ಹೆದರದೆ ಇದೊಂದು ವೃಂದಾವನದ ಶೋಭೆಯೋ ಎಂದು ತಿಳಿದು ಕೃಷ್ಣನ ಸಾಮರ್ಥ್ಯದ ನಂಬಿಗೆಯಿಂದ ಅದರ ಬಾಯೊಳಗೆ ಪ್ರವೇಶಿಸಿದರು. ಕೃಷ್ಣನು ಹೀಗೆ ಮಾಡಬೇಡಿರೆಂದು ಹೇಳುವದರೊಳಗಾಗಿ ಅವರು ಅದರ ಹೊಟ್ಟೆಯೊಳಗೆ ಹೋಗಿ ಬಿಟ್ಟಿದ್ದರು. ಆಗ ಕೃಷ್ಣನು ಆ ಗೋಪಾಲಕರನ್ನು ತಿರುಗಿ ತರಬೇಕೆಂದು ತಾನೂ ಅದರ ಬಾಯೊಳಗೆ ಪ್ರವೇಶಿಸಿದನು. ಕೃಷ್ಣನು ಒಳಗೆ ಪ್ರವೇಶ ಮಾಡಿದ ಕೂಡಲೆ ಆ ಹಾವು ತನ್ನ ಬಾಯಿಯನ್ನು ಮುಚ್ಚಬೇಕೆಂದು ಯತ್ನ ಮಾಡಿತು. ಆದರೆ ಕೃಷ್ಣನು ತನ್ನ ಮೈಯನ್ನು ಒಂದೇಸವನೆ ಉಬ್ಬಿಸಲಾಗಿ ಆ ಹಾವು ಉಸುರುಗಟ್ಟಿ ಸತ್ತು ಹೋಯಿತು.

## ಧೇನುಕಾಸುರವಧ.

ಇದೇ ಪ್ರಕಾರ ಗೋವರ್ಧನ ಪರ್ವತದ ಉತ್ತರ ದಿಕ್ಕಿಗೆ ಯಮುನಾ ನದಿಯ ತೀರದಲ್ಲಿ ತಾಲವೃಕ್ಷಗಳ ಅರಣ್ಯದಲ್ಲಿ ಧೇನುಕಾಸುರನೆಂಬ ರಾಕ್ಷಸನು ಕತ್ತೆಯ ರೂಪವನ್ನು ಧರಿಸಿ, ಅಲ್ಲಿ ಮನುಷ್ಯರಿಗಾಗಲಿ, ದನಗಳಿಗಾಗಲಿ ಅಡ್ಡಾಡಗೊಡುತ್ತಿದ್ದಿಲ್ಲ. ಅವನನ್ನು ರಾಮಕೃಷ್ಣರು ಕೊಂದು ಆ ಅರಣ್ಯವನ್ನು ಮನುಷ್ಯರಿಗೂ ಆಕಳುಗಳಿಗೂ ನಿರ್ಭಯವಾಗುವಂತೆ ಮಾಡಿದರು.

# ಕಾಲಿಯಾಮರ್ದನ.

ಒಂದು ದಿವಸ ಶ್ರೀಕೃಷ್ಣನು ವೃಂದಾವನದ ಅಡವಿಯಲ್ಲಿ ಆಕಳು ಗಳನ್ನು ಮೇಯಿಸುತ್ತಿರುವಾಗ ಅವನು ಬಲರಾಮನನ್ನು ಹಿಂದಕ್ಕೆ ಬಿಟ್ಟು ತನ್ನ ಆಕಳುಗಳನ್ನು ಅಟ್ಟಿಕೊಂಡು ನೀರು ಕುಡಿಯುವದಕ್ಕಾಗಿ ಯಮುನಾ ನದಿಗೆ ಬಂದನು. ಆ ಯಮುನಾ ನದಿಯ ತೀರದಲ್ಲಿ ಒಂದು ಮಡುವು ಇತ್ತು. ಆ ಮಡುವಿನೊಳಗೆ ಕಾಲಿಯಾ ಎಂಬ ಒಂದು ಸರ್ಪವು ಇತ್ತು. ಅದರ ವಿಷವು ಬಹಳ ತೀಕ್ಷ್ಣವಿದ್ದುದರಿಂದ ಅದರ ನೀರು ಅತ್ಯಂತ ದೂಷಿತವಾಗಿದ್ದವು. ಆ ಸರ್ಪದ ಅಂಜಿಕೆಯಿಂದ ಒಂದೂ ಪಶುವು ಅಥವಾ ಪಕ್ಷಿಯು ಅತ್ತಕಡೆಗೆ ಹಣಿಕಿ ನೋಡುತ್ತಿದ್ದಿಲ್ಲ. ಎಲ್ಲಿ ನೋಡಿದಲ್ಲಿ ಭಯಂಕರ ಅರಣ್ಯವು ಇದ್ದು, ಅದನ್ನು ಕಾಲಿಯಾ ಸರ್ಪದ ಸಚೀವನು ರಕ್ಷಣ ಮಾಡುತ್ತಿದ್ದನು. ಆ ಸರ್ಪ ವನ್ನು ಅಲ್ಲಿಂದ ಹೊರಗೆ ಹಾಕಿ ಆ ಮಡುವಿನ ನೀರನ್ನು ನಿರ್ದೋಷವಾಗಿಯೂ, ಎಲ್ಲರಿಗೆ ಕಲ್ಯಾಣಕಾರಕವಾಗಿಯೂ ಮಾಡಬೇಕೆಂದು ಶ್ರೀಕೃಷ್ಣನು ಒಂದು ದಿವಸ ನಿಶ್ಚಯಿಸಿ ಆ ಮಡುವಿನ ದಂಡೆಗೆ ಬೆಳೆದಿದ್ದ ಕದಂಬ ವೃಕ್ಷವನ್ನು ಹತ್ತಿ, ಕಸುವಿನಿಂದ ಸಡ್ಡು ಹೊಡೆದು, ಒಂದು ದೊಡ್ಡ ಕೂಗನ್ನು ಕೂಗಿ, ಆ ಮಡು ವಿನೊಳಗೆ ಧುಪ್ಪನೆ ಜಿಗಿದನು. ಕೂಡಲೆ ಆ ಮಡುವಿನಲ್ಲಿಯ ನೀರು ನಾಲ್ಕೂ ಕಡೆಗೆ ಕಲಕಿದವು. ಶ್ರೀಕೃಷ್ಣನು ಸಡ್ಡು ಹೊಡೆದು ಕೂಗಿದಂಥ ಸಪ್ಪಳ ದಿಂದಲೂ, ನಾಲ್ಕೂ ಕಡೆಗೆ ನೀರು ಕಲಕಿದ್ದರಿಂದಲೂ ಭಯಂಕರ ದೇಹವುಳ್ಳ ಕಾಲಿಯಾ ಸರ್ಪವು ರೊಚ್ಚಿಗೆದ್ದು ಶ್ರೀಕೃಷ್ಣನನ್ನು ಒಮ್ಮೆಲೆ ಸುತ್ತಿಕೊಂಡು ಅವನನ್ನು ಕಚ್ಚುವದಕ್ಕಾಗಿ ತನ್ನ ಹೆಡೆಗಳಿಂದ ಅವನಿಗೆ ಹೊಡೆಯಿತು. ಆದರೆ ಇದರಿಂದ ಶ್ರೀಕೃಷ್ಣನು ಕಿಂಚಿತ್ತಾದರೂ ಹೆದರದೆ ಆ ಸರ್ಪವು ತನ್ನನ್ನು ಕಚ್ಚುವ ಮುಂಚೆ ಬಹಳ ಚಾತುರ್ಯದಿಂದ ಅದರ ಕುತ್ತಿಗೆಯನ್ನು ತನ್ನ ವಜ್ರ ಹಸ್ತದಿಂದ ಗಟ್ಟಿಯಾಗಿ ಒತ್ತಿದನು. ಇಷ್ಟರಲ್ಲಿ ಶ್ರೀಕೃಷ್ಣನ ಗೆಳೆಯರಾದ ಗೋಪಾಲಕರು ಅವನನ್ನು ಹುಡಕುತ್ತ ಆ ಮಡುವಿಗೆ ಬಂದು ಈ ಎಲ್ಲ ಭಯಂ ಕರ ಪ್ರಕಾರವನ್ನು ನೋಡಿ ಗಾಬರಿಯಾಗಿ—"ಕೃಷ್ಣನನ್ನು ಬದುಕಿಸಿರಿ. ಕೃಷ್ಣನನ್ನು ಬದುಕಿಸಿರಿ" ಎಂದು ಅಲ್ಲಿ ಬಹಳ ಆಕ್ರೋಶ ಮಾಡಿದರು. ಅವ ರಲ್ಲಿ ಕೆಲವರು ಅಳುತ್ತ ಮನೆಗೆ ಹೋಗಿ ನಂದಯಶೋದೆಯರಿಗೂ ಇತರ

ಗೋಪಗೋಪಿಯರಿಗೂ ಈ ಸಂಗತಿಯನ್ನು ತಿಳಿಸಿ ಅವರನ್ನು ಕರಕೊಂಡು ಬಂದರು. ಅವರೆಲ್ಲರು ಕಾಲಿಯಾ ಸರ್ಪವು ಶ್ರೀಕೃಷ್ಣನನ್ನು ಬಿಗಿಯಾಗಿ ಸುತ್ತಿಕೊಂಡು ನಿಶ್ಚೇಷ್ಟವಾಗಿ ಮಾಡಿರುತ್ತದೆಂದು ನೋಡಿ ಎದೆ ಎದೆ ಬಡ ಕೊಂಡು ಬಹಳ ಶೋಕ ಮಾಡಹತ್ತಿದರು. ನಂದಯಶೋದೆಯರೂ ಇತರ ಗೋಪಗೋಪಿಯರೂ—"ಕೃಷ್ಣನು ಬದುಕದಿದ್ದರೆ ನಾವು ಬದುಕಿ ಏನು ಪ್ರಯೋಜನವು? ನಾವೂ ಈ ಮಡುವಿನಲ್ಲಿ ಹಾರಿಕೊಂಡು ಜೀವ ಕೊಡೋಣ" ಎಂದು ಬಹಳ ದುಃಖಮಾಡಹತ್ತಿದರು. ಬಲರಾಮನು ಅವರಿಗೆ ಎಷ್ಟು ಸಮಾಧಾನ ಹೇಳಿದರೂ ಕೇಳಲಿಲ್ಲ. ಆಗ ಶ್ರೀಕೃಷ್ಣನು ಅವರೆಲ್ಲರನ್ನು ದುಃಖ ದಿಂದ ಮುಕ್ತಮಾಡಬೇಕೆಂದು ಆ ಸರ್ಪದ ಕುತ್ತಿಗೆಯನ್ನು ಕಸುವಿನಿಂದ ಒತ್ತಿ ಹಿಡಿಯಲಾಗಿ ಅದು ತಾನು ಶ್ರೀಕೃಷ್ಣನ ಮೈಗೆ ಸುತ್ತಿಕೊಂಡಿದ್ದನ್ನು ಸಡಿಲು ಮಾಡಿದ್ದಲ್ಲದೆ ತನ್ನ ಬಾಯೊಳಗಿನ ಎಲ್ಲ ರಕ್ತವನ್ನೂ ವಿಷವನ್ನೂ ಕಾರಿಕೊಂಡು ನೀರಿನ ಮೇಲೆ ನಿಶ್ಚೇಷ್ಟವಾಗಿ ಬಿದ್ದುಕೊಂಡಿತು. ಇಷ್ಟರಲ್ಲಿ ಶ್ರೀಕೃಷ್ಣನು ಅದರ ಹೆಡೆಯನ್ನೇರಿ ಕುಣಿಯಹತ್ತಿದನು. ಆಗ ಅದರ ಹೆಡೆ ಯು ನೀರೊಳಗೆ ಮುಣುಗಹತ್ತಿತು. ಅದರ ಮರಣೋನ್ಮುಖ ಅವಸ್ಥೆಯನ್ನು ಕಂಡು ಅದರ ಹೆಂಡರುಮಕ್ಕಳು ಶ್ರೀಕೃಷ್ಣನಿಗೆ ಶರಣು ಹೋಗಿ—"ಕಾಲಿ ಯಾನ ಜೀವದಾನ ಕೊಡಬೇಕು" ಎಂದು ಬಹಳ ದೈನ್ಯದಿಂದ ಬೇಡಿಕೊಂ ಡರು. ಆಗ ಶ್ರೀಕೃಷ್ಣನು ಕಾಲಿಯಾನಿಗೂ ಅವನ ಹೆಂಡರುಮಕ್ಕಳಿಗೂ-- "ನೀವು ಯಾರೂ ಇಲ್ಲಿ ಇರಕೂಡದು" ಎಂದು ಅಪ್ಪಣೆ ಮಾಡಿ ಕಾಲಿಯಾನಿಗೆ ಜೀವದಾನ ಕೊಟ್ಟನು. ಆ ಮೇಲೆ ಕಾಲಿಯಾನು ಶ್ರೀಕೃಷ್ಣನ ಸ್ತೋತ್ರಗ ಳನ್ನು ಮಾಡಿ ತನ್ನ ಯಾವತ್ತು ಪರಿವಾರದೊಡನೆ ಆ ಮಡುವನ್ನು ಬಿಟ್ಟು ಎರಡನೆ ಕಡೆಗೆ ಹೊರಟು ಹೋದನು.

## ಪ್ರಲಂಬಾಸುರವಧ.

ಒಂದು ಸಾರೆ ರಾಮಕೃಷ್ಣರು ತಮ್ಮ ಗೆಳೆಯರಾದ ಗೋಪಾಲಕರನ್ನು ಕೂಡಿಕೊಂಡು ಒಬ್ಬರ ಮೇಲೊಬ್ಬರು ಚಿಗರಿಯಂತೆ ಜಿಗಿದಾಡುವ ಆಟವನ್ನು ಆಡುತ್ತಿದ್ದಾಗ ಪ್ರಲಂಬ ರಾಕ್ಷಸನು ಒಬ್ಬ ಗೋಪಾಲಕನ ವೇಷವನ್ನು ಧರಿಸಿ ರಾಮನನ್ನು ತನ್ನ ಮೇಲೆ ಹೊತ್ತುಕೊಂಡು ಒಯ್ಯಲಿಕ್ಕೆ ಹತ್ತಿದನು. ಆಗ

ರಾಮನು ಈ ರಾಕ್ಷಸನ ಕಪಟವನ್ನು ತಿಳಿದು ಅವನ ತಲೆಯ ಮೇಲೆ ತನ್ನ ವಜ್ರಮುಷ್ಟಿಯಿಂದ ಗುದ್ದಲಾಗಿ ಆ ರಾಕ್ಷಸನು ಅಲ್ಲಿಯೇ ಗತಪ್ರಾಣನಾದನು. ಈ ಪರಾಕ್ರಮವನ್ನು ಕಂಡು ಜನರು ರಾಮನಿಗೆ ಬಲದೇವನೆಂತಲೂ, ಬಲರಾಮನೆಂತಲೂ ಅನ್ನಲಿಕ್ಕೆ ಹತ್ತಿದರು.

ರಾಮಕೃಷ್ಣರ ಅತುಲ ಪರಾಕ್ರಮವನ್ನು ನೋಡಿ ಅವರ ಮೇಲೆ ಯಾವತ್ತು ಗೋಪಗೋಪಿಯರ ವಿಲಕ್ಷಣ ಭಕ್ತಿಯು ಕೂತಿತು. ಗರ್ಗಮುನಿಗಳು ನಂದನಿಗೆ ಒಂದು ಸಾರೆ ಹೇಳಿದ ಪ್ರಕಾರ ಶ್ರೀಕೃಷ್ಣನು ವಿಷ್ಣುವಿನ ಅವತಾರವಿರುತ್ತಾನೆಂದು ಅವರೆಲ್ಲರು ತಿಳಕೊಂಡು ಅವನನ್ನು ಪೂಜಿಸಹತ್ತಿದರು. ಶ್ರೀಕೃಷ್ಣನು ಮುಂಜಾನೆ ತನ್ನ ಆಕಳುಗಳನ್ನು ಅಟ್ಟಿಕೊಂಡು ಅವುಗಳನ್ನು ಮೇಯಿಸಲಿಕ್ಕೆ ಅಡವಿಗೆ ಒಯ್ಯುವಾಗಲೂ, ಅವನು ಸಂಜೆಗೆ ತನ್ನ ಕೊಳಲು ಊದುತ್ತ ಅಡವಿಯಿಂದ ಮನೆಗೆ ತಿರುಗಿ ಬರುವಾಗಲೂ ಯಾವತ್ತು ಆಬಾಲವೃದ್ಧ ಗೋಪಗೋಪಿಯರು ಅವನ ದರ್ಶನವನ್ನು ತೆಗೆದುಕೊಳ್ಳಲಿಕ್ಕೆ ಉತ್ಕಂಠಿತರಾಗಿ ತಮ್ಮ ತಮ್ಮ ಬಾಗಿಲುಗಳ ಮುಂದೆ ಬಂದು ನಿಲ್ಲುತ್ತಿದ್ದರು. ಹಾಗೂ ಶ್ರೀಕೃಷ್ಣನ ದರ್ಶನವಾದ ಕೂಡಲೆ ಅವರೆಲ್ಲರು ಆನಂದಸುಖವನ್ನು ಹೊಂದುತ್ತಿದ್ದರು. ಅವರು ನಿತ್ಯ ವ್ಯವಹಾರವನ್ನು ಮಾಡುತ್ತಿದ್ದರೂ, ಯಾವಾಗಲು ಶ್ರೀಕೃಷ್ಣನ ಧ್ಯಾನಾಸಕ್ತರಾಗಿ ಭಕ್ತಿರಸದಲ್ಲಿ ತರಂಗಿಸುತ್ತಿದ್ದರು. ಮನುಷ್ಯರಂತೂ ಇರಲಿ, ಮೂಕ ದನಗಳು ಸಹ ಶ್ರೀಕೃಷ್ಣನ ಮೇಲೆ ಅತಿಶಯ ಪ್ರೇಮವನ್ನು ಮಾಡುತ್ತಿದ್ದವು. ಅವನು ತನ್ನ ಮಂಜುಳವಾದ ಕೊಳಲು ಊದಿದ್ದನ್ನು ಕೇಳಿದ ಕೂಡಲೆ ಯಾವತ್ತು ದನಗಳು ಮೇಯುವದನ್ನು ಬಿಟ್ಟು ಹರ್ಷದಿಂದ ಚಿತ್ರದ ಗೊಂಬೆಗಳಂತೆ ತಟಸ್ಥವಾಗಿ ನಿಲ್ಲುತ್ತಿದ್ದವು. ಶ್ರೀಕೃಷ್ಣನು ಅವುಗಳನ್ನು ಕೂಗಿದ ಕೂಡಲೆ ಅವುಗಳು ಅವನ ಧ್ವನಿಯನ್ನು ಕೇಳಿದ ಮಾತ್ರದಿಂದ ತಮ್ಮ ಬಾಲಗಳನ್ನು ಎತ್ತರಿಸಿಕೊಂಡು ಅವನ ಕಡೆಗೆ ಓಡಿ ಬರುತ್ತಿದ್ದವು. ಶ್ರೀಕೃಷ್ಣನು ತಮ್ಮ ದೇವರು, ತಮ್ಮ ಈಶ್ವರನು ಎಂಬ ಭಾವನೆಯಿಂದ ಯಾವತ್ತು ಗೋಪಗೋಪಿಯರು ಶ್ರೀಕೃಷ್ಣನ ನುಡಿಗಳನ್ನು ಕೇಳುವದಕ್ಕೆ ಉತ್ಸುಕರಾಗಿರುತ್ತಿದ್ದರು.

# ಶಕ್ರೋತ್ಸವ.

ಕೆಲವು ದಿವಸಗಳ ತರುವಾಯ ವರ್ಷಾಕಾಲವು ಮುಗಿದು ಶರತ್ಕಾಲವು ಆರಂಭವಾಗಲು, ನಂದಾದಿ ಯಾವತ್ತು ಗೋಪಾಲಕರು ಪ್ರತಿವರ್ಷದ ಸಾಂಪ್ರದಾಯದಂತೆ ಇಂದ್ರನನ್ನು ಸಂತೋಷಪಡಿಸುವದಕ್ಕಾಗಿ ಯಜ್ಞಯಾಗಾದಿಗಳನ್ನು ಮಾಡುವ ಸಿದ್ಧತೆಯನ್ನು ನಡೆಸಿದರು. ಆಗ ಶ್ರೀಕೃಷ್ಣನು ಅವರಿಗೆ--“ನೀವು ಈ ಉತ್ಸವವನ್ನು ಏಕೆ ಮಾಡುತ್ತೀರಿ?” ಎಂದು ಕೇಳಿದನು. ಅದಕ್ಕೆ ಒಬ್ಬ ವೃದ್ಧ ಗೋಪಾಲಕನು “ಕೃಷ್ಣಾ, ಇಂದ್ರನು ಮೇಘಗಳ ಅಧಿಪತಿಯು. ಅವನ ಅಪ್ಪಣೆಯಿಂದಲೇ ಮೇಘಗಳು ಭೂಮಿಯ ಮೇಲೆ ಮಳೆಯನ್ನು ಸುರಿಸುವದರಿಂದ ಮನುಷ್ಯರಿಗೆ ತಿನ್ನಲಿಕ್ಕೆ ಕಾಳುಕಡಿಗಳೂ, ದನಗಳಿಗೆ ತಿನ್ನಲಿಕ್ಕೆ ಹುಲ್ಲು ಮೇವೂ ವಿಪುಲವಾಗಿ ಬೆಳೆಯುವವು. ಮೇಘಗಳು ಸರಿಯಾಗಿ ಮಳೆಯನ್ನು ಸುರಿಸದೆ ಇದ್ದರೆ ನಮಗೆ ದುರ್ಭಿಕ್ಷೆಯು ತಟ್ಟುವದು. ನೀರು ಇಲ್ಲದಿದ್ದರೆ ನಾವು ಬದುಕುವ ಬಗೆ ಯಾವದು?” ಎಂದು ನುಡಿದನು. ಆಗ ಶ್ರೀಕೃಷ್ಣನು--“ಮನುಷ್ಯರು ತಮ್ಮ ಜೀವನೋಪಾಯಗಳನ್ನೇ ಆದಿದೈವತವೆಂದು ತಿಳಿದು ಅವುಗಳನ್ನು ಪೂಜಿಸಬೇಕು. ಬ್ರಾಹ್ಮಣರು ವೇದಗಳನ್ನು ಪೂಜಿಸುವರು; ಕ್ಷತ್ರಿಯರು ಶಸ್ತ್ರಗಳನ್ನು ಪೂಜಿಸುವರು; ಕೃಷಿ ಮಾಡುವವರು ನೇಗಿಲಗಳನ್ನು ಪೂಜಿಸುವರು. ನಾವು ಗೋಪಾಲಕರು ಗೋರಕ್ಷಣದಿಂದ ಉಪಜೀವನ ಮಾಡುವ ಕಾರಣ ಗೋವುಗಳನ್ನೇ ಪೂಜಿಸಬೇಕು. ಹಾಗೂ ಗೋವುಗಳಿಗೆ ಹುಲ್ಲು ಕೊಡುವ ಗೋವರ್ಧನ ಗಿರಿಯನ್ನು ಪೂಜಿಸಬೇಕು. ನಮಗೂ ಇಂದ್ರನಿಗೂ ಏನೂ ಸಂಬಂಧವಿಲ್ಲ. ಆದುದರಿಂದ ಇಂದ್ರನ ಪ್ರೀತ್ಯರ್ಥವಾಗಿ ಯಜ್ಞ ಮಾಡುವ ಕಾರಣವಿಲ್ಲ” ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಗೋಪಾಲಕರು ಶ್ರೀಕೃಷ್ಣನ ಮಾತಿಗೆ ಒಪ್ಪಿಕೊಂಡು ಇಂದ್ರನಿಗೆ ಯಜ್ಞ ಮಾಡುವದನ್ನು ಬಿಟ್ಟುಕೊಟ್ಟು ಆಕಳುಗಳ ಮತ್ತು ಗೋವರ್ಧನ ಗಿರಿಯ ಪೂಜೆಯನ್ನು ಮಾಡುವದಕ್ಕಾಗಿ ತಮ್ಮ ತಮ್ಮ ಆಕಳುಗಳನ್ನು ತರತರದ ಹೂವಿನ ಸರಗಳಿಂದ ಶೃಂಗರಿಸಿ, ಅವುಗಳ ಕೊಂಬುಗಳಿಗೆ ಹೂವಿನ ತುರಾಯಿಗಳನ್ನೂ, ನವಿಲುಗರಿಗಳನ್ನೂ ಕಟ್ಟಿ, ಅವುಗಳ ಕೊರಳಲ್ಲಿ ದೊಡ್ಡ ಗಂಟೆಗಳನ್ನು ನೇತಾಡಿಸುತ್ತ, ಗೋವರ್ಧನ ಪರ್ವತಕ್ಕೆ ಹೋದರು. ಮತ್ತು

ಆ ಪರ್ವತಕ್ಕೆ ಪ್ರದಕ್ಷಿಣೆಯನ್ನು ಹಾಕಿ ಬ್ರಾಹ್ಮಣರಿಂದ ಗಿರಿಯಜ್ಞವನ್ನು ಮಾಡಿಸಿ, ಬ್ರಾಹ್ಮಣರನ್ನು ಆರಂಭ ಮಾಡಿಕೊಂಡು ಚಾಂಡಾಲರ ವರೆಗೆ ಯಾವತ್ತರಿಗೂ ಅನ್ನದಾನ ಮಾಡಿ, ತಮ್ಮ ತಮ್ಮ ಆಕಳುಗಳ ಹಿಂದೆ ಕುಣಿದು ಬಗೆ ಬಗೆಯ ಆಟಗಳನ್ನು ಆಡಿದರು.

ಗೋಪಾಲಕರು ವರ್ಷಂಪ್ರತಿಯಂತೆ ತಮ್ಮ ಉತ್ಸವ ಮಾಡುವದನ್ನು ಬೇಕಂತೇ ಬಿಟ್ಟರೆಂದು ಇಂದ್ರನು ಸಿಟ್ಟಿಗೆದ್ದು ಅವರನ್ನು ನಾಶ ಮಾಡುವದಕ್ಕಾಗಿ ಆ ಕಾಲದಲ್ಲಿ ಪೃಥ್ವಿಯ ಮೇಲೆ ಭಯಂಕರವಾದ ಮಳೆಯನ್ನು ಸುರಿಸಿದನು. ಇದರಿಂದ ಪೃಥ್ವಿಯು ಜಲಮಯವಾಗಿ ಗೋಪಗೋಪಿಯರೂ, ಅವರ ದನಕರುಗಳೂ ಮಹಾಸಂಕಟಕ್ಕೆ ಒಳಗಾದರು. ಎರಡು ದಿವಸಗಳಾದರೂ ಮಳೆಯು ನಿಲ್ಲಲಿಲ್ಲ. ಸೂರ್ಯಚಂದ್ರರ ದರ್ಶನವೇ ಆಗಲಿಲ್ಲ. ಇದರಿಂದ ಗೋಪಾಲಕರು ಬಹಳ ಅಂಜಿ ಹೋಗಿ ತಮ್ಮನ್ನು ರಕ್ಷಿಸೆಂದು ಶ್ರೀಕೃಷ್ಣನಿಗೆ ಬೇಡಿಕೊಂಡರು. ಆಗ ಅವನು ಗೋವರ್ಧನ ಪರ್ವತವನ್ನು ಕಿತ್ತು ಅದನ್ನು ಅವರ ಮೇಲೆ ಚತ್ತರಿಗೆಯಂತೆ ಹಿಡಿದು ಅವರನ್ನೂ, ಅವರ ದನಕರುಗಳನ್ನೂ, ಯಾವತ್ತು ಸಾಮಾನುಗಳನ್ನೂ ಉಳಿಸಿದನು. ಏಳು ದಿವಸ ಬಿಟ್ಟೂ ಬಿಡದೆ ಮಳೆಯು ಎಷ್ಟು ಸುರಿದರೂ ಅವರಿಗೆ ಲೇಶವಾದರೂ ಹಾನಿಯಾಗಲಿಲ್ಲ. ಕಡೆಗೆ ಇಂದ್ರನು ದಣಿದು ಮಳೆಯನ್ನು ನಿಲ್ಲಿಸಿದನು. ಆಗ ಶ್ರೀಕೃಷ್ಣನು ಅವರೆಲ್ಲರನ್ನು ಅವರ ಮನೆಗಳಿಗೆ ಸುರಕ್ಷಿತವಾಗಿ ಮುಟ್ಟಿಸಿ ಗೋವರ್ಧನ ಪರ್ವತವನ್ನು ಮೊದಲಿದ್ದಂತೆ ಅದರ ಸ್ಥಳದಲ್ಲಿ ಕುಳ್ಳಿರಿಸಿದನು. ಈ ಅಲೌಕಿಕ ಚಮತ್ಕಾರವನ್ನು ನೋಡಿ ಜನರು ಶ್ರೀಕೃಷ್ಣನಿಗೆ ಉಪೇಂದ್ರನೆಂದು ಆನಂದದಿಂದ ಅಭಿಷೇಕವನ್ನು ಮಾಡಿದರು.

ಈ ಪ್ರಕಾರ ಶ್ರೀಕೃಷ್ಣನು ಗೋಪಗೋಪಿಯರನ್ನೂ, ಅವರ ದನಕರುಗಳನ್ನೂ ಬದುಕಿಸಿದ ಬಳಿಕ ಶರದೃತುವಿನಲ್ಲಿ ನಾನಾಪ್ರಕಾರದ ಆಟಗಳಿಂದ ಅವರ ಮನೋರಂಜನವನ್ನು ಮಾಡಹತ್ತಿದನು. ಮಳೆಯು ಚನ್ನಾಗಿ ಆದ ಕಾರಣ ಸೊಕ್ಕಿಗೆ ಬಂದ ಎತ್ತುಗಳನ್ನು ತಂದು ಅವುಗಳನ್ನು ಕಾದಾಡಿಸಿದನು. ಈ ಕಾದಾಟವನ್ನು ನೋಡಲಿಕ್ಕೆ ಅನೇಕ ಗೋಪಗೋಪಿಯರು ಹಿಂಡುಹಿಂಡಾಗಿ ಬಂದು ಕೂಡುತ್ತಿದ್ದರು. ಈ ಕಾದಾಟದಲ್ಲಿ ಯಾವದಾದರೂ ಎತ್ತು ಸೊ

ಕ್ಕಿಗೆ ಬಂದು ಬಹಳ ಜಿಗಿದಾಡಿ ಜನರ ಮೈಮೇಲೆ ಹೋಗಿ ಅಪಾಯ ಮಾಡು ವಂತೆ ಲಕ್ಷಣಗಳು ಕಂಡ ಕೂಡಲೆ ಶ್ರೀಕೃಷ್ಣನು ತನ್ನ ಅಲೌಕಿಕ ಶಕ್ತಿಯಿಂದ ಅದನ್ನು ಅಲ್ಲಿಂದಲ್ಲಿಯೇ ಜಗ್ಗಿ ಹಿಡಿದು ಹಣ್ಣು ಮಾಡುತ್ತಿದ್ದನು. ಇದರಂತೆ ಅವನು ಹಾಲು ಕುಡಿದು ಪುಷ್ಟರಾಗಿದ್ದ ಗೋಪಾಲಕರ ಕುಸ್ತಿಗಳನ್ನು ಆಗಾಗ್ಗೆ ಮಾಡಿಸುತ್ತಿದ್ದನು. ಹಾಗೂ ರಾತ್ರಿಯ ಕಾಲದಲ್ಲಿ ಹಿಟ್ಟಿನಂತೆ ಬೆಳ್ಳ ಗಾದ ಬೆಳದಿಂಗಳು ಬಿದ್ದಾಗ ಅವನು ಅನೇಕ ಮಂದಿ ಗೋಪಗೋಪಿಯರನ್ನು ಕೂಡಿಸಿ ಅವರೊಡನೆ ರಾಸಕ್ರೀಡೆಯನ್ನು ಆಡುತ್ತಿದ್ದನು. ಈ ರಾಸಕ್ರೀಡೆಯ ಲ್ಲಿ ಒಬ್ಬ ಹೆಂಗಸು, ಒಬ್ಬ ಗಂಡಸು ಕೂಡಿದಂಥ ಅನೇಕ ತಂಡುಗಳು ಕೂಡಿ ಶ್ರೀಕೃಷ್ಣನ ಹಾಡುಗಳನ್ನು ಹಾಡುತ್ತಲೂ, ತಾಳಗತ್ತಿನ ಮೇಲೆ ಕುಣಿಯುತ್ತ ಲೂ ಕೋಲಾಟವನ್ನು ಆಡುತ್ತಿದ್ದರು. ಇವರ ನಡುವೆ ಶ್ರೀಕೃಷ್ಣನು ಒಮ್ಮೊಮ್ಮೆ ನಿಂತು ಕೊಳಲು ಊದುತ್ತಿದ್ದನು. ಒಮ್ಮೊಮ್ಮೆ ಬಲರಾಮನು ಈ ಗುಂಪಿನ ನಡುವೆ ನಿಂತು ಕುಣಿಯುತ್ತಿದ್ದನು. ಈ ರೀತಿಯಿಂದ ರಾಸಕ್ರೀಡೆಯನ್ನಾಡಿ ಗೋಪಿಯರ ಮನಸ್ಸನ್ನು ರಂಜನ ಮಾಡುತ್ತಿದ್ದ ಶ್ರೀಕೃಷ್ಣನು ತನ್ನ ಮಂಜುಳ ವಾದ ಧ್ವನಿಯಿಂದ ಕೊಳಲು ಊದುವದನ್ನು ಕೇಳಿದ ಕೂಡಲೆ ಗೋಪಿಯ ರು ತಮ್ಮ ಮನೆಗೆಲಸಗಳನ್ನು ಅಲ್ಲಿಂದಲ್ಲೇ ಬಿಟ್ಟುಕೊಟ್ಟು ಶ್ರೀಕೃಷ್ಣನ ದರ್ಶನ ಕ್ಕಾಗಿ ಓಡಿ ಬರುತ್ತಿದ್ದರು. ಹಾಗೂ ತಮ್ಮ ತಮ್ಮ ಪತಿಗಳನ್ನೂ, ಬಂಧುಗ ಳನ್ನೂ ಕೂಡಿಕೊಂಡು ಶ್ರೀಕೃಷ್ಣನ ಸಂಗಡ ರಾಸಕ್ರೀಡೆಯ ಆಟವನ್ನು ಆಡಿ ಆನಂದವನ್ನು ಹೊಂದುತ್ತಿದ್ದರು. ಹಾಗೂ ಅವರು ಅಹೋರಾತ್ರಿ ಶ್ರೀಕೃಷ್ಣನ ಧ್ಯಾನದಲ್ಲಿದ್ದು ಅವನ ಗುಣವಿಶೇಷಗಳನ್ನು ಹಾಡಿ ಅವನ ಭಕ್ತಿ ಯಲ್ಲಿ ಲೀನರಾಗಿರುತ್ತಿದ್ದರು.

ಒಂದು ದಿವಸ ಮೂರೂ ಸಂಜೆಯ ಹೊತ್ತಿನಲ್ಲಿ ಶ್ರೀಕೃಷ್ಣನು ಗೋಪ ಗೋಪಿಯರನ್ನು ಕೂಡಿಕೊಂಡು ರಾಸಕ್ರೀಡೆಯನ್ನು ಆಡುತ್ತಿದ್ದಾಗ ಒಂದು ಅಚ್ಚ ಕರೇಬಣ್ಣದ-ಚೂಪು ಕೋಡಿನ-ಕಣ್ಣು ಕೆಂಪಗೆ ಮಾಡಿದ-ಉನ್ಮ ತ್ತವಾದ ಎತ್ತು ಮೈಮೇಲೆ ಅರ್ಧ ಜೂಲು ಹಾಕಿಕೊಂಡು ತನ್ನ ಗಂಗೆ ದೊಗಲನ್ನು ನೆಲಕ್ಕೆ ಮುಟ್ಟಿಸುತ್ತಲೂ, ತನ್ನ ಮೈ ತಿಕ್ಕಿ ಗಿಡಗಳನ್ನು ಕೆಡ ವುತ್ತಲೂ, ತನ್ನ ಕಾಲಿನ ಕೊಳಗಗಳಿಂದ ನೆಲವನ್ನು ಕೆದರುತ್ತಲೂ ಗವ

ಳಿಗರ ದಡ್ಡಿಯೊಳಗೆ ಹೊಕ್ಕು ಅತ್ತಿಂದಿತ್ತ, ಇತ್ತಿಂದತ್ತ, ಭರದಿಂದ ಓಡಾಡಲಿಕ್ಕೆ ಹತ್ತಿತು. ಈ ರಾಕ್ಷಸನಂಥ ಎತ್ತಿನ ಹಾವಳಿಯನ್ನು ನೋಡಿ ಆಕಳುಗಳೂ, ಎತ್ತುಗಳೂ ಮನುಷ್ಯರೂ ಅಂಜಿ ಹೌಹಾರಿ ನಾಲ್ಕೂ ದಿಕ್ಕಿಗೆ ಓಡಿ ಹೋದರು. ಈ ಕೊಬ್ಬಿದ ಎತ್ತಿನ ಢರಕಿಯನ್ನು ಕೇಳಿ ಗಬ್ಬಿದ್ದ ಆಕಳುಗಳು ಅಂಜಿ ಕಂದುಹಾಕಿದವು. ಇದರಿಂದ ಆ ದಡ್ಡಿಯೊಳಗಿನ ಜನರೊಳಗೆ ಹಾಹಾಕಾರವು ಹುಟ್ಟಿತು. ಆಗ ಶ್ರೀಕೃಷ್ಣನು—"ಅಂಜಬೇಡಿರಿ. ನಾನು ಬಂದೆನು" ಎಂದು ಅನ್ನುತ್ತ ಓಡಿ ಹೋಗಿ ಆ ಎತ್ತಿನ ಬೆನ್ನು ಹತ್ತಿ ಕಸುವಿನಿಂದ ಕೈಚಪ್ಪಾಳೆಯನ್ನು ಹೊಡೆದನು. ಆಗ ಆ ಎತ್ತು ಶ್ರೀಕೃಷ್ಣನ ಕಡೆಗೆ ತಿರುಗಿತು. ಶ್ರೀಕೃಷ್ಣನು ಅಲ್ಲಿಂದ ಏನೂ ಉಲುಕಲಿಲ್ಲ. ಈ ಪ್ರಕಾರ ಶ್ರೀಕೃಷ್ಣನು ತನ್ನ ಮುಂದೆ ಕಲ್ಲಿನಂತೆ ನಿಂತುಕೊಂಡದ್ದನ್ನು ನೋಡಿ ಆ ಎತ್ತು ಸಿಟ್ಟಿನಿಂದ ಆವನ ಹೊಟ್ಟೆಯೊಳಗೆ ತನ್ನ ಕೊಂಬುಗಳಿಂದ ಇರಿಯುವದಕ್ಕಾಗಿ ಅವುಗಳನ್ನು ಮುಂದೆ ಮಾಡಿ ಅವನ ಮೇಲೆ ಜಿಗಿಯಿತು. ಕೂಡಲೆ ಶ್ರೀಕೃಷ್ಣನು ಅದರ ಕೊಂಬುಗಳನ್ನು ಗಟ್ಟಿಯಾಗಿ ಹಿಡಿದು, ಅದನ್ನು ಸ್ವಲ್ಪ ಹೊತ್ತು ಅಲ್ಲಿಯೇ ನಿಲ್ಲಿಸಿ, ಆ ಮೇಲೆ ಕೆಲವು ಹೆಜ್ಜೆಗಳ ತನಕ ಅದನ್ನು ಹಿಂದಕ್ಕೆ ನೂಕಿಸುತ್ತ ವೈದು, ಅದರ ಎರಡೂ ಕೊಂಬುಗಳಿಗೂ, ಕುತ್ತಿಗೆಗೂ ತನ್ನ ವಸ್ತ್ರದಿಂದ ಮುರುಗಾಳಿ ಹಾಕಿದನು. ಆಗ ಆ ಎತ್ತು ಧುಪ್ಪನೆ ನೆಲದ ಮೇಲೆ ಬಿತ್ತು. ತರುವಾಯ ಶ್ರೀಕೃಷ್ಣನು ಅದರ ಒಂದು ಕೋಡಿನ ಮೇಲೆ ಕಾಲು ಕೊಟ್ಟು ಅದನ್ನು ಕಸುವಿನಿಂದ ಕಿತ್ತು, ಅದೇ ಕೋಡಿನಿಂದ ಅದರ ಮೇಲೆ ಒಂದು ಏಟು ಒಳಿತಾಗಿ ಹೊಡೆದನು. ಅದರಿಂದ ಅದು ತತ್ಕಾಲವೇ ರಕ್ತ ಕಾರಿ ಪ್ರಾಣ ಬಿಟ್ಟಿತು. ಈ ಪ್ರಕಾರ ಶ್ರೀಕೃಷ್ಣನು ತನ್ನ ಅಲೌಕಿಕ ಶಕ್ತಿಯಿಂದ ಆ ಗವಳಿಗರ ಪ್ರಾಣದ ಮೇಲೆ ಬಂದ ಸಂಕಟವನ್ನು ತಪ್ಪಿಸಿದ ನಂತರ ಎಲ್ಲರು ಆಶ್ಚರ್ಯಚಕಿತರಾದರು. ಆ ಮೇಲೆ ಶ್ರೀಕೃಷ್ಣನು ಆ ಶರದೃತುವಿನ ಬೆಳದಿಂಗಳದಲ್ಲಿ ಗೋಪಗೋಪಿಯರ ಸಂಗಡ ಪುನಃ ರಾಸಕ್ರೀಡೆಯನ್ನು ಆಡಿದನು.

---

# ೨. ಮಥುರಾಪರ್ವ.



ಶ್ರೀಕೃಷ್ಣನ ಅದ್ಭುತ ಪರಾಕ್ರಮದ ಹಾಗೂ ಅವನ ಮೇಲೆ ಗೋಕುಲದೊಳಗಿನ ಯಾವತ್ತು ಜನರ--ಮುಖ್ಯವಾಗಿ ಗೋಪಿಕಾಸ್ತ್ರೀಯರ--ದೇವ ನಿರ್ವಿಶೇಷ ಭಕ್ತಿಯ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಿತು. ಆದುದರಿಂದ ಗೋಕುಲದಲ್ಲಿ ಈಶ್ವರನ ವಿಭೂತಿಯು ನಿರ್ಮಾಣವಾಗಿರುತ್ತಾನೆಂದು ದೂರ ದೂರಿನ ಜನರು ಶ್ರೀಕೃಷ್ಣನ ದರ್ಶನಕ್ಕಾಗಿ ಬರಲಿಕ್ಕೆ ಹತ್ತಿದರು. ಶ್ರೀಕೃಷ್ಣನ ಹದಿನಾರು ಹದಿನೇಳು ವರ್ಷಗಳ ಮನೋಹರ ಮೂರ್ತಿಯನ್ನೂ, ಅವನ ಅಮಾನುಷ ಶಕ್ತಿಯನ್ನೂ, ಜನರ ಮನಸ್ಸನ್ನು ಆಕರ್ಷಣ ಮಾಡುವ ಅವನ ದಿವ್ಯ ಸ್ವಭಾವವನ್ನೂ ಕಂಡು ಅವನ ದರ್ಶನಕ್ಕೆ ಬರುವ ಜನರಲ್ಲಿ ಅವನ ಬಗ್ಗೆ ವಿಶೇಷ ಮೋಹವುಂಟಾಗಲಿಕ್ಕೆ ಹತ್ತಿತು. ಎಲ್ಲಿ ನೋಡಿದಲ್ಲಿ ಜನರು ಶ್ರೀಕೃಷ್ಣನನ್ನು ಸ್ತುತಿ ಸ್ತೋತ್ರ ಮಾಡಲಿಕ್ಕೆ ಆರಂಭಿಸಿದರು. ಅವರು ತಮ್ಮ ತಮ್ಮೊಳಗೆ--"ಇವನು ನಂದನ ಪುತ್ರನಿರದೆ ವಸುದೇವನ ಪುತ್ರನಿರುತ್ತಾನೆ. ವಸುದೇವನ ಹೊಟ್ಟೆಯಿಂದ ಶ್ರೀವಿಷ್ಣುವು ಹುಟ್ಟತಕ್ಕವನಿರುತ್ತಾನೆಂದು ಶ್ರೀ ನಾರದರು ಕಂಸನಿಗೆ ಹೇಳಿದ ಪ್ರಕಾರ ಕೃಷ್ಣನು ಹುಟ್ಟಿರುತ್ತಾನೆ" ಎಂದು ಮಾತಾಡಲಾರಂಭಿಸಿದರು. ಬಲರಾಮಕೃಷ್ಣರು ಬಣ್ಣದಿಂದ ಬೇರೆ ಬೇರೆ ಇದ್ದಾಗ್ಯೂ ಅವರ ಮುಖಲಕ್ಷಣಗಳು ಒಂದೇ ಇದ್ದ ಕಾರಣ ಜನರ ಮನಸ್ಸಿನಲ್ಲಿ ಸಹಜವಾಗಿ ಮೇಲೆ ಹೇಳಿದ ಪ್ರಕಾರ ತಿಳುವಳಿಕೆಯು ಹುಟ್ಟಿತು. ವಸುದೇವನು ರೋಹಿಣಿಯನ್ನೂ, ಬಲರಾಮನನ್ನೂ ಮಥುರೆಗೆ ಕರಕೊಂಡು ಬಾರದೆ ಗೋಕುಲದಲ್ಲಿಯೇ ಏಕೆ ಬಿಟ್ಟನೆಂಬದರ ಗುಟ್ಟು ಜನರಿಗೆ ಈಗ ಹೊಳೆಯಹತ್ತಿತು. ವಸುದೇವನು ಕಂಸನ ಅಂಜಿಕೆಯಿಂದ ದೇವಕಿಯ ಎಂಟನೆ ಮಗನನ್ನು ಗೋಕುಲಕ್ಕೆ ಕಳವಿನಿಂದ ಒಯ್ದು ನಂದನ ಮನೆಯಲ್ಲಿಟ್ಟು ನಂದನ ಮಗಳನ್ನು ಮಥುರೆಗೆ ತಂದು ಕಂಸನಿಗೆ ಒಪ್ಪಿಸಿದನೆಂದು ಜನರು ಮಾತಾಡಹತ್ತಿದರು. ಈ ಜನವಾರ್ತೆಯು ಅತ್ತಿಂದ

ಇತ್ತ, ಇತ್ತಿಂದ ಅತ್ತ ಹಬ್ಬುತ್ತ ಕಂಸನ ಕಿವಿಗೆ ಹೋಗಿ ಮುಟ್ಟಿತು. ಆಗ ಕಂಸನು—"ನಾನು ವಸುದೇವದೇವಕಿಯರ ಎಂಟು ಮಂದಿ ಮಕ್ಕಳನ್ನು ಕೊಂದದ್ದೆಲ್ಲ ವ್ಯರ್ಥವಾಯಿತು. ನನ್ನ ಶತ್ರುವು ನನ್ನ ರಾಜಧಾನಿಯನ್ನು ಬಿಟ್ಟು ಮೂರೇ ಹರದಾರಿಯೊಳಗಿರುತ್ತಿದ್ದು ಅವನು ಸುರಕ್ಷಿತವಾಗಿ ಬೆಳೆದು ಮೆರೆಯುತ್ತಿದ್ದಾನೆ. ನಾನು ಇಷ್ಟು ಪರಾಕ್ರಮಿಯೂ, ಶೋಧಕನೂ, ಚಾಣಾಕ್ಷನೂ ಇದ್ದು ಈ ದರಿದ್ರನಾದ ವಸುದೇವನು ನನ್ನನ್ನು ವಂಚಿಸಿದನೇನು?" ಎಂದು ನುಡಿದು ಸಿಟ್ಟಿನಿಂದ ವಸುದೇವನ ಮೇಲೆ ಕರಕರನೆ ಹಲ್ಲು ತಿಂದು, ಅವನ ಮೇಲೆ ಸೇಡು ತೀರಿಸಿಕೊಳ್ಳದೆ ಬಿಡಬಾರದೆಂದು ನಿಶ್ಚಯಿಸಿದನು. ಕಂಸನು ವಸುದೇವದೇವಕಿಯರನ್ನು ಕ್ಷಮಿಸಿ ಅವರನ್ನು ಕಾರಾಗೃಹದಿಂದ ಬಿಡುಗಡೆ ಮಾಡಿದಂದಿನಿಂದ ಅಂದರೆ ಕಳೆದ ೧೬-೧೭ ವರ್ಷಗಳಿಂದ ಅವರ ಮೇಲೆ ವಕ್ರ ದೃಷ್ಟಿಯನ್ನಿಟ್ಟಿದ್ದಿಲ್ಲ. ವಸುದೇವನು ಬಡವನೂ ಸಾತ್ವಿಕನೂ ಇರುತ್ತಾನೆಂದು ಅವನನ್ನು ದುರ್ಲಕ್ಷ್ಯ ಮಾಡಿದ್ದನು. ಆಗಿನಿಂದ ವಸುದೇವನು ಅಜ್ಞಾತವಾಸದಲ್ಲಿದ್ದುಕೊಂಡು ಈಶ್ವರಭಜನೆಯಲ್ಲಿ ತೊಡಗಿರುತ್ತಿದ್ದನು. ಈಗ ಕಂಸನ ಲಕ್ಷ್ಯವು ವಸುದೇವನ ಕಡೆಗೂ, ಕೃಷ್ಣನ ಕಡೆಗೂ ತಿರುಗಿತು. ಆದರೆ ವಸುದೇವನನ್ನು ಕೊಲ್ಲುವದರಿಂದ ತನ್ನ ಶತ್ರುವನ್ನು ಕೊಂದ ಪರಿಣಾಮವು ಸರ್ವಥಾ ಆಗುವದಿಲ್ಲೆಂದು ತಿಳಿದು ವಸುದೇವನ ಕೃತಘ್ನತನಕ್ಕಾಗಿ ಅವನನ್ನು ನಾಲ್ಕು ಜನರೊಳಗೆ ಅವಮಾನ ಮಾಡಬೇಕೆಂದು ಕಂಸನು ನಿಶ್ಚಯ ಮಾಡಿದನು. ಹಾಗೂ ತಾನು ಈ ಪ್ರಕಾರ ಅವನನ್ನು ಅವಮಾನ ಮಾಡಿದರೆ ಕೃಷ್ಣನ ಬಗ್ಗೆ ಹುಟ್ಟಿರುವ ಜನವಾರ್ತೆಯು ಸತ್ಯವೋ ಮಿಥ್ಯವೋ ಎಂಬುದು ವಸುದೇವನ ಬಾಯಿಂದ ತಿಳಿದೀತೆಂದು ಸಹ ಕಂಸನು ತರ್ಕಿಸಿದನು. ಆದುದರಿಂದ ಅವನು ಒಂದು ದಿನ ಮಧ್ಯರಾತ್ರಿಯಲ್ಲಿ ಊರೊಳಗೆ ನಿಶ್ಶಬ್ದವಾದ ತರುವಾಯ ಯಾದವ, ವೃಷ್ಣಿ, ಭೋಜ ಮುಂತಾದ ಯಾವತ್ತು ಸರದಾರರನ್ನು ತನ್ನ ಸಭೆಗೆ ಕರೆಸಿದನು. ಸಭೆಗೆ ವಸುದೇವ, ಕಂಕ, ಸತ್ಯಕ, ದಾರುಕ, ವಿಪೃಥು, ಬಭ್ರು (ಅಕ್ರೂರ), ಕೃತವರ್ಮ, ಭೂರಿಶ್ರವ, ಅಂಧಕ ಮುಂತಾದ ದೊಡ್ಡ ದೊಡ್ಡ ವೀರರು ಒಂದರು. ಕಂಸನು ಕಾರಾಗೃಹದಲ್ಲಿದ್ದ ತನ್ನ ತಂದೆಯಾದ ಉಗ್ರಸೇನನನ್ನೂ ಕರೆಸಿದನು. ಆ ಮೇಲೆ ಅವನು ಅವರೆ

ಲ್ಲರಿಗೆ--“ನೀವೆಲ್ಲರು ಯದುಕುಲದ ಅಭಿಮಾನಿಗಳೂ, ಆಧಾರಸ್ತಂಭರೂ ಇರುತ್ತೀರಿ. ಗೋಕುಲದಲ್ಲಿ ನಂದಪುತ್ರನೆನಿಸಿಕೊಳ್ಳುವ ನನ್ನ ಶತ್ರುವಾದ ಕೃಷ್ಣನ ಉತ್ಕರ್ಷವು ದಿವಸ ದಿವಸಕ್ಕೆ ಹೆಚ್ಚಾಗುತ್ತ ನಡೆದಿರುತ್ತಿದ್ದು ಅವನು ನನ್ನನ್ನು ಸಂಹಾರ ಮಾಡುವ ಯತ್ನದಲ್ಲಿರುತ್ತಾನೆಂದು ನಿಮ್ಮೆಲ್ಲರಿಗೆ ಗೊತ್ತಿರಬಹುದು. ಅವನ ವಿಷಯದಲ್ಲಿ ನನಗೆ ಯಾವತ್ತು ನಿಜಸಂಗತಿಗಳು ತಿಳಿಯದೆ ಇರುವದರಿಂದ ನಾನು ಅಜ್ಞಾನವೆಂಬ ಕತ್ತಲದಲ್ಲಿ ಇರುತ್ತೇನೆ. ಅವನು ಒಬ್ಬ ದಿವ್ಯ ಅವತಾರ ಪುರುಷನಂತೆ ಅದ್ಭುತ ಮತ್ತು ಅಲೌಕಿಕ ಕೃತ್ಯಗಳನ್ನು ಮಾಡುತ್ತಾನೆಂತಲೂ, ಹೊರಗೆ ನೋಡುವವರಿಗೆ ಅವನು ಒಬ್ಬ ಕ್ಷುಲ್ಲಕ ಗವಳಿಗನಂತೆ ಕಾಣುತ್ತಾನೆಂತಲೂ ಕೇಳುತ್ತೇನೆ. ಶ್ರೀನಾರದರ ಹೇಳಿಕೆಯ ಪ್ರಕಾರ ನಾನು ದೇವಕಿಯ ಎಂಟು ಮಂದಿ ಮಕ್ಕಳನ್ನು ಕೊಲ್ಲಲಿಕ್ಕೆ ಎಷ್ಟೋ ವರ್ಷ ಅವಿಶ್ರಾಂತಶ್ರಮ ಮಾಡಿದೆನು. ಆದರೆ ವಸುದೇವನು ಒಂದೇ ರಾತ್ರಿಯಲ್ಲಿ ನನ್ನ ಎಲ್ಲ ಶ್ರಮವನ್ನು ವ್ಯರ್ಥ ಮಾಡಿದನೆಂತಲೂ, ಗೋಕುಲದಲ್ಲಿ ಇರುವ ಕೃಷ್ಣನು ನಂದಯಶೋದೆಯರ ಮಗನಿರದೆ ವಸುದೇವ ದೇವಕಿಯರ ಎಂಟನೆ ಮಗನಿರುತ್ತಾನೆಂತಲೂ ಜನಜನಿತವಾಗಿರುವದು. ಈ ವರ್ತಮಾನವು ನಿಮ್ಮ ಕಿವಿಗೂ ಮುಟ್ಟಿರಬಹುದು. ವಸುದೇವನು ನನ್ನ ಅನ್ನವನ್ನುಂಡು ನನ್ನ ಕೂಡ ಕೃತಘ್ನತನವನ್ನು ಮಾಡಿದನೆಂಬುದು ಮೇಲಿನ ಸಂಗತಿಯಿಂದ ಸ್ಪಷ್ಟವಾಗುತ್ತದೆ. ವಸುದೇವನು ನನ್ನ ತಂಗಿಯ ಗಂಡನಿರುವ ಕಾರಣ ಅವನನ್ನು ಕೊಲ್ಲುವದರಿಂದ ನನಗೆ ಬ್ರಹ್ಮಹತ್ಯ ದೋಷವು ಬರುವದೆಂದು ನಾನು ಇವತ್ತಿನ ವರೆಗೆ ಆ ಉಸಾಬರಿಗೆ ಹೋಗಲಿಲ್ಲ. ಇನ್ನು ಮುಂದೂ ಹೋಗುವದಿಲ್ಲ. ಆದರೆ ಅವನು ಮಾತ್ರ ನನ್ನನ್ನು ಕೊಲ್ಲಿಸುವ ಉಪಾಯವನ್ನು ಯೋಜಿಸಿ ತನ್ನ ಮೋರೆಗೆ ಕಪ್ಪು ಹಚ್ಚಿಕೊಂಡು ಯಾವತ್ತು ಯಾದವರ ಮೋರೆಗೆ ಕಪ್ಪು ಹಚ್ಚಿರುತ್ತಾನೆ” ಎಂದು ವಸುದೇವನನ್ನು ಬಹಳವಾಗಿ ನಿಂದಿಸಿದನು. ಇದಕ್ಕೆ ವಸುದೇವನು ಕ್ಷಮಾಶೀಲವೃತ್ತಿಯಿಂದ ಏನೂ ಉತ್ತರ ಕೊಡದೆ ಸುಮ್ಮನಿದ್ದನು. ಆದರೆ ವಯೋವೃದ್ಧ ಸರ್ವಮಾನ್ಯ ಯಾದವನಾದ ಅಂಧಕನು ಕಂಸನಿಗೆ--“ಕಂಸಾ, ವಸುದೇವನು ತನ್ನ ಮಗನ ಪ್ರಾಣ ಉಳಿಸುವದಕ್ಕಾಗಿ ಅವನನ್ನು ಬಚ್ಚಿಟ್ಟಿದ್ದು ಎಂದಿಗೂ ಅಪರಾಧವಲ್ಲ.

ತನ್ನ ಸ್ವಂತ ಜೀವವನ್ನು ವೆಚ್ಚ ಮಾಡಿ ಮಗನ ಜೀವವನ್ನು ಉಳಿಸುವದು ತಂದೆಯ ಧರ್ಮವಿರುತ್ತದೆ. ನೀನು ಮಾತ್ರ ನಿಷ್ಕಾರಣವಾಗಿ ಅವನ ಏಳು ಮಂದಿ ಮಕ್ಕಳನ್ನು ಕೊಂದು ಹಾಕಿ ದೊಡ್ಡ ಪಾಪವನ್ನು ಮಾಡಿದೆ. ನೀನು ಸ್ವತಃ ಕುಲನಾಶಕನಿರುತ್ತಿದ್ದು ಊರಲ್ಲಿ ನಾನಾಪ್ರಕಾರದ ದುಶ್ಚಿಹ್ನಗಳು ಆಗ ಲಿಕ್ಕೆ ಹತ್ತಿರುತ್ತವೆ. ಈ ಎಲ್ಲ ದುಶ್ಚಿಹ್ನಗಳ ಮೇಲಿಂದ ನಿನ್ನ ಕೇಡುಗಾಲವು ಸಮೀಪಿಸಿದಂತೆ ಕಾಣುತ್ತದೆ. ನೀನು ಪೂಜ್ಯ ಮತ್ತು ಸನ್ಮಾನ್ಯ ವಸುದೇವ ನನ್ನು ಈಗ ಬಹಳವಾಗಿ ನಿಂದಿಸಿ ಅವನ ಮನಸ್ಸು ನೋಯಿಸುವಂಥ ಭಾಷಣ ವನ್ನು ಮಾಡಿದ ಸಂಗತಿಯು ಅದರ ಪೂರ್ವ ಚಿಹ್ನವೆಂದು ನನ್ನ ಬುದ್ಧಿಗೆ ತಿಳಿ ಯುತ್ತದೆ. ನೀನು ಭವಿಷ್ಯತ್ಕಾಲದ ಕೇಡನ್ನು ತಪ್ಪಿಸಬೇಕೆಂದು ನಿಶ್ಚಯವಾಗಿ ಅಪೇಕ್ಷಿಸುತ್ತಿದ್ದರೆ, ವಸುದೇವನ ಕ್ಷಮೆಯನ್ನು ಬೇಡಿಕೊಂಡು ವಸುದೇವನ ಮುಖಾಂತರ ಶ್ರೀಕೃಷ್ಣಬಲರಾಮರನ್ನು ಸನ್ಮಾನದಿಂದ ಕರೆಯಿಸಿ ಅವರ ಸಂಗಡ ವೈರಭಾವವನ್ನು ಬಿಟ್ಟು ಪ್ರೀತಿಯಿಂದ ವರ್ತಿಸು" ಎಂದು ಹೇಳಿದನು. ಈ ಅಂಧಕನ ಸ್ಪಷ್ಟೋಕ್ತಿಯ ಭಾಷಣವನ್ನು ಕೇಳಿ ಕಂಸನಿಗೆ ಬಹಳ ಸಿಟ್ಟು ಬಂತು. ಆದರೂ ಅವನು ಅದನ್ನು ಹೊರಗೆ ತೋರಿಸದೆ ಅಕ್ರೂರನ ಕಡೆಗೆ ಮೋರೆ ತಿರುವಿ- "ಅಕ್ರೂರಾ, ನೀನು ವೃಂದಾವನಕ್ಕೆ ಹೋಗಿ ನನ್ನ ಸೋ ದರಳಿಯರಾದ ಕೃಷ್ಣನನ್ನೂ, ಬಲರಾಮನನ್ನೂ ಇಲ್ಲಿಗೆ ಕರಕೊಂಡು ಬಾ. ನನಗೆ ಅವರನ್ನು ನೋಡಬೇಕೆಂಬ ಕುತೂಹಲವು ಬಹಳವಾಗಿರುತ್ತದೆ. ಅವರು ಮಲ್ಲವಿದ್ಯೆಯಲ್ಲಿ ಬಹಳ ನಿಷ್ಣಾತರಿರುತ್ತಾರೆಂದು ಕೇಳುತ್ತೇನೆ. ನಮ್ಮಲ್ಲಿ ಚಾಣೂರ ಮತ್ತು ಮುಷ್ಟಿಕರೆಂಬ ಪ್ರಖ್ಯಾತ ಮಲ್ಲರಿರುತ್ತಾರೆ. ಆದುದರಿಂದ ನಾವು ಧನುರ್ಯಾಗ (ಕುಸ್ತಿಕಣ) ವನ್ನು ಮಾಡಿ ಅವರ ಕೂಡ ಹುದ್ದರಿ ಗಳನ್ನು ನಿಲ್ಲಿಸಿ ಮಲ್ಲಯುದ್ಧವನ್ನು (ಕುಸ್ತಿಯನ್ನು) ಮಾಡಿಸೋಣ. ಕೃಷ್ಣ ಬಲರಾಮರೊಡನೆ ನಂದನನ್ನೂ, ಇತರ ಯಾದವರನ್ನೂ ಸಹ ಕರಕೊಂಡು ಬಾ" ಎಂದು ಹೊಟ್ಟೆಯೊಳಗೆ ಸಿಟ್ಟು ಇದ್ದಾಗ್ಯೂ ಹೊರಗೆ ಮಾತ್ರ ಪ್ರೇಮ ವನ್ನು ತೋರಿಸುವಂಥ ಭಾಷಣವನ್ನು ಮಾಡಿ ಸಭೆಯನ್ನು ವಿಸರ್ಜಿಸಿದನು.

ಈ ಪ್ರಕಾರ ಕಂಸನು ಶ್ರೀಕೃಷ್ಣನನ್ನು ಕುಸ್ತಿಯಾಡಲಿಕ್ಕೆ ಕರೆಯಿಸ ಬೇಕೆಂದು ನಿಶ್ಚಯಿಸಿದಾಗ್ಯೂ ನಾರದರು ಹೇಳಿದ ಭವಿಷ್ಯವನ್ನು ನೆನಪಿಗೆ

ತಂದು ಕೃಷ್ಣನು ಮಥುರೆಗೆ ಬಂದರೆ ತನ್ನನ್ನು ಕೊಂದಾನೆಂಬ ಅಂಜಿಕೆಯಿಂದ ತನ್ನ ತಮ್ಮನಾದ ಕೇಶಿ ದೈತ್ಯನನ್ನು ಕರೆಯಿಸಿ—"ತಮ್ಮಾ, ನೀನು ಈಗ ಲೇ ವೃಂದಾವನಕ್ಕೆ ಹೋಗಿ ಕೃಷ್ಣನು ಇಲ್ಲಿ ಬರುವದಕ್ಕಾಗಿ ಹೊರಡುವ ಮುಂಚೆ ಅವನನ್ನು ಅಲ್ಲಿಯೇ ಕೊಂದು ಬಿಡು" ಎಂದು ಹೇಳಿದನು. ಆ ಪ್ರಕಾರ ಕೇಶಿ ದೈತ್ಯನು ಒಂದು ಭಯಂಕರವಾದ ಕುದುರೆಯ ರೂಪವನ್ನು ಧರಿಸಿ ಅಲ್ಲಿಗೆ ಹೋಗಿ ಕೃಷ್ಣನನ್ನು ತನ್ನ ಹಲ್ಲಿನಿಂದ ಕಡಿಯಲಿಕ್ಕೆ ಯತ್ನಿಸಲು ಕೃಷ್ಣನು ಆ ಕುದುರೆಯ ಬಾಯೊಳಗೆ ತನ್ನ ಕೈಯನ್ನು ಕೊಟ್ಟನು. ಆಗ ಆ ಕುದುರೆಯು ಕೃಷ್ಣನ ಕೈಯನ್ನು ತನ್ನ ಹಲ್ಲಿನಿಂದ ಜಬಡುವಾಗ ಕೃಷ್ಣನು ಆ ದೈತ್ಯನ ಹಲ್ಲುಗಳನ್ನೆಲ್ಲ ಕಿತ್ತು, ಅದರ ಒಸಡಿಗಳನ್ನು ಹರಿಯಲಾಗಿ ಅದರ ಬಾಯಿಯು ರಕ್ತಮಯವಾದುದರಿಂದ ಅದು ಅವನನ್ನು ಕಚ್ಚುವದನ್ನು ಬಿಟ್ಟು ತನ್ನ ಮುಂಗಾಲಿನಿಂದ ಕೃಷ್ಣನಿಗೆ ಒದಿಯಲಿಕ್ಕೆ ಹೋಯಿತು. ಆಗ ಅವನು ಅದರ ಎರಡೂ ಕಾಲುಗಳನ್ನು ಹಿಡಿದು ಅದನ್ನು ನೆಲಕ್ಕೆ ಅಪ್ಪಳಿಸಲಾಗಿ ಅದು ಧುಪ್ಪನೆ ನೆಲದ ಮೇಲೆ ಬಿದ್ದು ಪ್ರಾಣಬಿಟ್ಟಿತು.

ಇತ್ತಲಾ ಕಂಸನ ಅಪ್ಪಣೆಯ ಮೇರೆಗೆ ಅಕ್ರೂರನು ಒಂದು ವಿಸ್ತೀರ್ಣ ವಾದ ಬೈಲಲ್ಲಿ ಮಲ್ಲರ ಕುಸ್ತಿಯ ಸಲುವಾಗಿ ಒಂದು ಸಭಾರಂಗವನ್ನು ಸಿದ್ಧ ಮಾಡಿಸಿದನು. ಹಾಗೂ ಅದರ ಸುತ್ತಲು ಸಾವಿರಾರು ಜನ ಪ್ರೇಕ್ಷಕರಿಗೆ ಕುಳಿ ತುಕೊಳ್ಳುವ ಸಲುವಾಗಿ ಯೋಗ್ಯವಾದ ಸ್ಥಳವನ್ನು ಮಾಡಿಸಿದನು. ಕೇಶಿವ ಧದ ವರ್ತಮಾನವು ತಿಳಿದದ್ದರಿಂದ ಕಂಸನು ಸಂತಪ್ತನಾಗಿ ಈ ಸಭಾರಂಗದ ಸಿದ್ಧತೆಯನ್ನು ತಾನೇ ನೋಡಿ ಬಂದದ್ದಲ್ಲದೆ ಚಾಣೂರ ಮತ್ತು ಮುಷ್ಟಿಕ ಮಲ್ಲ ರನ್ನು ಕರೆಯಿಸಿ "ನೀವು ಇಷ್ಟು ದಿವಸ ನನ್ನ ಅನ್ನವನ್ನು ಉಂಡಿರಿ. ಹಾಗೂ ನಾನು ನಿಮಗೆ ಉಚಿತವಾದ ಸತ್ಕಾರವನ್ನು ಮಾಡುತ್ತ ಬಂದೆನು ನಾಳೆ ನಿಮಗೆ ನನ್ನ ಉಪಕಾರವನ್ನು ತೀರಿಸುವ ಯೋಗ್ಯ ಸಮಯವು ಬಂದಿರುತ್ತದೆ. ಆ ಗವ ಳಿಗರ ಹುಡುಗರಾದ ಕೃಷ್ಣ ಬಲರಾಮರು ಕುಸ್ತಿಯಾಡಲಿಕ್ಕೆ ಇಲ್ಲಿಗೆ ಬರತ ಕ್ಕವರಿದ್ದಾರೆ. ಅವರನ್ನು ನೀವು ಕುಸ್ತಿಯಲ್ಲಿ ಕೆಡವಿದ ಬಳಿಕ ವಿಲಂಬ ಮಾಡದೆ ಕೊಂದುಬಿಡತಕ್ಕದ್ದು. ಅವರು ಹುಡುಗರಿರುತ್ತಾರೆಂದು ಮೈಮರೆತು ನಡೆಯ ಬೇಡಿರಿ. ಅವರು ಒಳ್ಳೇ ಕಸುವಿನವರೂ, ಎದೆಗಾರರೂ ಇರುತ್ತಾರೆಂದು ಅವರ

ಪ್ರಸಿದ್ಧಿಯುಂಟು. ಆದುದರಿಂದ ಚನ್ನಾಗಿ ಎಚ್ಚರಿಕೆಯಿಂದ ಕುಸ್ತಿಯನ್ನು ಆಡಿರಿ" ಎಂದು ಹೇಳಿದನು. ಅದಕ್ಕೆ ಅವರು–"ಯಾಕಾಗಲೊಲ್ಲದು. ನೀವು ಅದರ ದುಗಡನ್ನು ಎಳ್ಳಷ್ಟಾದರೂ ಹಚ್ಚಿಕೊಳ್ಳಬೇಡಿರಿ" ಎಂದು ಧೈರ್ಯೋಕ್ತಿಗಳನ್ನಾಡಿ ತಮ್ಮ ಮನೆಗೆ ಹೋದರು. ಇಷ್ಟಾದರೂ ಕಂಸನ ಮನಸ್ಸಿಗೆ ಸಮಾಧಾನವಾಗಲಿಲ್ಲ. ಈ ಮಲ್ಲರು ಎಷ್ಟಾದರೂ ಮನುಷ್ಯರು. ಇವರನ್ನು ರಾಮಕೃಷ್ಣರು ಗೆದ್ದಾರು. ಆದುದರಿಂದ ಅವರನ್ನು ಆನೆಯ ಕಾಲಿನಿಂದ ತುಳಿಸಿ ಕೊಲ್ಲಬೇಕೆಂದು ಕಂಸನು ವಿಚಾರ ಮಾಡಿ ಕುವಲಯಾಪೀಡವೆಂಬ ತನ್ನ ಅತಿ ಕಸುವುಳ್ಳ ಮತ್ತು ಅತಿ ಸೊಕ್ಕಿಗೆ ಬಂದ ಆನೆಯ ಮಾವುತನನ್ನು ಕರೆಯಿಸಿ–"ಶ್ರೀಕೃಷ್ಣನು ಸಭಾರಂಗದ ಬಾಗಿಲದ ಸಮೀಪಕ್ಕೆ ಬಂದ ಕ್ಷಣವೇ ಅವನ ಮೇಲೆ ನಿನ್ನ ಆನೆಯು ಸಹಜವಾಗಿ ಸಾಗಿ ಹೋಗಿ ಅವನನ್ನು ಕೊಂದು ಬಿಡುವಂತೆ ಅದನ್ನು ಅಲ್ಲಿ ನಿಲ್ಲಿಸಿರು; ಅಂದರೆ ಅದು ಕೃಷ್ಣನನ್ನೂ, ಅವನ ಸಂಗಡ ಬರುವ ಬಲರಾಮನನ್ನೂ ಕೊಲ್ಲುವದು. ಆ ಮೇಲೆ ನಾನು ಈ ಇಬ್ಬರ ಬಲದ ಮೇಲೆ ಅವಲಂಬಿಸಿರುವ ವಸುದೇವನನ್ನೂ, ಅವನ ಬೆಂಬಲಗಾರರಾದ ಅನೇಕ ಮಂದಿ ಯಾದವರನ್ನೂ ಕೊಂದು ಸುಖದಿಂದ ರಾಜ್ಯವನ್ನು ಆಳುವೆನು. ನೀನು ಈ ನನ್ನ ಅತ್ಯಂತ ಪ್ರಿಯವಾದ ಕಾರ್ಯವನ್ನು ಮಾಡಿದರೆ ನಿನಗೆ ನೀನು ಬೇಡಿದ ಪ್ರತಿಫಲವನ್ನು ಕೊಡುವೆನು" ಎಂದು ಹೇಳಿದನು.

ಈ ಪ್ರಕಾರ ಕಂಸನು ಗುಪ್ತರೀತಿಯಿಂದ ಶ್ರೀಕೃಷ್ಣ ಬಲರಾಮರನ್ನು ಕೊಲ್ಲಿಸುವ ಯತ್ನವನ್ನು ನಡೆಸಿದನು. ಆದರೆ ಕಂಸನು ನಡೆಸಿದ ಈ ದುಷ್ಟ ಯತ್ನವನ್ನು ನೋಡಿ ಯಾದವ, ವೃಷ್ಣಿ, ಭೋಜ ಮುಂತಾದ ಯಾವತ್ತು ಕ್ಷತ್ರಿಯರು ಕಂಸನನ್ನೇ ನುಂಗಿ ನೀರು ಕುಡಿಯಬೇಕೆಂದು ಯೋಚಿಸಿದರು. ಕಂಸನ ಬಲಾತ್ಕಾರದ ಮತ್ತು ಅನ್ಯಾಯದ ಕಾರಭಾರದ ದೆಸೆಯಿಂದ ಬೇಸತ್ತು ಅನೇಕ ಜನ ಪ್ರತಿಷ್ಠಿತ ಯಾದವರು ಕುರು, ಪಾಂಚಾಲ ಮುಂತಾದ ಪರದೇಶಗಳಿಗೆ ಹೋಗಿದ್ದರು. ಕಂಸನು ವಸುದೇವನಿಗೆ ಮಾಡಿದ ನಿಂದೆಯನ್ನೂ, ಶ್ರೀಕೃಷ್ಣನ ಕಡೆಗೆ ಏನೂ ಅಪರಾಧವಿಲ್ಲದೆ ಅವನನ್ನು ಕೊಲ್ಲಿಸಲಿಕ್ಕೆ ನಡೆಸಿದ ಒಳಸಂಚನ್ನೂ ಕಂಡು ಶ್ರೀಕೃಷ್ಣನನ್ನು ಹೇಗೆ ಉಳಿಸಿ ಕಂಸನನ್ನು ನಿರ್ಮೂಲ ಮಾಡಬೇಕೆಂದು ವಿಚಾರ ಮಾಡಿ ಅವರು ಅಕ್ರೂರನಿಗೆ—

"ಅಪ್ಪಾ ಅಕ್ರೂರಾ, ನೀನು ದಯಮಾಡಿ ಇಲ್ಲಿ ನಡೆದ ಎಲ್ಲ ಕಪಟ ಕೃತ್ಯಗಳನ್ನು ಒಂದೂ ಬಿಡದ ಹಾಗೆ ಕೃಷ್ಣನಿಗೆ ಮುಂಗಡವಾಗಿ ತಿಳಿಸು. ನೀನು ಇಷ್ಟೊಂದು ಉಪಕಾರವನ್ನು ಮಾಡಿದರೆ ನಿನಗೆ ವಸುದೇವನ ಸಮೀಪದ ಆಪ್ತನಾದ ಆಹುಕನ ಮಗಳಾದ ಸುಗಾತ್ರಿಯನ್ನು ಮದುವೆ ಮಾಡಿಕೊಡುವೆವು" ಎಂದು ಹೇಳಿ ಅವನ ಮನವೊಲಿಸಿದರು. ಅವನ ಮನಸ್ಸಿನ ಒಲವು ಮುಂಚಿನಿಂದಲೂ ಶ್ರೀಕೃಷ್ಣನ ಕಡೆಗೆ ಇತ್ತು. ಆದುದರಿಂದ ಅವನು ಅವರ ಮಾತಿಗೆ ಒಪ್ಪಿಕೊಂಡು ರಾಮಕೃಷ್ಣರನ್ನು ಕರೆದುಕೊಂಡು ಬರುವದಕ್ಕಾಗಿ ತನ್ನ ರಥದಲ್ಲಿ ಕುಳಿತು ಬಹಳ ಉತ್ಸುಕುತೆಯಿಂದ ವೃಂದಾವನಕ್ಕೆ ಹೊರಟು ಹೋದನು.

ಅಕ್ರೂರನು ಮಥುರೆಯನ್ನು ಬಿಟ್ಟು ವೃಂದಾವನಕ್ಕೆ ಮುಟ್ಟಿದಾಗ ಸಂಜೆಯಾಗಲಿಕ್ಕೆ ಬಂದಿತ್ತು. ಅಕ್ರೂರನ ರಥದ ಸಪ್ಪಳವಾದ ಕೂಡಲೆ ವೃಂದಾವನದೊಳಗಿನ ಗೋಪಗೋಪಿಯರು ಆ ರಥದ ಕಡೆಗೆ ಬಂದರು. ಆಗ ಅಕ್ರೂರನು--"ನಂದನ ಮನೆಯು ಎಲ್ಲಿ ಇರುತ್ತದೆ?" ಎಂದು ಅವರನ್ನು ಕೇಳಿಕೊಂಡು ನಂದನ ಮನೆಗೆ ಹೋಗಿ ನಂದನಿಗೂ, ರಾಮಕೃಷ್ಣರಿಗೂ ಆಲಿಂಗನವನ್ನು ಕೊಟ್ಟು ನಂದನಿಗೆ--"ಕಂಸನು ಪ್ರಖ್ಯಾತ ಮಲ್ಲರ ಕುಸ್ತಿಗಳನ್ನು ಮಾಡಿಸಬೇಕೆಂದು ನಿಶ್ಚಯಿಸಿದ್ದು ಅವನು ಬಲರಾಮ ಕೃಷ್ಣರ ಕುಸ್ತಿಯ ಕೌಶಲ್ಯವನ್ನೂ, ಅಗಾಧ ಶಕ್ತಿಯನ್ನೂ ಪರೀಕ್ಷಿಸುವದಕ್ಕಾಗಿ ಅವರನ್ನು ಕರಕೊಂಡು ಬರಲಿಕ್ಕೆ ನನಗೆ ಆಜ್ಞಾಪಿಸಿದ್ದಾನೆ. ಇದಲ್ಲದೆ ವಸುದೇವನಿಗೆ ತನ್ನ ಈ ಇಬ್ಬರು ಮಕ್ಕಳನ್ನು ನೋಡುವ ಕುತೂಹಲವಾಗಿರುತ್ತದೆ. ದೇವಕಿಯಂತೂ ಹದಿನಾರು ಹದಿನೇಳು ವರ್ಷ ತನ್ನ ಮಗನ ಸಲುವಾಗಿ ಹೊಟ್ಟೆಬೇನೆ ಹಚ್ಚಿಕೊಂಡಿರುವಳು. ಆದುದರಿಂದ ನಾಳೆ ಬೆಳಿಗ್ಗೆ ರಾಮಕೃಷ್ಣರೂ, ನಂದಾದಿಗೋಪರೂ ನನ್ನ ಕೂಡ ಹೊರಡತಕ್ಕದ್ದು" ಎಂದು ತಿಳಿಸಿದನು. ಆ ರಾತ್ರಿ ಅಕ್ರೂರನ ಭೋಜನವಾದ ನಂತರ ಅಕ್ರೂರನೂ ಶ್ರೀಕೃಷ್ಣನೂ ಏಕಾಂತದಲ್ಲಿ ಕುಳಿತು ಬಹಳೊತ್ತಿನ ತನಕ ಮಾತಾಡಿದರು. ಮಾರನೇ ದಿವಸ ಬೆಳಿಗ್ಗೆ ಶ್ರೀಕೃಷ್ಣನು ಮಥುರೆಗೆ ಹೊರಡುವದನ್ನು ನಿಶ್ಚಯ ಮಾಡಿದ್ದನ್ನು ಕೇಳಿ ಯಶೋದೆಯು ಅವನು ಇನ್ನುಮೇಲೆ ತಮ್ಮ

ಕಡೆಗೆ ತಿರುಗಿ ಬರುವದಿಲ್ಲೆಂದು ಬಹಳ ಶೋಕ ಮಾಡಿದಳು. ಆಗ ಶ್ರೀಕೃಷ್ಣನು ಯಶೋದೆಗೆ- "ಅವ್ವಾ, ನಾನು ಹುಟ್ಟಿದಂದಿನಿಂದ ನೀನು ನನ್ನನ್ನು ರಕ್ಷಣ ಮಾಡಿರುತ್ತೀ. ಆದುದರಿಂದ ನೀನು ನನ್ನ ಹಡೆದ ತಾಯಿಗಿಂತ ಹೆಚ್ಚು ಪ್ರಿಯಳಿರುವೆ. ಇಡೀ ಜಗತ್ತಿನಲ್ಲಿ ಎಲ್ಲರು ನಿನಗೇ ನನ್ನ ತಾಯಿಯೆಂದು ಮಂಗಳವನ್ನು ಮಾಡುವರು. ಕಂಸನು ನನ್ನನ್ನು ಮಲ್ಲಯುದ್ಧದ ಸಲುವಾಗಿ ಆವ್ಹಾನ ಮಾಡಿರುವದರಿಂದ ನಾನು ಅಲ್ಲಿಗೆ ಹೋಗಲೇಬೇಕು. ಯುದ್ಧರಂಗದಲ್ಲಿ ಯಶಸ್ಸು ಸಂಪಾದಿಸಲಿಕ್ಕೆ ಹವಣಿಸುವವರು ಇದನ್ನು ಹೇಗೆ ಅಲ್ಲಗಳೆಯಬೇಕು? ನನ್ನ ದಯಾಂಬುಧಿಯೇ, ನೀನು ನನಗೆ ಆನಂದದಿಂದ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟು ನನಗೆ ಯಶಸ್ಸು ಪ್ರಾಪ್ತವಾಗಲೆಂದು ಆಶೀರ್ವಾದವನ್ನು ಕೊಡು" ಎಂದು ಅವಳಿಗೆ ಸಮಾಧಾನ ಮಾಡಿ ಬೇಡಿಕೊಂಡನು. ಆಗ ಅವಳು ಅವನಿಗೆ ಅಪ್ಪಣೆಯನ್ನು ಕೊಡಲಾಗಿ ಅವನು ಬಲರಾಮನನ್ನೂ, ನಂದನನ್ನೂ, ಮಲ್ಲವಿದ್ಯಾನಿಷ್ಣಾತರಾದ ಕೆಲವು ಗೋಪಾಲಕರನ್ನೂ ಕರಕೊಂಡು ಹೊರಟನು. ಶ್ರೀಕೃಷ್ಣನು ಹೋಗುವದನ್ನು ನೋಡಿ ಅವನ ರಥದ ಸಮೀಪದಲ್ಲಿ ನೂರಾರು ಮಂದಿ ಗೋಪಗೋಪಿಯರು ಶೋಕಾಕುಲರಾಗಿ--"ಕೃಷ್ಣಾ, ನಮ್ಮನ್ನು ಬಿಟ್ಟು ನೀನು ಹೋಗುವಿಯಾ? ಇವತ್ತಿನ ತನಕ ನಮ್ಮನ್ನು ಸ್ವಪ್ನಸೃಷ್ಟಿಯಲ್ಲಿಟ್ಟು ಈಗೀಗ ನಮ್ಮನ್ನು ಎಚ್ಚರಪಡಿಸಿದೆಯಾ? ನೀನು ನಮ್ಮ ಮೇಲೆ ಸಾವಿರಾರು ಸಂಕಟಗಳು ಬಂದಾಗ್ಗೆ ರಕ್ಷಣ ಮಾಡಿ ನಮ್ಮ ಮೇಲೆ ಪ್ರೇಮ ಮಾಡಿದೆ. ಈಗ ಮಾತ್ರ ನಮ್ಮನ್ನು ದುಃಖ ಸಮುದ್ರದಲ್ಲಿ ಕೆಡವಿ ಹೊರಟು ಹೋಗುವಿಯಾ? ನೀನು ನಿಜವಾಗಿ ದೇವರಿದ್ದು ನಮ್ಮ ಬಡವರಲ್ಲಿ ಹುಟ್ಟಿರುವದನ್ನು ನೋಡಿ ನಮಗೆ ಯಾವಾಗಲು ಆಶ್ಚರ್ಯವಾಗುತ್ತಿತ್ತು. ಕಡೆಗೆ ಅದೇ ಸತ್ಯವಾಯಿತು. ನಮ್ಮ ಪೂರ್ವಜನ್ಮದ ಪುಣ್ಯದಿಂದ ನೀನು ನಿನ್ನ ಬಾಲ್ಯವನ್ನು ನಮ್ಮಲ್ಲಿ ಕಳೆದೆ. ಇನ್ನು ಮೇಲೆ ನಿನ್ನ ಮುಖಚಂದ್ರಮನು ನಮ್ಮ ದೃಷ್ಟಿಗೆ ಬೀಳಲಾರನು. ಹಾಗೂ ನಿನ್ನ ಮುರಲಿಯ (ಕೊಳಲಿನ) ಮಂಜುಳವಾದ ಧ್ವನಿಯು ನಮ್ಮ ದುರ್ದೈವಿ ಕಿವಿಗಳಿಗೆ ಕೇಳಿಸಲಾರದು. ನೀನು ನಮ್ಮನ್ನು ಬಿಟ್ಟು ಹೋದರೂ ನಾವು ಯಾವಾಗಲು ನಿನ್ನ ಲೀಲೆಯನ್ನು ನೆನಪು ಮಾಡಿಕೊಂಡು ನಿನ್ನ ಸ್ಮರಣೆಯಲ್ಲಿ

ಯೇ ವೇಳೆಯನ್ನು ಕಳೆಯುವೆವು" ಎಂದು ನುಡಿದರು. ಅವರೆಲ್ಲರಿಗೂ ಶ್ರೀಕೃಷ್ಣನು ಯೋಗ್ಯ ರೀತಿಯಿಂದ ಸಮಾಧಾನ ಮಾಡಿದ ನಂತರ ಅಕ್ರೂರನು ತನ್ನ ರಥದಲ್ಲಿ ಶ್ರೀಕೃಷ್ಣ, ಬಲರಾಮ, ನಂದ ಮುಂತಾದವರನ್ನು ಕುಳ್ಳಿರಿಸಿಕೊಂಡು ಒಂದು ಪ್ರಹರದೊಳಗಾಗಿ ಮಥುರೆಗೆ ಹೋಗಿ ಮುಟ್ಟಿದನು. ಅಕ್ರೂರನು ಅವರೆಲ್ಲರಿಗೆ ತನ್ನ ಮನೆಯಲ್ಲಿ ಇಳಿದುಕೊಂಡು ತನ್ನ ಮನೆಯನ್ನು ಪುನೀತ ಮಾಡಬೇಕೆಂದು ಬೇಡಿಕೊಂಡನು. ಆಗ ಬಲರಾಮ ಕೃಷ್ಣರು— "ನಾವು ವಸುದೇವನನ್ನು ಕಂಡುಬಂದ ನಂತರ ನಿನ್ನ ಮನೆಗೆ ಬರುವೆವು. ಈಗ ಸದ್ಯಕ್ಕೆ ಊರಹೊರಗೆ ಇಳಿಯುತ್ತೇವೆ" ಎಂದು ಹೇಳಿ ಒಂದು ತೋಟದಲ್ಲಿ ಇಳಕೊಂಡರು. ಅಲ್ಲಿ ಅವರೆಲ್ಲರು ಯಮುನಾ ನದಿಯೊಳಗೆ ಸ್ನಾನಮಾಡಿ ತಮ್ಮ ಸಂಗಡ ಕಟ್ಟಿಕೊಂಡು ಒಯ್ದಿದ್ದ ಬುತ್ತಿರೊಟ್ಟಿಯನ್ನು ತಿಂದರು. ಆ ಮೇಲೆ ಬಲರಾಮ ಕೃಷ್ಣರು ಮತ್ತು ಅವರ ಸಂಗಡ ಬಂದಿದ್ದ ಮಲ್ಲಬಂಧುಗಳು ಆ ನಗರವನ್ನು ನೋಡಿ ಬರಲಿಕ್ಕೆ ನಗರದೊಳಗೆ ಹೋಗಿ ಅಲ್ಲಲ್ಲಿ ಸ್ವಲ್ಪ ಅಡ್ಡಾಡಿದ ನಂತರ ಅರಮನೆಯ ಕಡೆಗೂ, ಧನುರ್ಯಾಗದ ಕಡೆಗೂ ಹೋಗಬೇಕೆಂದು ಅರಸನ ಅರಿವೆ ಒಗೆಯುವ ಅಗಸನ ಅಂಗಡಿಗೆ ಹೋಗಿ–"ನಮಗೆ ಸುಂದರ ಅರಿವೆಗಳನ್ನು ಕೊಡು" ಎಂದು ಕೇಳಿದರು. ಆಗ ಅವನು ಹೆಮ್ಮೆಯಿಂದ—"ದರಿದ್ರರೇ, ನಿಮ್ಮಂಥ ಕಾಡ ಮನುಷ್ಯರಿಗೆ ಸುಂದರ ಅರಿವೆಗಳು ಏತಕ್ಕೆ ಬೇಕು?" ಎಂದು ಅವರಿಗೆ ಹೀಯಾಳಿಸಿ ಮಾತಾಡಿದನು. ಇದರಿಂದ ಶ್ರೀಕೃಷ್ಣನು ಸಿಟ್ಟಿಗೆದ್ದು ಅವನ ಕಪಾಳ ಮೇಲೆ ಒಂದು ಏಟು ಕುಟ್ಟಲಾಗಿ ಅವನು ಕ್ಷಣಾರ್ಧದಲ್ಲಿ ಯಮಸದನಕ್ಕೆ ಹೋದನು. ಆ ಮೇಲೆ ಅವರಿಬ್ಬರೂ ತಮಗೆ ಬೇಕಾದ ತರ ತರದ ಸುಂದರ ಅರಿವೆಗಳನ್ನು ಆರಿಸಿ ತಮ್ಮ ಮೈಮೇಲೆ ಹಾಕಿಕೊಂಡು ಉಳಿದವುಗಳನ್ನು ಅಲ್ಲಿಯೇ ಬಿಟ್ಟುಕೊಟ್ಟು ಮುಂದೆ ಒಬ್ಬ ಹೂಗಾರನ ಅಂಗಡಿಗೆ ಹೋಗಿ ತಮಗೆ ಹಾಕಿಕೊಳ್ಳಲಿಕ್ಕೆ ಹೂವಿನ ಮಾಲೆಗಳನ್ನು ಬೇಡಿದರು. ಆಗ ಅವನು ಅವುಗಳನ್ನು ಅವರಿಗೆ ಪ್ರೇಮದಿಂದ ಕೊಟ್ಟನು. ಆ ಮಾಲೆಗಳನ್ನು ಬಲರಾಮಕೃಷ್ಣರು ತಮ್ಮ ಕೊರಳಲ್ಲಿ ಹಾಕಿಕೊಂಡು ಹೂಗಾರನನಿಗೆ ಹರಿಸಿ, ಮುಂದೆ ದಾರಿ ಹಿಡಿದು ಹೋಗುತ್ತಿರಲು, ರಾಜನಿಗಾಗಿ ಸುಗಂಧ ದ್ರವ್ಯಗಳನ್ನು ತೆಗೆದುಕೊಂಡು ಹೋಗುತ್ತಿದ್ದ ರಾಜನ ದಾಸಿಯಾದ ಕುಬ್ಜಾ ಎಂಬವಳನ್ನು ಅವರು ಕಂಡರು. ಅವಳು ಸುಂದರಿ

ಯು ಇದ್ದು ಅವಳ ಕುತ್ತಿಗೆಯೂ, ಎದೆಯೂ, ಟೊಂಕವೂ ಡೊಂಕಾಗಿದ್ದವು. ಶ್ರೀಕೃಷ್ಣನು ಅವಳನ್ನು ನೋಡಿ—"ನೀನು ಯಾರು? ಎಲ್ಲಿಗೆ ಹೊರಟೆ?" ಎಂದು ಕೇಳಿದನು. ಅದಕ್ಕೆ ಅವಳು—"ನಾನು ರಾಜನ ಪ್ರಸಿದ್ಧ ಕುಬ್ಜಾ ದಾಸಿಯೆಂಬುದು ನಿಮಗೆ ಹೇಗೆ ಗೊತ್ತಿಲ್ಲ? ನಾನು ರಾಜನಿಗಾಗಿ ಸುಗಂಧ ದ್ರವ್ಯವನ್ನು ತೆಗೆದುಕೊಂಡು ಹೋಗುತ್ತಿದ್ದೇನೆ" ಎಂದು ಉತ್ತರ ಕೊಟ್ಟಳು. ಇದನ್ನು ಕೇಳಿ ಶ್ರೀಕೃಷ್ಣನು-"ಹಾಗಾದರೆ ಈ ಸುಗಂಧ ದ್ರವ್ಯವನ್ನು ನಮಗೆ ಲೇಪನ ಮಾಡು" ಎಂದು ಹೇಳಿದನು. ಆಗ ಅವಳು ತಾನು ಒಯ್ಯುತ್ತಿದ್ದ ಸುಗಂಧ ದ್ರವ್ಯವನ್ನು ಆ ಇಬ್ಬರು ವೀರರಿಗೂ ಲೇಪನ ಮಾಡಿದಳು. ಆ ಮೇಲೆ ಕೃಷ್ಣನು ಆಕೆಯ ಟೊಂಕದ ಮೇಲೆ ಒದ್ದು, ಆಕೆಯ ಡೊಂಕತನವನ್ನು ತೆಗೆದು ಸರಿಮಾಡಿದನು. ಇದಕ್ಕಾಗಿ ಆ ದಾಸಿಯು ಭಗವಂತನನ್ನು ಬಹಳ ಕೊಂಡಾಡಿದಳು. ಆ ಮೇಲೆ ಬಲರಾಮಕೃಷ್ಣರು ತಮ್ಮ ಸುಂದರ ವಸ್ತ್ರಗಳಿಂದಲೂ, ಕೊರಳಲ್ಲಿಯ ಹೂವಿನ ಮಾಲೆಗಳಿಂದಲೂ, ಹಣೆಗೆ ಮತ್ತು ಮೈಗೆ ಹಚ್ಚಿಕೊಂಡ ಸುಗಂಧಗಳಿಂದಲೂ ಸುಶೋಭಿತರಾಗಿ, ಅರಮನೆಗೆ ಹೋಗಿ ಮುಟ್ಟಿ, ಧನುರ್ಯಾಗ ಮಂಟಪದ ಬಳಿಯಲ್ಲಿ ಪೂಜಿಸಿ ಇಟ್ಟಂಥ ಧನುಷ್ಯವನ್ನು ನೋಡಲಿಕ್ಕೆ ಹೋದರು. ಅಲ್ಲಿ ನೂರಾರು ಜನರು ಅದನ್ನು ನೋಡಲಿಕ್ಕೆ ನೆರೆದಿದ್ದರು. ಆಗ ಶ್ರೀಕೃಷ್ಣನು ಅದು ಎಷ್ಟು ಜಡವಿರುತ್ತದೆಂದು ತಾನು ಪರೀಕ್ಷಿಸುವೆನೆಂದು ಹೇಳಿ ಅದನ್ನು ಸಹಜವಾಗಿ ಮೇಲಕ್ಕೆತ್ತಿ, ಅದಕ್ಕೆ ಹೆದೆಯನ್ನೇರಿಸಿ ಅದರ ಹುರಿಯನ್ನು ಜಗ್ಗಲು, ಆ ಜೀರ್ಣವಾದ ಧನುಷ್ಯವು ಮುರಿದು ಪುಡಿ ಪುಡಿಯಾಯಿತು. ಈ ಧನುಷ್ಯವು ಮುರಿದ ಸಪ್ಪಳವನ್ನು ಕೇಳಿ ಅಲ್ಲಿ ಕೂಡಿದ ಜನರ ಕಿವಿಗಳು ಗಡ ಚಿಕ್ಕಿದವು. ಶ್ರೀಕೃಷ್ಣನ ಈ ಅದ್ಭುತ ಶಕ್ತಿಯನ್ನು ನೋಡಿ ಜನರಿಗೆ ಬಹಳ ಆಶ್ಚರ್ಯವೆನಿಸಿತು. ಆದರೆ ಅಲ್ಲಿಯ ಕಾವಲುಗಾರರು ಈ ವರ್ತಮಾನವನ್ನು ಕಂಸನಿಗೆ ತಿಳಿಸುವದಕ್ಕಾಗಿ ಲಗಬಗೆಯಿಂದ ಹೊರಟು ಹೋದರು. ಆ ಬಳಿಕ ರಾಮಕೃಷ್ಣರು ಮಲ್ಲಯುದ್ಧದ ಸಭಾಮಂಟಪಕ್ಕೆ ಹೋಗುವದಕ್ಕಾಗಿ ಹೊರಟು ಅಲ್ಲಿಗೆ ಬಂದು ಮುಟ್ಟಿದರು. ಆ ಸಭಾಮಂಟಪದ ಬಾಗಿಲದ ಹತ್ತರ ರಾಜನ ಅನೇಕ ಮಂದಿ ಸೈನಿಕರು ನಿಂತಿದ್ದರು. ಕುವಲಯಾಪೀಡವೆಂಬ ಮದ್ದಾನೆಯ ಮಾವುತನು ಸಹ ಅದನ್ನು ನಿಲ್ಲಿಸಿಕೊಂಡು ನಿಂತಿದ್ದನು. ಅಲ್ಲಿಗೆ

ರಾಮಕೃಷ್ಣರು ಬಂದ ಕೂಡಲೆ ಆ ಮಾವುತನು ತನ್ನ ಆನೆಯನ್ನು ಅವರ ಮೈಮೇಲೆ ಹಾಯಿಸಿದನು. ಈ ಪ್ರಕಾರ ಕಂಸನ ಅಪ್ಪಣೆಯ ಮೇರೆಗೆ ನಡೆದಿದ್ದ ದುಷ್ಟ ಒಳಸಂಚನ್ನು ಶ್ರೀಕೃಷ್ಣನು ಕಂಡು ಸಂತಪ್ತನಾಗಿ ಆ ಆನೆಯ ಮುಂದೆ ಸಡ್ಡು ಹೊಡೆದು ನಿಂತು ಒಂದು ದೊಡ್ಡ ಕೂಗನ್ನು ಕೂಗಿದನು. ಆಗ ಆ ಮದ್ದಾನೆಯು ರೊಚ್ಚಿಗೆದ್ದು, ಅವನ ಮೇಲೆ ಹೋಗಿ ಅವನ ಕೊರಳಿಗೆ ತನ್ನ ಸೊಂಡಿಯನ್ನು ಹಾಕಿತು. ಆ ಕೂಡಲೆ ಅವನು ಅದರ ಸೊಂಡಿಯನ್ನು ಹಿಡಿದು, ಅದರ ಬೆನ್ನ ಕಡೆಗೆ ಹೋಗಿ, ಅಲ್ಲಿಂದ ಅದರ ಹೊಟ್ಟೆಯ ಕೆಳಗೆ ಸೇರಿಕೊಂಡು, ತನ್ನ ವಜ್ರಮುಷ್ಟಿಯಿಂದ ಅದರ ಹೊಟ್ಟೆಗೆ ಒಂದು ಗುದಿಕೆಯನ್ನು ಕೊಟ್ಟನು. ಆಗ ಅದು ಸಿಟ್ಟಿನಿಂದಲೂ, ಸಂಕಟದಿಂದಲೂ ಗಿಮಿಗಿಮಿ ತಿರುಗಹತ್ತಿತು. ಶ್ರೀಕೃಷ್ಣನು ಎಲ್ಲಿದ್ದಾನೆಂದು ಆ ಆನೆಗೆ ಗೊತ್ತಾಗಲಿಲ್ಲ. ಅದು ಒಂದು ಕಡೆಗೆ ನೋಡುವಾಗ ಅವನು ಇನ್ನೊಂದು ಕಡೆಗೆ ಇರುತ್ತಿದ್ದನು. ಈ ಪ್ರಕಾರ ಶ್ರೀಕೃಷ್ಣನು ಬಹಳೊತ್ತನಕ ಮಾಡಿ ಆ ಆನೆಯನ್ನು ಸಿಟ್ಟಿಗೆಬ್ಬಿಸಿ ಅದರ ಮುಂದೆ ತಿರುಗಿ ಸಡ್ಡು ಹೊಡೆದು ನಿಂತನು. ಆಗ ಅದು ತನ್ನ ಕೋರೆಗಳಿಂದ ಅವನ ಹೊಟ್ಟೆಯನ್ನು ಇರಿಯುವದಕ್ಕಾಗಿ ತನ್ನ ಕಾಲುಗಳನ್ನು ಊರಲಾಗಿ ಅವನು ಅದರ ಕೋರೆಗಳನ್ನು ಕಿತ್ತು, ಅದೇ ಕೋರೆಗಳಿಂದ ಅದರ ಹಣೆಗೆ ಕಸುವಿನಿಂದ ಹೊಡೆದನು. ಇದರಿಂದ ಅದು ಅಲ್ಲಿಯೇ ಸತ್ತು ಬಿದ್ದಿತು. ಈ ಪ್ರಕಾರ ಈ ಮದೋನ್ಮತ್ತವಾದ ಆನೆಯನ್ನು ಶ್ರೀಕೃಷ್ಣನು ಒಂದು ಕ್ಷಣಾರ್ಧದಲ್ಲಿ ಸಂಹಾರ ಮಾಡಿದ್ದನ್ನು ನೋಡಿ ಎಲ್ಲರು ಅತ್ಯಂತ ಆಶ್ಚರ್ಯಪಟ್ಟು ಶ್ರೀಕೃಷ್ಣನ ಪರಾಕ್ರಮವನ್ನು ಬಹಳ ಸ್ತುತಿ ಮಾಡಿದರು. ಆ ಬಳಿಕ ಶ್ರೀಕೃಷ್ಣ ಮತ್ತು ಬಲರಾಮ ಈ ಇಬ್ಬರೂ ವೀರಶ್ರೀಯ ಗರ್ಜನೆಯನ್ನು ಮಾಡುತ್ತ ಸಭಾಮಂಟಪದ ಬಾಗಿಲದೊಳಗೆ ಪ್ರವೇಶ ಮಾಡಿದರು.

ಶ್ರೀಕೃಷ್ಣನು ಸಭಾಮಂಟಪದೊಳಗೆ ಪ್ರವೇಶ ಮಾಡಿದಾಗ ಅವನ ಮೈಗೆ ಆನೆಯನ್ನು ಕೊಂದ ರಕ್ತವೂ, ಆನೆಯ ಮದೋದಕ ಹನಿಗಳೂ ತುಂಬಾ ಆಚ್ಛಾದಿತವಾಗಿದ್ದು ಅವನು ತನ್ನ ಕೈಯಲ್ಲಿ ಅರ್ಧಚಂದ್ರಾಕೃತಿಯ ಆನೆಯ ಕೋರೆಗಳನ್ನು ಹಿಡಿದಿದ್ದನು. ಅವನ ಕಣ್ಣುಗಳು ರಕ್ತದಂತೆ ಕೆಂಪಾಗಿದ್ದವು. ಅವನನ್ನು ನೋಡಿ ಸಭಾಮಂಟಪದೊಳಗಿನ ಎಲ್ಲ

ಜನರು ಆಶ್ಚರ್ಯಚಕಿತರಾದರು. ಶ್ರೀಕೃಷ್ಣನು ಮದ್ದಾನೆಯ ಕೂಡ ಹೋ ರಾಡಿ ಅದನ್ನು ತನ್ನ ಕೇವಲ ಬಾಹುಬಲದಿಂದ ಕೊಂದದ್ದನ್ನು ಕಂಡು ಕಂಸನು ಬಹಳ ಭಯಕಂಪಿತನಾಗಿ, ಅವನ ಮುಂದೆ ಚಾಣೂರನ ಆಟವು ಏನೂ ನಡೆ ಯಲಾರದೆಂತಲೂ, ತನ್ನ ಆಯುಷ್ಯದ ದಿವಸಗಳು ತುಂಬಿದವೆಂತಲೂ ಪೂರ್ಣ ವಾಗಿ ತಿಳಿದುಕೊಂಡನು. ಹಿಂದುಗಡೆ ಒಂದು ಕ್ಷಣದಲ್ಲಿ ಕಂಸನು ತನ್ನ ಭಯ ವನ್ನು ಹಿಂದಕ್ಕೆ ಒತ್ತಿ ಹಾಕಿ, ಎವೆಯಿಕ್ಕದೆ ಕೃಷ್ಣನ ಕಡೆಗೆ ನೋಡುತ್ತ, ಕೃಷ್ಣನ ಸಂಗಡ ಕುಸ್ತಿಯಾಡಲಿಕ್ಕೆ ಚಾಣೂರನಿಗೂ, ಬಲರಾಮನ ಸಂಗಡ ಕುಸ್ತಿಯಾ ಡಲಿಕ್ಕೆ ಮುಷ್ಟಿಕನಿಗೂ ಅಪ್ಪಣೆಯನ್ನು ಮಾಡಿದನು. ಆಗ ಆ ಮಲ್ಲರು ತಮ್ಮ ತಮ್ಮ ಗುರುಗಳಿಗೆ ನಮಸ್ಕರಿಸಿ ಕುಸ್ತಿಯನ್ನಾಡಲಿಕ್ಕೆ ಎದ್ದರು. ಇತ್ತಲಾ ಶ್ರೀ ಕೃಷ್ಣ ಬಲರಾಮರು ತಮ್ಮ ವೃದ್ಧರಾದ ಗೋಪಮಲ್ಲರ ಅಪ್ಪಣೆಯನ್ನು ಪಡೆ ದುಕೊಂಡು ಕುಸ್ತಿಯ ಕಣದಲ್ಲಿ ಬಂದರು. ಈ ಪ್ರಕಾರ ಈ ಹುಡುಗರಾದ ಮಲ್ಲರು ಕಂಸನ ಬಲಾಢ್ಯರಾದ ಮಲ್ಲರ ಕೂಡ ಕುಸ್ತಿಯನ್ನು ಆಡಲಿಕ್ಕೆ ಸಿದ್ಧ ರಾಗಲು, ಸಭಿಕರು ಈ ಹುದ್ದರಿಗಳು ಇಜ್ಜೋಡಿಯೆಂದು ತಮ್ಮ ತಮ್ಮೊಳಗೆ ಗುಜುಗುಜು ಮಾತಾಡಹತ್ತಿದರು. ಆಗ ಶ್ರೀಕೃಷ್ಣನು--"ನಾನು ಚಿಕ್ಕವನಿದ್ದ ರೂ ಈ ಬಲಾಢ್ಯನ ಕೂಡ ಕುಸ್ತಿಯಾಡಲಿಕ್ಕೆ ಸಿದ್ಧನಿರುತ್ತೇನೆ" ಎಂದು ಹೇಳಿ ಸಡ್ಡು ಹೊಡೆದು ನಿಂತನು. ಬಲರಾಮನಾದರೂ ಮುಷ್ಟಿಕನ ಸಂಗಡ ಕುಸ್ತಿಯಾ ಡಲಿಕ್ಕೆ ಯಾವದೂ ತರದ ಅಡ್ಡಿಯನ್ನು ಮಾಡಲಿಲ್ಲ. ಹೀಗೆ ಈ ಎರಡು ಪ್ರಚಂ ಡ ಕುಸ್ತಿಗಳು ಸಭಾಮಂಟಪದ ಎರಡು ಬೇರೆ ಬೇರೆ ಭಾಗಗಳಲ್ಲಿ ನಡೆದವು. ಈ ಎರಡೂ ಕುಸ್ತಿಗಳು ಬಹಳ ಚುರುಸಿನಿಂದ ನಡೆದುದರಿಂದ ಎರಡೂ ಕಡೆಯ ಮಲ್ಲರು ತಮ್ಮ ತಮ್ಮ ಪ್ರಚಂಡ ಶಕ್ತಿಯನ್ನು ತೋರಿಸಹತ್ತಿದರು. ಈ ಕುಸ್ತಿ ಯಲ್ಲಿಯ ಹುದ್ದರಿಗಳು ಧರ್ಮಯುದ್ಧದ ನಿಯಮವನ್ನು ಬಿಟ್ಟು ತಮ್ಮ ತಮ್ಮ ಸಾಮರ್ಥ್ಯವನ್ನು ತೋರಿಸುವದಕ್ಕಾಗಿ ಒಬ್ಬರು ಮತ್ತೊಬ್ಬರ ಪ್ರಾಣವನ್ನು ತೆಗೆದುಕೊಂಡರೂ ಅಡ್ಡಿಯಿಲ್ಲವೆಂದು ಗೊತ್ತು ಮಾಡಿಕೊಂಡರು. ಈ ಪ್ರಕಾರ ಈ ವೀರರ ಪ್ರಾಣಾಂತಿಕ ಯುದ್ಧವು ನಡೆದಾಗ್ಗೆ ಕಂಸನು ಶ್ರೀಕೃಷ್ಣನ ಕುಸ್ತಿ ಯ ಕಡೆಗೆ ಮಾತ್ರ ಪೂರ್ಣವಾಗಿ ಲಕ್ಷ್ಯವಿಟ್ಟು ಕುಳಿತನು. ಈ ಇಬ್ಬರೂ ಮಲ್ಲರು ಒಬ್ಬರಿಗೊಬ್ಬರು ಕೈ ಹಿಡಿದು ಜಗ್ಗುವದು, ಎದೆಗೆ ಎದೆ ಹಚ್ಚುವದು, ರಟ್ಟೆಯ ಮೇಲೆ ಗುದ್ದುವದು, ತಲೆಯ ಮೇಲೆ ಹೊಡೆಯುವದು, ಪುನಃ

ದೂರ ಸರಿಯುವದು, ನೆವರು ನೋಡುವದು, ಪುನಃ ಒಬ್ಬರಿಗೊಬ್ಬರು ಕಾಲು ಹಿಡಿದು ಜಗ್ಗುವದು ಮುಂತಾದ್ದನ್ನು ಕೆಲವು ಹೊತ್ತು ಮಾಡಿದರು. ಆ ಬಳಿಕ ಶ್ರೀಕೃಷ್ಣನು ಮುಂದರಿದು ತನ್ನ ಭುಜಗಳಿಂದ ಚಾಣೂರನನ್ನು ಗಟ್ಟಿಯಾಗಿ ಹಿಡಿದು ಬಾಗಿಸಿ, ಅವನ ಎದೆಗೆ ತನ್ನ ಮೊಣಕಾಲಿನಿಂದ ಒದ್ದು, ಅವನಿಗೆ ಒಳ್ಳೇ ಕಸುವಿನಿಂದ ತನ್ನ ಮುಷ್ಟಿಗೈಯಿಂದ ಗುದ್ದಿದನು. ಇದರಿಂದ ಚಾಣೂರನ ಕಣ್ಣುಗಳಲ್ಲಿ ರಕ್ತಪ್ರವಾಹವು ಹರಿದು, ಅವನ ಕಣ್ಣುಗುಡ್ಡಿಗಳು ಹೊರಬೀಳಲಾಗಿ, ಅವನು ಗತಪ್ರಾಣನಾದನು. ಆಗ ತೋಶಲನೆಂಬ ಇನ್ನೊಬ್ಬ ಬಲಾಢ್ಯ ಮಲ್ಲನು ಕಂಸನ ಅಪ್ಪಣೆಗನುಸರಿಸಿ ಶ್ರೀಕೃಷ್ಣನ ಕೂಡ ಕುಸ್ತಿಯಾಡಲಿಕ್ಕೆ ಸಡ್ಡು ಹೊಡೆದು ನಿಂತು, ಶ್ರೀಕೃಷ್ಣನ ಮೈಮೇಲೆ ಹೋಗಿ ಕುಸ್ತಿಯಾಡಲಿಕ್ಕೆ ಹತ್ತಿದನು. ಇಷ್ಟರಲ್ಲಿ ಬಲರಾಮನು ತನ್ನ ವಜ್ರಮುಷ್ಟಿಯಿಂದ ಮುಷ್ಟಿಕನನ್ನು ಗುದ್ದಲಾಗಿ ಮುಷ್ಟಿಕನು ರಕ್ತ ಕಾರಿಕೊಂಡು ಸತ್ತನು. ಇದನ್ನು ನೋಡಿದವನೇ ಶ್ರೀಕೃಷ್ಣನು ವಿಲಂಬ ಮಾಡದೆ ಪರ್ವತದ ಶಿಖರದಂಥ ಪ್ರಚಂಡನಾದ ತೋಶಲನನ್ನು ಎತ್ತಿ, ಅವನನ್ನು ತಲೆ ಹಿಡಿದು ಗಿಮಿ ಗಿಮಿ ತಿರುವಿ, ನೆಲಕ್ಕೆ ಅಪ್ಪಳಿಸಲಾಗಿ ಅವನೂ ಕ್ಷಣಾರ್ಧದಲ್ಲಿ ಸತ್ತನು.

ಈ ಪ್ರಕಾರ ಶ್ರೀಕೃಷ್ಣ ಬಲರಾಮರು ಕಂಸನ ಮೂರು ಮಂದಿ ಬಲಾಢ್ಯರಾದ ಮಲ್ಲರನ್ನು ಕೊಂದು ಸಭಾರಂಗದಲ್ಲಿ ನಿಂತು ಸಿಂಹನಾದ ಮಾಡಿ ತಮ್ಮ ವಜ್ರಪ್ರಾಯವಾದ ದಂಡವನ್ನು ಭೂಮಿಗೆ ಅಪ್ಪಳಿಸಿದರು. ಈ ಸಪ್ಪಳವನ್ನು ಕೇಳಿ ಉಳಿದ ಯಾವತ್ತು ಮಲ್ಲರು ಕೈಕಾಲು ಕಳಕೊಂಡು ದಿಕ್ಕಾಪಾಲಾಗಿ ಓಡಿ ಹೋದರು. ಆಗ ಸಭಾರಂಗದಲ್ಲಿ ಕಂಸನ ಕಡೆಯ ಮಲ್ಲರು ಯಾರೂ ಉಳಿಯಲಿಲ್ಲ. ಪ್ರೇಕ್ಷಕರಲ್ಲಿ ಅನೇಕರು ಭಯಕಂಪಿತರಾದರು. ಅನೇಕರು ಆನಂದಾಶ್ರುಗಳನ್ನು ಉದುರಿಸಿದರು. ಆಗ ಕಂಸನು ಕ್ರೋಧಾವೇಶದಿಂದಲೂ ಭಯದಿಂದಲೂ ಕೂಡಿದವನಾಗಿ—"ಎಲೋ, ಈ ಗವಳಿಗರಾದ ಹುಡುಗರನ್ನು ಇಲ್ಲಿಂದ ಹೊರಗೆ ಅಟ್ಟಿರಿ. ಈ ದುಷ್ಟ ಹುಡುಗರನ್ನು ನನ್ನ ಕಣ್ಣ ಮುಂದೆ ನಿಲ್ಲಗೊಡಬೇಡಿರಿ. ನಂದಾದಿ ಗವಳಿಗರನ್ನು ಸಂಕೋಲೆಯಿಂದ ಬಿಗಿದು ಕಾರಾಗೃಹದಲ್ಲಿಡಿರಿ. ಈ ಮುದಿ ವಸುದೇವನಿಗೆ ಕೋರಡೆಯಿಂದ ಶಿಕ್ಷಿಸಬೇಕಾಗಿತ್ತು.



ಕಂಸವಧದ ತರುವಾಯ ಶ್ರೀಕೃಷ್ಣ ಬಲರಾಮರು
ವಸುದೇವ ದೇವಕಿಯರ ದರ್ಶನ
ತೆಗೆದುಕೊಂಡದ್ದು. (ಪುಟ ೪೯)

ಆದರೆ ಅದು ಯೋಗ್ಯವಾಗಲಾರದು. ಆದುದರಿಂದ ಅವನಿಗೆ ಬಡಿಗೆಯಿಂದಲೇ ಹೊಡೆಯಿರಿ. ಇವನು ನನ್ನ ಭಯಂಕರವಾದ ಅಪರಾಧವನ್ನು ಮಾಡಿರುತ್ತಾನೆ" ಎಂದು ಕಂಸನು ತನ್ನ ಮನಸ್ಸಿಗೆ ಬಂದಂತೆ ಮಾತಾಡುತ್ತಿರುವಷ್ಟರಲ್ಲಿ ಶ್ರೀಕೃಷ್ಣನು ಕ್ರೋಧಸಂತಪ್ತನಾಗಿ ಸಭಾರಂಗದಿಂದ ಹುಲಿಯು ಹಾರಿಕೆಯಂತೆ ಹಾರುತ್ತ ಬಂದು ಕಂಸನು ಕುಳಿತ ಸಿಂಹಾಸನದ ಮೇಲೆ ಜಿಗಿದನು. ಶ್ರೀಕೃಷ್ಣನು ತನ್ನ ಕಡೆಗೆ ಬಂದದ್ದನ್ನು ಕಂಡ ಕೂಡಲೆ ಕಂಸನು ಬಹಳ ಹೆದರಿದ ಕಾರಣ ಅವನ ತಲೆಯ ಮೇಲಿನ ಕಿರೀಟವು ಕೆಳಗೆ ಬಿದ್ದಿತು. ಅವನ ಕೂದಲುಗಳು ಅಸ್ತಾವ್ಯಸ್ತವಾದವು. ಆಗ ಶ್ರೀಕೃಷ್ಣನು ಕಂಸನನ್ನು ರಂಗಭೂಮಿಯ ಮೇಲೆ ಎಳೆದು ಯಮಸದನಕ್ಕೆ ಕಳುಹಿದನು. ಶ್ರೀಕೃಷ್ಣನು ಕಂಸನನ್ನು ಈ ಪ್ರಕಾರ ಕೊಂದದ್ದರಿಂದ ಕಂಸನ ತಮ್ಮನಾದ ಸುನಾಮಾ ಎಂಬವನು ಸಿಟ್ಟಿಗೆದ್ದು ಶ್ರೀಕೃಷ್ಣನಮೇಲೆ ಸಾಗಿಹೋಗಲು, ಬಲರಾಮನು ಅವನನ್ನು ತತ್ಕಾಲವೇ ಸಂಹರಿಸಿದನು. ಈ ಪ್ರಕಾರ ಸಭಾರಂಗದಲ್ಲಿ ಭಯಂಕರ ಪ್ರಕಾರವು ನಡೆಯಲು, ಅಲ್ಲಿ ಕುಳಿತಿದ್ದ ಜನರು ಶ್ರೀಕೃಷ್ಣನ ಮತ್ತು ಬಲರಾಮನ ಕ್ರುದ್ಧಮುದ್ರೆಯನ್ನು ನೋಡಿ ಸಭಾರಂಗವನ್ನು ಬಿಟ್ಟು ಅವಸರದಿಂದ ಹೊರಟು ಹೋಗಹತ್ತಿದರು. ಅಷ್ಟರಲ್ಲಿ ಶ್ರೀಕೃಷ್ಣ ಬಲರಾಮರು ವಸುದೇವನು ಕುಳಿತಿದ್ದ ಸ್ಥಳಕ್ಕೆ ಹೋಗಿ ವಸುದೇವನ ಚರಣದ ಮೇಲೆ ತಮ್ಮ ಮಸ್ತಕವನ್ನಿಟ್ಟು, ಯಾವತ್ತು ಯಾದವರಿಗೂ, ಇತರ ಕ್ಷತ್ರಿಯರಿಗೂ ನಂದಾದಿ ಗೋಪರಿಗೂ ನಮಸ್ಕಾರವನ್ನು ಮಾಡಿ, ಅಂತಃಪುರದ ಸ್ತ್ರೀಯರೊಳಗೆ ದೇವಕಿಯು ಕುಳಿತಲ್ಲಿ ಹೋಗಿ ಅವಳ ಪಾದದ ಮೇಲೆ ತಮ್ಮ ಹಣೆಯನ್ನಿಟ್ಟರು. ಆಗ ಅವಳು ಅವರಿಬ್ಬರನ್ನೂ ತನ್ನ ಅಶ್ರುಗಳಿಂದ ಸ್ನಾನ ಮಾಡಿಸಿದಳು. ಆ ಮೇಲೆ ಅವರಿಬ್ಬರೂ ಆ ಸಭಾರಂಗದಿಂದ ವಸುದೇವ ದೇವಕಿಯರೊಡನೆ ಹೊರಬಿದ್ದು, ರಥದಲ್ಲಿ ಕುಳಿತು, ತಮ್ಮ ಮಂದಿರಕ್ಕೆ ತರಳಿದರು.

ಶ್ರೀಕೃಷ್ಣನು ಸಭಾರಂಗವನ್ನು ಬಿಟ್ಟು ಹೋದ ಕೂಡಲೆ ಕಂಸನ ಹೆಂಡಂದಿರು ಕಂಸನ ಪ್ರೇತವು ಬಿದ್ದಲ್ಲಿಗೆ ಬಂದು ಬಹಳ ಪರಿಯಿಂದ ಶೋಕ ಮಾಡಹತ್ತಿದರು. ಕಾರಾಗೃಹದಲ್ಲಿದ್ದ ಕಂಸನ ತಾಯಿಯು ತನ್ನ ಗಂಡನಾದ ಉಗ್ರಸೇನನೊಡನೆ ಅಲ್ಲಿಗೆ ಬಂದು ಗೋಳಿಟ್ಟಳು. ಉಗ್ರಸೇನನು ತುಸು

ಹೊತ್ತಿನ ತರುವಾಯ ತನ್ನ ಹೆಂಡತಿಗೂ ಸೊಸೆಯರಿಗೂ ಸಮಾಧಾನ ಹೇಳಿ ಕಂಸನ ಉತ್ತರಕ್ರಿಯೆಗಳನ್ನು ಮಾಡಿಸಲಿಕ್ಕೆ ಶ್ರೀಕೃಷ್ಣನ ಅಪ್ಪಣೆಯನ್ನು ಕೇಳಿಕೊಳ್ಳುವದಕ್ಕಾಗಿ ತನ್ನ ಸಂಗಡ ಕೆಲವು ಯಾದವರನ್ನು ಕರಕೊಂಡು ದುಃಖದಿಂದ ಅವನ ಕಡೆಗೆ ಹೋದನು. ಆಗ ವಸುದೇವನು ಅವನಿಗೆ ಯೋಗ್ಯವಾದ ಸತ್ಕಾರ ಮಾಡಿ ಕುಳ್ಳಿರಿಸಿದ ಬಳಿಕ ಉಗ್ರಸೇನನು ಶ್ರೀಕೃಷ್ಣನಿಗೆ--"ಕೃಷ್ಣಾ, ನೀನು ನಿನ್ನ ಪರಾಕ್ರಮದಿಂದ ನನ್ನ ಮಗನನ್ನು ಯಮಸದನಕ್ಕೆ ಕಳಿಸಿದ ಕಾರಣ ಧರ್ಮರಕ್ಷಣವಾಗಿ, ಯಾದವ ಸಾಮ್ರಾಜ್ಯವು ಶಾಶ್ವತವಾದ ತಳಹದಿಯ ಮೇಲೆ ಸ್ಥಾಪನವಾದಂತಾಯಿತು. ಎಲ್ಲ ಯಾದವರು ನಿನ್ನ ಸ್ತುತಿಸ್ತೋತ್ರಗಳನ್ನು ಮಾಡುವರು. ಎಲ್ಲ ಮಾಂಡಲೀಕ ರಾಜರು ನಿನಗೆ ಕರಭಾರವನ್ನು ಕೊಡುವರು. ಎಲ್ಲ ಪ್ರಜೆಗಳು ನಿನ್ನ ಆಜ್ಞೆಯನ್ನು ರಾಜನಿಷ್ಠೆಯಿಂದ ಪಾಲಿಸುವರು. ನೀನು ಈ ರಾಜ್ಯವನ್ನೂ, ಇದರಲ್ಲಿರುವ ಆನೆ, ಕುದುರೆ, ರಥ ಮೊದಲಾದ ಚದುರಂಗ ಸೈನ್ಯವನ್ನೂ, ಅರಮನೆಯೊಳಗಿನ ಎಲ್ಲ ಧನ, ಧಾನ್ಯ, ರತ್ನ, ವಸ್ತ್ರ, ಸುವರ್ಣ, ದಾಸದಾಸಿಯರನ್ನೂ ನಿನ್ನ ಸ್ವಾಧೀನದಲ್ಲಿ ತೆಗೆದುಕೋ. ಆದರೆ ನಿನ್ನ ಕೋಪಾನಲದಿಂದ ದಗ್ಧನಾದ ಕಂಸನ ಪ್ರೇತಸಂಸ್ಕಾರ ಮಾಡಲಿಕ್ಕೆ ದೀನರಾದ ನಮಗೆ ಅಪ್ಪಣೆಯನ್ನು ಕೊಡು. ಇವನ ಔರ್ಧ್ವದೈಹಿಕ ಕರ್ಮಗಳು ಮುಗಿದ ನಂತರ ನಾನು ನನ್ನ ಹೆಂಡತಿಯನ್ನೂ ಸೊಸೆಯನ್ನೂ ಕರಕೊಂಡು ಅರಣ್ಯದಲ್ಲಿ ಹೋಗಿ ಕಾಲ ಕಳೆಯುವೆನು" ಎಂದು ವಿನಯದಿಂದ ನುಡಿದನು. ಉಗ್ರಸೇನನ ಭಾಷಣವನ್ನು ಕೇಳಿ ಕೃಷ್ಣನಿಗೆ ಅತ್ಯಂತ ದುಃಖವಾಯಿತು. ಆಗ ಅವನು ಉಗ್ರಸೇನನಿಗೆ--"ತಾತಾ, ನೀನು ಮಾಡಿದ ಭಾಷಣವು ನಿನ್ನ ಕುಲಕ್ಕೂ ಶೀಲಕ್ಕೂ ಭೂಷಣವಾದ್ದೇ ಸರಿ. ಆದರೆ ನಾನು ಈ ಸಾಹಸವನ್ನು ಸ್ವಾರ್ಥಬುದ್ಧಿಯಿಂದ ಮಾಡಲಿಲ್ಲ. ನನಗೆ ಲೇಶವಾದರೂ ರಾಜ್ಯಲೋಭವಿಲ್ಲವೆಂದು ಪ್ರತಿಜ್ಞೆಯ ಮೇಲೆ ಹೇಳುತ್ತೇನೆ. ನೀನು ಯದುಕುಲದ ಅಗ್ರಗಣ್ಯನೂ, ಪ್ರಭುವೂ ಇರುತ್ತೀ. ನೀನೇ ಈ ಸ್ವರಾಜ್ಯದ ಮೇಲೆ ಅಭಿಷಿಕ್ತನಾಗಿ ನಮ್ಮೆಲ್ಲರನ್ನು ಪಾಲನ ಮಾಡು" ಎಂದು ಹೇಳಿದನು. ಶ್ರೀಕೃಷ್ಣನ ಉದಾರವಚನವನ್ನು ಕೇಳಿ ಉಗ್ರಸೇನನು ನಿರುತ್ತರನಾದನು. ಈ ಪ್ರಕಾರ ಶ್ರೀಕೃಷ್ಣನು ತತ್ಕಾಲವೇ ನಿರಪೇಕ್ಷಬುದ್ಧಿಯಿಂದ ರಾಜ್ಯವ್ಯವಸ್ಥೆಯನ್ನು ಮಾಡಲಾಗಿ, ಎಲ್ಲರೂ ಆ ರಾತ್ರಿ ಸಮಾಧಾನದಿಂದ ನಿದ್ರೆ ಮಾಡಿದರು. ಆ

ಬಳಿಕ ಮೂರನೇ ದಿವಸ ಬೆಳಿಗ್ಗೆ ಎಲ್ಲ ಯಾದವರು ಶ್ರೀಕೃಷ್ಣನನ್ನು ಕೂಡಿ ಕೊಂಡು ಕಂಸನ ಪ್ರೇತವನ್ನು ರಾಜನ ಯೋಗ್ಯತೆಗೆ ಒಪ್ಪುವಂಥ ಸುವರ್ಣ ಸಿಬಿಕೆಯಲ್ಲಿಟ್ಟುಕೊಂಡು, ರಾಜವೈಭವದಿಂದ ಯಮುನಾ ನದಿಯ ಉತ್ತರ ತೀರಕ್ಕೆ ಒಯ್ದು, ಅದಕ್ಕೆ ಚಂದನಕಾಷ್ಠಗಳಿಂದ ಅಗ್ನಿಸಂಸ್ಕಾರ ಮಾಡಿ ಆ ನದಿಯ ದಕ್ಷಿಣತೀರಕ್ಕೆ ಬಂದು ತಿಲಾಂಜಲಿಯನ್ನು ಕೊಟ್ಟರು. ಆಮೇಲೆ ಹತ್ತು ದಿವಸ ಉಗ್ರಸೇನನು ಆನೆ, ಕುದುರೆ, ರಥ, ಭೂಮಿ, ಸುವರ್ಣ ಮೊದ ಲಾದುದನ್ನು ದಾನ ಮಾಡಿ ಉತ್ತಮ ರೀತಿಯಿಂದ ಔರ್ಧ್ವದೈಹಿಕ ಕರ್ಮಗ ಳನ್ನು ನೆರವೇರಿಸಿದನು.

ಈ ಪ್ರಕಾರ ಕಂಸನ ಮರಣದ ತರುವಾಯ ವೃದ್ಧನೂ ನೀತಿನಿಪುಣ ನೂ ಆದ ಉಗ್ರಸೇನ ರಾಜನು ಪುನಃ ಸಿಂಹಾಸನದ ಮೇಲೆ ಕುಳಿತುದರಿಂದ ಮಥುರಾ ನಗರದ ಜನರು ಪುನಃ ಸೌಖ್ಯವನ್ನು ಪಡೆದರು. ಕಂಸನ ಬಲಾ ತ್ಕಾರದ ಮತ್ತು ಅನ್ಯಾಯದ ಕಾರಭಾರದ ಮೂಲಕ ಪರಸ್ಥಳಗಳಿಗೆ ಹೋಗಿ ದ್ದ ಯಾದವ, ಭೋಜ, ವೃಷ್ಣಿ, ಅಂಧಕ ಕುಲಗಳ ಕ್ಷತ್ರಿಯರು ಪುನಃ ಮಥು ರೆಗೆ ಬಂದು ತಮ್ಮ ಸ್ವಾಸ್ಥ್ಯಗಳನ್ನೂ ಮಾನಮರ್ಯಾದೆಗಳನ್ನೂ ಅನುಭೋ ಗಿಸುತ್ತ ಆನಂದದಿಂದ ಇರಹತ್ತಿದರು. ಇದರಿಂದ ಮಥುರಾ ನಗರದಲ್ಲಿಯ ಯಾವತ್ತು ಜನಸಾಮಾನ್ಯರೂ ವ್ಯಾಪಾರಸ್ಥರೂ ಉತ್ಕರ್ಷವನ್ನು ಹೊಂದಿದರು. ವಸುದೇವನು ಶ್ರೀಕೃಷ್ಣನಿಗೂ ಬಲರಾಮನಿಗೂ ಜನ್ಮದಾರಭ್ಯ ಮಾಡಿಸದೆ ಉಳಿ ದಿದ್ದ ಎಲ್ಲ ಜಾತಕರ್ಮಗಳನ್ನು ಕುಲಗುರುಗಳಾದ ಗರ್ಗ ಮುನಿಗಳಿಂದ ಮಾಡಿ ಸಿದನು. ಆ ಮೇಲೆ ಅವರಿಬ್ಬರು ವೇದಗಳನ್ನೂ ಧನುರ್ವಿದ್ಯೆಯನ್ನೂ ಅಭ್ಯಾಸ ಮಾಡುವದಕ್ಕಾಗಿ ಉಜ್ಜನಿಯನಿಯೊಳಗೆ ಸಾಂದೀಪನಿಯೆಂಬ ಸುಶೀಲ-ಪವಿತ್ರ-ವಿದ್ವಾನ್ ಗುರುಗಳ ಹತ್ತರ ಹೋಗಿ ನಿಂತುಕೊಂಡರು. ಅಲ್ಲಿ ಅವರು ಅರವತ್ತುನಾಲ್ಕು ದಿವಸಗಳಲ್ಲಿ ಯಾವತ್ತು ವೇದಗಳನ್ನು ಪಠಣ ಮಾಡಿ ಹಿಂದ ಗಡೆ ಧನುರ್ವೇದವನ್ನು ಪಠಣ ಮಾಡಿದರು. ರಾಮಕೃಷ್ಣರು ಗುರುಗೃಹದಲ್ಲಿ ದ್ದಾಗ ಇತರ ಯಾವತ್ತು ಶಿಷ್ಯರಂತೆ ತಮ್ಮ ಗುರುಗಳ ಸೇವೆಯನ್ನು ಉತ್ತಮ ಪ್ರಕಾರದಿಂದ ಮಾಡಿದರು. ಅವರಿಬ್ಬರು ಅಡವಿಗೆ ಹೋಗಿ ತಮ್ಮ ಗುರುಗಳ ಸಲುವಾಗಿ ಕಟ್ಟಿಗೆ, ಸಮಿಧಾ, ಕುಶ ಮುಂತಾದ್ದನ್ನು ತೆಗೆದುಕೊಂಡು ಬರುವ

ದಲ್ಲದೆ ಶಾರೀರಿಕ ಶ್ರಮದಿಂದ ತಮ್ಮ ಗುರುಗಳ ಎಲ್ಲ ಸೇವೆಯನ್ನು ಆನಂಡ ದಿಂದ ಮಾಡುತ್ತಿದ್ದರು. ಅವರು ವೈಭವಶಾಲಿ ರಾಜಪುತ್ರರಿದ್ದಾಗ್ಯೂ ತಮ್ಮ ಸೇವೆಯನ್ನು ಏಕನಿಷ್ಠೆಯಿಂದ ಮಾಡುವದನ್ನು ಕಂಡು ಸಾಂದೀಪನಿ ಗುರು ಗಳು ಅವರ ಮೇಲೆ ಸಂತುಷ್ಟರಾಗಿ ಅವರಿಗೆ ಅರವತ್ತುನಾಲ್ಕು ವಿದ್ಯೆಯನ್ನು ಕಲಿಸಿದರು. ಈ ಪ್ರಕಾರ ಬಲರಾಮಕೃಷ್ಣರು ಗುರುಗಳ ಬಳಿಯಲ್ಲಿ ಆರು ತಿಂಗಳು ಇದ್ದ ನಂತರ ಗುರುಗಳ ಅಪ್ಪಣೆಯನ್ನು ಪಡೆದುಕೊಂಡು ಮಥುರೆಗೆ ತಿರುಗಿ ಹೋದರು. ಮಥುರೆಯ ಯಾವತ್ತು ಜನರು ಅವರನ್ನು ಅತ್ಯಂತವಾಗಿ ಪ್ರೀತಿಸುತ್ತಿದ್ದರು. ಆದರೆ ಕಂಸನ ಪಟ್ಟರಾಣಿಯರಾದ ಅಸ್ತಿ ಮತ್ತು ಪ್ರಾಪ್ತಿಯೆಂಬ ಇಬ್ಬರು ಜರಾಸಂಧನ ಮಕ್ಕಳು ಮಾತ್ರ ಅವರ ಕೂಡ ದ್ವೇಷ ಮಾಡುತ್ತಿದ್ದರು. ಆ ಇಬ್ಬರು ದುಷ್ಟ ಹೆಂಗಸರಿಗೆ ಶ್ರೀಕೃಷ್ಣನ ವೈಭ ವವು ಎಷ್ಟು ಮಾತ್ರಕ್ಕೂ ಸಹನವಾಗಲಿಲ್ಲ. ಅವರು ಹಾಗೂ ಹೀಗೂ ಮಾಡಿ ಒಂದು ವರ್ಷದ ತನಕ ಮಥುರೆಯಲ್ಲಿದ್ದು ಆ ತರುವಾಯ ತಮ್ಮ ತಂದೆಯ ಮನೆಗೆ ಹೋಗಿ ತಮ್ಮ ರೋದನಗಳಿಂದ ಅವನ ಕ್ರೋಧಾಗ್ನಿಯನ್ನು ಪ್ರದೀ ಪ್ತ ಮಾಡಿದರು. ಜರಾಸಂಧನು ಶ್ರೀಕೃಷ್ಣನ ಕೃತ್ಯಗಳನ್ನು ನೋಡಿ ಸಿಟ್ಟಿ ಗೆದ್ದಾಗ್ಯೂ ಉಗ್ರಸೇನನು ಎರಡನೇಸಾರೆ ಸಿಂಹಾಸನದ ಮೇಲೆ ಕುಳಿತಾಗಿ ನಿಂದ ಸುಮ್ಮನಿದ್ದನು. ಆದರೆ ಮಥುರೆಯಲ್ಲಿ ಶ್ರೀಕೃಷ್ಣನ ವೈಭವವು ಬೆಳೆ ದಿರುತ್ತದೆಂತಲೂ, ಉಗ್ರಸೇನನು ಅವನಿಗೆ ಅಂಕಿತನಾಗಿ ನಡೆಯುತ್ತಾನೆಂತಲೂ ತನ್ನ ಮಕ್ಕಳಿಂದ ಕೇಳಿಕೊಂಡು ಕಂಸನನ್ನು ಕೊಂದ ಬಗ್ಗೆ ಶ್ರೀಕೃಷ್ಣನ ಮೇಲೆ ಸೇಡು ತೀರಿಸಿಕೊಳ್ಳುವದಕ್ಕಾಗಿ ತನ್ನ ಸೈನ್ಯವನ್ನು ತೆಗೆದುಕೊಂಡು ಮಥುರೆಯ ಮೇಲೆ ಸಾಗಿ ಹೋದನು. ಆ ಕಾಲಕ್ಕೆ ಅವನು ಹಿಂದುಸ್ಥಾನದ ಸಾರ್ವಭೌಮಪದಕ್ಕೆ ಏರಿದ್ದರಿಂದ ಎಲ್ಲ ರಾಜರು ಅವನಿಗೆ ಸಹಾಯಕರಾಗಿ ದ್ದರು. ಆದುದರಿಂದ ಅವನು ತನ್ನ ಮಿತ್ರ ರಾಜರನ್ನು ಕರಕೊಂಡು ಹೋಗಿ ಮಥುರೆಯ ಮೇಲೆ ಮುತ್ತಿಗೆ ಹಾಕಿದನು. ಕರುಷ ದೇಶದ ರಾಜನಾದ ದಂಡ ವಕ್ರನು, ಚೇದಿದೇಶದ ಶಿಶುಪಾಲನು, ವಿದರ್ಭದೇಶದ ಭೀಷ್ಮಕನು, ಭೀಷ್ಮ ಕನ ಮಗನಾದ ರುಕ್ಮಿಯು, ಮತ್ತು ಕಾಶಿ, ವಿದೇಹ, ಭದ್ರ, ತ್ರಿಗರ್ತ, ಶಾಲ್ವ, ದರದ ಇತ್ಯಾದಿ ದೇಶಗಳ ರಾಜರು, ಕಾಶ್ಮೀರ ದೇಶದ ಗೋನರ್ದ,

ಸೌವೀರ ದೇಶದ ಶೈಬ್ಯ ಮುಂತಾದ ರಾಜರು ಅವನ ಸಹಾಯಕ್ಕೆ ಬಂದರು. ಈ ಪ್ರಕಾರ ಲಕ್ಷಾವಧಿ ಸೈನ್ಯವು ಸಾವಿರಾರು ಆನೆಗಳನ್ನೂ ರಥಗಳನ್ನೂ ತೆಗೆದುಕೊಂಡು ಮಥುರೆಯ ಸುತ್ತಲು ನೆರೆಯಿತು. ಆದರೂ ಯಾದವ, ಭೋಜ, ವೃಷ್ಣಿ, ಅಂಧಕ ಇತ್ಯಾದಿ ಕ್ಷತ್ರಿಯ ವೀರರು ತಮ್ಮ ಪರಾಕ್ರಮಿ ಸೇನಾಪತಿಗಳಾದ ಕೃಷ್ಣ ಮತ್ತು ಬಲರಾಮರ ಆಧಿಪತ್ಯದಲ್ಲಿ ಮಥುರೆಯ ರಕ್ಷಣದ ಕೆಲಸವನ್ನು ಹುರುಪಿನಿಂದಲೂ ಎಚ್ಚರಿಕೆಯಿಂದಲೂ ನಡೆಸಿದರು. ಸಾವಿರಾರು ಮಂದಿ ವೀರರು ಮಥುರೆಯ ಬಾಗಿಲುಗಳನ್ನೂ ಕೋಟೆಗಳನ್ನೂ ಕಾಪಾಡಲಿಕ್ಕೆ ನಿಂತುಕೊಂಡರು. ಈ ಪ್ರಕಾರ ಎರಡೂ ಸೈನ್ಯದವರು ಎದುರಾಗಿ ನಿಂತು ಒಬ್ಬರಿಗೊಬ್ಬರು ವೀರಾವೇಶದಿಂದ ಸಂಗ್ರಾಮವನ್ನು ಮಾಡಿದರು. ಶತ್ರು ಪಕ್ಷದ ವೀರರು ಕಂದಕಗಳನ್ನು ದಾಟಿ ಬಾಗಿಲುಗಳ ಮೇಲೂ ಕೋಟೆಗಳ ಮೇಲೂ ಏರಿ ಬರಲಾಗಿ ಯಾದವ ವೀರರು ಅವರ ಪ್ರತೀಕಾರವನ್ನು ಮಾಡಿದರು. ಮುತ್ತಿಗೆಯನ್ನು ಹಾಕಿದವರು ಕಂದಕಗಳನ್ನು ಮುಚ್ಚಿ ಬಿಡುವದನ್ನೂ ಕೋಟೆಗಳನ್ನು ಕೆಡವುದನ್ನೂ ನಡೆಸಿದರು. ನಡನಡುವೆ ಕೆಲಕೆಲವು ಮುಖ್ಯ ಯಾದವ ವೀರರು ಬಾಗಿಲದೊಳಗಿಂದ ಹೊರಬಿದ್ದು ಶತ್ರುಸೈನ್ಯದ ಮೇಲೆ ಕಡಕೊಂಡು ಬೀಳುತ್ತಿದ್ದರು. ಈ ಪ್ರಕಾರ ಈ ಯುದ್ಧವು ಇಪ್ಪತ್ತೇಳು ದಿವಸಗಳ ವರೆಗೆ ಅವ್ಯಾಹತವಾಗಿ ನಡೆಯಿತು. ಇಪ್ಪತ್ತೆಂಟನೆ ದಿವಸ ಶಿನಿ, ಅನಾಧೃಷ್ಟಿ, ಬಭ್ರು ಮುಂತಾದ ಯಾದವ ವೀರರ ಸೈನ್ಯವು ಬಲರಾಮನ ಆಧಿಪತ್ಯದಲ್ಲಿ ದಕ್ಷಿಣದ ಬಾಗಿಲದ ಹೊರಗೆ ಬಂದು ಮಗಧ ಸೈನ್ಯದ ಮೇಲೆ ಕಡಕೊಂಡು ಬೀಳಲಾಗಿ, ಜರಾಸಂಧ, ಚೇದಿಪತಿ, ಶಾಲ್ವ, ಶಲ್ಯ ಮತ್ತು ಇನ್ನೂ ಅನೇಕ ಮಂದಿ ಉತ್ತರ ಕಡೆಯ ಶೂರ ರಾಜರ ಹಾಗೂ ಯಾದವ ವೀರರ ನಡುವೆ ಭಯಂಕರವಾದ ರಣಕದನವು ನಡೆಯಿತು. ಜರಾಸಂಧನ ಬಳಿಯಲ್ಲಿ ಹಂಸ ಮತ್ತು ಡಿಂಭಕರೆಂಬ ಇಬ್ಬರು ಬಲಾಢ್ಯ ಮಲ್ಲರು ಇದ್ದರು. ಅವರಲ್ಲಿ ಡಿಂಭಕನದೂ ಬಲರಾಮನದೂ ಯುದ್ಧವೆಸಗಿತು. ಯುದ್ಧದಲ್ಲಿ ಇಬ್ಬರ ರಥಗಳೂ ಮುರಿದು ಹೋಗಲಾಗಿ ಇಬ್ಬರೂ ಬಾಹುಯುದ್ಧವನ್ನು ಮಾಡಿದರು. ಅದರೊಳಗೆ ಬಲರಾಮನು ಡಿಂಭಕನನ್ನು ಎತ್ತಿ ಧುಪ್ಪನೆ ನೆಲದ ಮೇಲೆ ಅಪ್ಪಳಿಸಲಾಗಿ ಅವನು ಕೂಡಲೆ ಮೃತಪ್ರಾಯನಾಗಿ ನಿಶ್ಚೇಷ್ಟನಾದನು. ಇದನ್ನು ಹಂಸನು ನೋಡಿದ ಕೂಡಲೆ ಅವನು ದುಃಖದಿಂದ ಯಮು

ನಾನದಿಯೊಳಗೆ ಹಾರಿಕೊಂಡು ಜೀವಕೊಟ್ಟನು. ಡಿಂಭಕನು ಸ್ವಲ್ಪ ಹೊತ್ತಿಗೆ ಎಚ್ಚರಿಕೆಯ ಮೇಲೆ ಬಂದು, ಹಂಸನು ಜೀವ ಕೊಟ್ಟದ್ದನ್ನು ಕೇಳಿ, ತಾನೂ ನದಿಯೊಳಗೆ ಹಾರಿಕೊಂಡು ಪ್ರಾಣಬಿಟ್ಟನು. ಈ ಪ್ರಕಾರ ಜರಾಸಂಧನ ಎರಡೂ ಕೈಗಳು ಮುರಿದಂತೆ ಆಗಿ ಅವನ ಬಲವೂ ಉತ್ಸಾಹವೂ ಕುಗ್ಗಿ ಹೋದವು. ಇತ್ತಲಾ ಶ್ರೀಕೃಷ್ಣನ ಅಧಿಪತ್ಯದಲ್ಲಿ ಪಶ್ಚಿಮದ ಕಡೆಯ ಬಾಗಿಲದಿಂದ ಹೊರಬಿದ್ದ ಉಳಿದ ಅರ್ಧ ಸೈನ್ಯದವರೂ ಅವಗಾಹ, ಕಂಕ, ಪೃಥು, ಶತದ್ಯುಮ್ನ ಇತ್ಯಾದಿ ಯಾದವ ವೀರರೂ ಕೂಡಿಕೊಂಡು ಪ್ರಾಚ್ಯ ಮತ್ತು ದಕ್ಷಿಣಾತ್ಯ ರಾಜರಾದ ಭೀಷ್ಮಕ, ರುಕ್ಮಿ, ದೇವಕ ಮುಂತಾದ ಶತ್ರುಪಕ್ಷದವರ ಸೈನ್ಯದೊಡನೆ ಅಪೂರ್ವವಾದ ಯುದ್ಧವನ್ನು ಮಾಡಲು ರಕ್ತದ ನದಿಗಳು ಹರಿದವು. ಶ್ರೀಕೃಷ್ಣನು ತಾನು ಹೊಸದಾಗಿ ಸಂಪಾದನ ಮಾಡಿದ ಧನುರ್ವಿದ್ಯೆಯಿಂದ ವಿಲಕ್ಷಣ ಪರಾಕ್ರಮ ಮಾಡಿ ರುಕ್ಮಿಗೂ ಇತರ ವೀರರಿಗೂ ಓಡಿಸಿ ಬಿಟ್ಟನು. ಈ ಪ್ರಕಾರ ಯಾದವ ವೀರರು ಎರಡೂ ಕಡೆಗೆ ನಿಂತಿದ್ದ ಶತ್ರು ಸೈನ್ಯವನ್ನು ಸೋಲಿಸಿ ಸಿಂಹನಾದ ಮಾಡುತ್ತ ಮಥುರೆಗೆ ತಿರುಗಿ ಬಂದರು. ಇತರ ರಾಜರಾದರೂ ತಮ್ಮ ತಮ್ಮ ಸೈನ್ಯವನ್ನು ಕರಕೊಂಡು ಸ್ವದೇಶಕ್ಕೆ ತೆರಳಿದರು. ಆ ರಾತ್ರಿ ಜರಾಸಂಧನು ಜಯದ ಆಶೆಯನ್ನು ಬಿಟ್ಟು ಮುತ್ತಿಗೆಯನ್ನು ತೆಗೆದು ಹಾಕಿ, ತನ್ನ ದೇಶಕ್ಕೆ ಹೋದನು. ಇತರ ದೇಶಗಳ ರಾಜರೂ ತಮ್ಮ ತಮ್ಮ ಸೈನ್ಯಗಳನ್ನು ತೆಗೆದುಕೊಂಡು ತಮ್ಮ ದೇಶಗಳಿಗೆ ಹೊರಟು ಹೋದರು. ಯಾದವರ ಸೈನ್ಯವು ತುಸು ಇದ್ದ ಕಾರಣ ಅವರು ಶತ್ರುಗಳ ಬೆನ್ನ ಹತ್ತಿ ಹೋಗಲಿಲ್ಲ. ಆದರೆ ಅವರು ಇಪ್ಪತ್ತೆಂಟು ದಿವಸ ಯುದ್ಧವನ್ನು ನಡೆಸಿ ಮಥುರೆಯನ್ನು ಮುತ್ತಿಗೆಯಿಂದ ಬಿಡುಗಡೆ ಮಾಡಿಕೊಂಡಾಗ್ಯೂ ತಮಗೆ ಜಯವು ಸಿಕ್ಕಿತೆಂದು ಸೊಕ್ಕಿನಿಂದ ಮೈಮರೆತು ಕುಳಿತುಕೊಳ್ಳಲಿಲ್ಲ. ಜರಾಸಂಧನು ತಿರುಗಿ ತಮ್ಮ ಮೇಲೆ ಸಾಗಿ ಬರುವನೆಂದು ಅವರಿಗೆ ಚನ್ನಾಗಿ ಗೊತ್ತಿತ್ತು. ಆದುದರಿಂದ ಅವರು ತಮ್ಮ ಬಿದ್ದು ಹೋಗಿದ್ದ ಯಾವತ್ತು ಕೋಟೆಗಳನ್ನು ಸರಿಪಡಿಸಿಕೊಳ್ಳುವಲ್ಲಿಯೂ ಧಾನ್ಯ ಸಾಮಗ್ರಿಯ ಮತ್ತು ಶಸ್ತ್ರಾಸ್ತ್ರಗಳ ಪೂರೈಕೆಯನ್ನು ಮಾಡಿಕೊಳ್ಳುವಲ್ಲಿಯೂ ತೊಡಗಿದರು.

ಈ ಮೇರೆಗೆ ಜರಾಸಂಧನು ಪರಾಭವವನ್ನು ಹೊಂದಿ ತನ್ನ ದೇಶಕ್ಕೆ ಮರಳಿ ಹೋದಾಗ್ಯೂ ತನ್ನ ದುಷ್ಟ ವಿಚಾರವನ್ನು ಬಿಟ್ಟುಕೊಡಲಿಲ್ಲ. ಅವನು ಸ್ವಲ್ಪ ದಿವಸಗಳಲ್ಲಿಯೇ ಯುದ್ಧ ಸನ್ನಾಹವನ್ನು ಹೆಚ್ಚಿಗೆ ಮಾಡಿಕೊಂಡು ಪುನಃ ಮಥುರೆಯ ಮೇಲೆ ಸಾಗಿ ಬಂದನು. ಜರಾಸಂಧನ ಬಳಿಯಲ್ಲಿ ಅಸಂಖ್ಯ ಸೈನ್ಯವಿದ್ದು ಅವನಿಗೆ ಅನೇಕ ರಾಜರ ಸಹಾಯವಿತ್ತು. ಆದರೆ ಯಾದವರ ಸಂಖ್ಯೆಯು ಕಡಿಮೆ ಇದ್ದು ಅವರಿಗೆ ಯಾರದೂ ಸಹಾಯವಿದ್ದಿಲ್ಲ. ಆದುದ ರಿಂದ ಮುಂದೆ ಏನು ಮಾಡಬೇಕೆಂದು ವಿಚಾರ ಮಾಡುವದಕ್ಕಾಗಿ ಎಲ್ಲ ಕ್ಷತ್ರಿ ಯರು ನೆರೆದರು. ಆಗ ವಿಕದ್ರು ಎಂಬ ಒಬ್ಬ ವೃದ್ಧ ಮತ್ತು ಶ್ರೇಷ್ಠ ಯಾದವ ಸರದಾರನು ಶ್ರೀಕೃಷ್ಣನಿಗೆ-“ ಕೃಷ್ಣಾ, ಜರಾಸಂಧನು ಕೈ ತಕ್ಕೊಂ ಡು ನಮ್ಮ ಬೆನ್ನ ಹತ್ತಿರುತ್ತಾನೆ. ನೀನು ಅವನ ಅಳಿಯನಾದ ಕಂಸನನ್ನು ಕೊಂದದ್ದಕ್ಕಾಗಿ ನಿನ್ನ ಮೇಲೆ ಅವನ ಸಿಟ್ಟು ಬಹಳ ಇರುತ್ತದೆಂಬದರಲ್ಲಿ ತಿಲ ಮಾತ್ರವಾದರೂ ಸಂಶಯವಿಲ್ಲ. ಈಗ ಸ್ವಲ್ಪ ದಿವಸಗಳ ಹಿಂದೆ ಜರಾಸಂ ಧನು ನಮ್ಮ ನಗರಕ್ಕೆ ಮುತ್ತಿಗೆ ಹಾಕಿದ್ದರಿಂದ ನಮ್ಮ ನಗರಕ್ಕೆ ಹೇಳಲಾರ ದಷ್ಟು ಹಾನಿಯಾಗಿರುತ್ತದೆ. ಆ ಹಾನಿಯಿಂದ ನಾವು ಇನ್ನೂ ನಮ್ಮ ಸ್ಥಿತಿ ಯನ್ನು ಸುಧಾರಿಸಿಕೊಳ್ಳಲಿಕ್ಕೆ ಅಸಮರ್ಥರಾಗಿರುವೆವು. ನಮ್ಮ ಸೈನ್ಯವು ಕ್ಷೀಣವಾಗಿದ್ದು ಅದನ್ನು ಬೆಳೆಸುವದು ಅವಶ್ಯವಿರುತ್ತದೆ. ನಮ್ಮ ಕಂದಕಗ ಳಲ್ಲಿ ನಿಂತ ನೀರನ್ನು ತೆಗೆದು ಇನ್ನೂ ಸ್ವಚ್ಛ ಮಾಡಿಲ್ಲ. ನಮ್ಮಲ್ಲಿ ಕಾಳು ಮತ್ತು ಕಟ್ಟಿಗೆಗಳ ಪೂರೈಕೆಯು ಸಾಕಷ್ಟು ಇರುವದಿಲ್ಲ. ಆದುದರಿಂದ ಈಗ ನಾವು ಶತ್ರುಗಳ ಕೂಡ ಕಾದಾಡುವದನ್ನು ಬಿಟ್ಟುಬಿಡಬೇಕು. ನೀನು ಪರಾ ಕ್ರಮಿಯೂ ಚತುರನೂ ಇದ್ದು ನಮ್ಮನ್ನು ರಕ್ಷಣ ಮಾಡುವಿಯೆಂದು ನಮಗೆ ವಿಶ್ವಾಸವುಂಟು. ಆದರೂ ನಮ್ಮ ಈಗಿನ ಪರಿಸ್ಥಿತಿಯ ಮೇಲಿಂದ ನೀನು ಕೆಲವು ದಿವಸ ಮಥುರೆಯನ್ನು ಬಿಟ್ಟು ದಕ್ಷಿಣ ಕಡೆಗೆ ಹೋಗು. ಅಂ ದರೆ ನಮ್ಮ ನಗರದ ಮೇಲಿನ ಜರಾಸಂಧನ ಸಿಟ್ಟು ಸ್ವಾಭಾವಿಕವಾಗಿ ಕಡಿಮೆ ಯಾದೀತು ” ಎಂದು ಸ್ಪಷ್ಟೋಕ್ತಿಯಿಂದ ಮಾತಾಡಿದನು. ವಸುದೇವನಾದ ರೂ ಪುತ್ರಮೋಹದಲ್ಲಿ ಬೀಳದೆ ಶ್ರೀಕೃಷ್ಣನಿಗೆ ಇದೇ ಉಪದೇಶವನ್ನು ಮಾಡಿ ದನು. ಆಗ ಶ್ರೀಕೃಷ್ಣನು—“ ಬಲವಿಲ್ಲದವರು ಬಲಿಷ್ಠರ ಮುಂದೆ ನಿಂತು

ಕೊಳ್ಳುವದನ್ನು ಬಿಡುವಲ್ಲಿ ಏನೂ ದೋಷವಿಲ್ಲ. ಸಾಮರ್ಥ್ಯವು ಬಂದ ತರುವಾಯ ಅವರ ಮುಂದೆ ನಿಂತು ಯುದ್ಧಮಾಡುವದೇ ರಾಜನೀತಿಯು. ನಿಮಗೆ ಬಂದ ಸಂಕಟವನ್ನು ನಿವಾರಣ ಮಾಡುವಲ್ಲಿ ನನಗೆ ಶಕ್ತಿಯು ಇದ್ದ ರೂ ಅಶಕ್ತನಂತೆ ಬಲರಾಮನನ್ನು ಕೂಡಿಕೊಂಡು ನಾನು ಎರಡನೆ ಕಡೆಗೆ ಹೋಗುತ್ತೇನೆ" ಎಂದು ಒಪ್ಪಿಕೊಂಡನು. ಆ ಮೇಲೆ ಅವನು ಒಂದು ಕ್ಷಣ ಸಹ ತಡಮಾಡದೆ ಬಲರಾಮನನ್ನು ಕೂಡಿಕೊಂಡು ದಕ್ಷಿಣ ದೇಶದ ಕಡೆಗೆ ಹೋಗುವದಕ್ಕಾಗಿ ಹೊರಟು ನಾನಾ ದೇಶಗಳನ್ನೂ ರಮ್ಯವಾದ ಸ್ಥಳಗಳನ್ನೂ ನೋಡುತ್ತ ದಕ್ಷಿಣದಲ್ಲಿರುವ ಕರವೀರಕ್ಕೆ ಬಂದು ಮುಟ್ಟಿದನು.

ಅಲ್ಲಿ ಶ್ರೀಕೃಷ್ಣನೂ ಬಲರಾಮನೂ ವೇಣಾ ನದಿಯ ತೀರದಲ್ಲಿ ಒಂದು ವಿಸ್ತೀರ್ಣವಾದ ವಟವೃಕ್ಷದ ನೆರಳಿನ ಕೆಳಗೆ ಮಸ್ತಕದ ಮೇಲೆ ಜಟಾಭಾರವೂ ಹೆಗಲ ಮೇಲೆ ಕೊಡಲಿಯೂ ಇರುವಂಥ ಒಬ್ಬ ಅತ್ಯಂತ ತೇಜಃಪುಂಜ ಋಷಿ ಯು ಕುಳಿತಿದ್ದನ್ನು ಕಂಡರು. ಅವನ ಹತ್ತಿರ ಒಂದು ಬಿಳೇ ಸುಂದರವಾದ ಆಕಳು ಇದ್ದು ಅದರ ತುಟಿಗಳು ಹಾಲಿನಿಂದ ತುಂಬಿದಂತೆ ಕಾಣುತ್ತಿದ್ದವು. ಆಗ ಅವರು ಇವನೇ ಕ್ಷತ್ರಿಯ ಸಂಹಾರಕನಾದ ಪರಶುರಾಮನು ಇರಬೇಕೆಂ ದು ತರ್ಕಿಸಿ ಅವನ ಕಡೆಗೆ ಹೋಗಿ ಅವನ ಚರಣಗಳ ಮೇಲೆ ತಮ್ಮ ಮಸ್ತ ಕವನ್ನಿಟ್ಟು ಅವನ ಮುಂದೆ ಕೈಜೋಡಿಸಿಕೊಂಡು ಕುಳಿತರು. ಆ ಬಳಿಕ ಶ್ರೀಕೃ ಷ್ಣನು ಅವನಿಗೆ—"ಸ್ವಾಮಿನ್, ತಮ್ಮ ತಂದೆಯ ಮಹಾ ಅಪರಾಧವನ್ನು ಮಾಡಿದ ಸಹಸ್ರಾರ್ಜುನನ ಸಹಸ್ರ ಬಾಹುಗಳನ್ನು ಕೊಡಲಿಯಿಂದ ಕಡಿದ ಪರಶುರಾಮರು ತಾವೇ ಎಂದು ನನಗೆ ನಿಶ್ಚಯವಾಗಿ ಕಾಣುತ್ತದೆ. ತಾವು ಸಹ್ಯಾದ್ರಿ ಘಟ್ಟದಿಂದ ಸಮುದ್ರವನ್ನು ಹಿಂದಕ್ಕೆ ಸರಿಸುವದಕ್ಕಾಗಿ ಅದರ ಮೇಲೆ ಬಾಣಗಳ ಪ್ರಯೋಗ ಮಾಡಿ ನಾಲ್ಕು ನಾಲ್ಕು ಮೊಳಗಳ ೫೦೦ ಧನುಷ್ಯ ಉದ್ದ ಮತ್ತು ೨೫೦ ಧನುಷ್ಯ ಅಗಲು ಅಳತೆಯುಳ್ಳ ಶೂರ್ಪಾರಕ ವೆಂಬ ನಗರವನ್ನು ಸ್ಥಾಪನ ಮಾಡಿದಿರಿ. ಹಾಗೂ ಪೃಥ್ವಿಯ ಮೇಲಿನ ಕ್ಷತ್ರಿ ಯರನ್ನು ಇಪ್ಪತ್ತೊಂದು ಸಾರೆ ಸಂಹಾರ ಮಾಡಿ ರಕ್ತದ ಕಾಲುವೆಗಳನ್ನು ಹರಿಸಿದಿರಿ. ಆದುದರಿಂದ ಪೃಥ್ವಿಯು ಬೆಂಕಿಯಲ್ಲಿ ಕಾಸಿದ ತಾಮ್ರದಂತೆ ಇನ್ನೂ ಕೆಂಪಗೆ ಕಾಣುತ್ತದೆ. ಇಂಥ ಪರಾಕ್ರಮಿಗಳಾದ ತಾವು ನಮಗೆ ದಯಮಾಡಿ ಈ

ಸಂಕಟದ ವೇಳೆಯಲ್ಲಿ ಯೋಗ್ಯ ಆಲೋಚನೆಯನ್ನು ಹೇಳಿದರೆ ನಮ್ಮ ಮೇಲೆ ಬಹಳ ಉಪಕಾರವಾಗುವದು" ಎಂದು ವಿನಯದಿಂದ ನುಡಿದು ಯಾವತ್ತು ಸಂಗತಿಯನ್ನು ಅವನ ಮುಂದೆ ತಿಳಿಸಿ, ತಮ್ಮ ಶತ್ರುವಾದ ಜರಾಸಂಧನು ತಮ್ಮ ಬೆನ್ನ ಹತ್ತಿ ಬಂದರೆ ತಾವು ಹೇಗೆ ತಮ್ಮ ರಕ್ಷಣವನ್ನು ಮಾಡಿಕೊಳ್ಳಬೇಕೆಂದು ವಿಚಾರಿಸಿದನು. ಅದಕ್ಕೆ ಪರಶುರಾಮನು—"ನಾನು ನಿಮ್ಮನ್ನು ಕಾಣುವದ ಕ್ಕಾಗಿಯೇ ಇಲ್ಲಿ ಕುಳಿತುಕೊಂಡಿದ್ದೇನೆ. ನೀವು ಯಾರೆಂಬುವದು ನನಗೆ ಗೊತ್ತುಂಟು. ಈ ಕರವೀರದಲ್ಲಿ ಶೃಗಾಲನೆಂಬ ನಿಮ್ಮ ಯದುವಂಶದ ರಾಜ ನೇ ರಾಜ್ಯವಾಳುತ್ತಾನೆ. ಆದರೆ ಅವನು ದುಷ್ಟನಿರುತ್ತಾನೆ. ಅವನು ತನ್ನ ಅಣ್ಣತಮ್ಮಂದಿರಿಗೂ, ಮಕ್ಕಳಿಗೂ, ಪ್ರಜೆಗಳಿಗೂ ಬಹಳ ಪೀಡೆಯನ್ನು ಕೊ ಡುತ್ತಿದ್ದಾನೆ. ಆದುದರಿಂದ ನೀವು ಅಲ್ಲಿ ನಿಂತುಕೊಳ್ಳಬೇಡಿರಿ. ನೀವು ಸ್ವಲ್ಪ ಮುಂದೆ ಹೋದ ಮೇಲೆ ನಿಮಗೆ ಕ್ರೌಂಚಪುರವೆಂಬ ನಗರವು ಹತ್ತುವದು. ಅಲ್ಲಿಯೂ ನಿಮ್ಮ ವಂಶದ ರಾಜನೇ ರಾಜ್ಯವಾಳುತ್ತಾನೆ. ಅವನ ಆಶ್ರಯದಲ್ಲಿ ಗೋಮಂತ ಪರ್ವತವು ಇರುವದು. ಅಲ್ಲಿಯ ತನಕ ನಾನು ನಿಮ್ಮನ್ನು ಕರಕೊಂಡು ಹೋಗಿ ಬಿಟ್ಟು ಬರುವೆನು. ಅಲ್ಲಿ ನೀವು ಇದ್ದರೆ ನಿಮಗೆ ಯಾವ ರೀತಿಯಿಂದಲೂ ನಿಮ್ಮ ಶತ್ರುಗಳು ಭಯವುಂಟಾಗ ಲಾರದು. ಆ ಪರ್ವತವು ಎತ್ತರವಿದ್ದು ಜರಾಸಂಧನು ಅಲ್ಲಿಗೆ ಬಂದಾಗ್ಯೂ ಅವನ ಸೈನಿಕರಿಗೆ ಗುಡ್ಡದಲ್ಲಿ ಹೇಗೆ ಯುದ್ಧ ಮಾಡಬೇಕೆಂಬುದು ಗೊತ್ತಿ ಲ್ಲದೆ ಇರುವ ಮೂಲಕ ನಿಮಗೆ ಅವರ ಸಂಹಾರ ಮಾಡಲಿಕ್ಕೆ ಸುಲಭವಾಗು ವದು" ಎಂದು ಹೇಳಿ ತನ್ನ ಹತ್ತರ ಇದ್ದ ಕಾಮಧೇನುವಿನ ಅಮೃತ ದಂಥ ಹಾಲನ್ನು ಹಿಂಡಿ ಅವರಿಬ್ಬರಿಗೂ ಕುಡಿಯಲಿಕ್ಕೆ ಕೊಟ್ಟು ತಾನೂ ಕುಡಿ ದನು. ಆ ಮೇಲೆ ಅವರು ದಾರಿ ನಡೆಯುತ್ತ ನಡೆಯುತ್ತ ಎರಡನೇ ದಿವಸ ಗೋಮಂತ ಪರ್ವತಕ್ಕೆ ಹೋಗಿ ಮುಟ್ಟಿದರು. ಅಲ್ಲಿಯ ಶೋಭೆಯನ್ನೂ, ನಾನಾ ತರದ ಹಣ್ಣಿನ ತೋಟಗಳನ್ನೂ, ಜಲಪಾತಗಳನ್ನೂ ನೋಡಿ ರಾಮಕೃಷ್ಣರಿಗೆ ಬಹಳ ಆನಂದವಾಗಿ ಅದು ತಮಗೆ ಶಾಂತ ರೀತಿಯಿಂದ ಇರಲಿಕ್ಕೆ ಯೋಗ್ಯ ವಾದ ಸ್ಥಳವಿರುತ್ತದೆಂದು ಮನಗಂಡು ಪರಶುರಾಮ ಋಷಿಗೆ ತಮ್ಮ ಕೃತ ಜ್ಞತೆಗಳನ್ನು ಸಮರ್ಪಿಸಿ, ಅಲ್ಲಿ ತಮಗಾಗಿ ಒಂದು ಆಶ್ರಮ ರೂಪದ ಗುಡುಸಲ

ವನ್ನು ಕಟ್ಟಿಕೊಂಡು ಸುಖವಾಗಿದ್ದರು. ಆ ಬಳಿಕ ಪರಶುರಾಮನು ರಾಮ ಕೃಷ್ಣರಿಗೆ ಆಶೀರ್ವಾದಗಳನ್ನು ಮಾಡಿ ಶೂರ್ಪಾರಕ ನಗರದ ಕಡೆಗೆ ಹೊರಟು ಹೋದನು. ಆ ಬಳಿಕ ರಾಮಕೃಷ್ಣರು ಗೋಮಂತ ಪರ್ವತದ ಮೇಲೆ ನಾನಾ ರೂಪಗಳನ್ನು ಧರಿಸಿಕೊಂಡು ಅಲ್ಲಿಯ ರಮಣೀಯವಾದ ದೃಶ್ಯಗಳನ್ನು ನೋಡುತ್ತ ಆನಂದದಿಂದ ಆಡ್ಡಾಡಹತ್ತಿದರು. ಆದರೆ ಮುಂದಾಗಿ ತಿಳುಕೊಂಡಂತೆ ಜರಾಸಂಧನು ಮಧುರೆಯ ಮೇಲೆ ಮುತ್ತಿಗೆ ಹಾಕುವದನ್ನು ಬಿಟ್ಟುಕೊಟ್ಟು ಶ್ರೀಕೃಷ್ಣನ ಬೆನ್ನ ಹತ್ತಿ ದಕ್ಷಿಣ ಕಡೆಗೆ ಗೋಮಂತ ಪರ್ವತದ ಸಮೀಪದಲ್ಲಿ ಬಂದು ತಲಪಿದನು. ಅವನ ಸಂಗಡ ಅಸಂಖ್ಯ ಆನೆಗಳೂ ಕುದುರೆಗಳೂ ರಥಗಳೂ ಕಾಲಾಳುಗಳೂ ಅಲ್ಲಿಗೆ ಬಂದವು. ಕೆಲವು ಹೊತ್ತಿನ ಮೇಲೆ ಈ ಪ್ರಚಂಡ ಸೈನ್ಯವು ಆ ಪರ್ವತವನ್ನು ಸುತ್ತಿಕೊಂಡಿತು. ಆದರೆ ಆ ಹೊತ್ತು ರಾತ್ರಿಯಾದ್ದರಿಂದ ಎಲ್ಲರು ವಿಶ್ರಾಂತಿಯನ್ನು ತೆಗೆದುಕೊಂಡರು. ಮಾರನೇ ದಿವಸ ಎದ್ದ ಕೂಡಲೆ ಎಲ್ಲ ರಾಜರು ಗೋಮಂತ ಪರ್ವತದ ಮೇಲೆ ಹೇಗೆ ಮುತ್ತಿಗೆ ಹಾಕಬೇಕೆಂಬುದನ್ನು ಕುರಿತು ವಿಚಾರ ನಡೆಸಿದರು. ಆಗ ಜರಾಸಂಧನು ಪರ್ವತದ ನಾಲ್ಕೂ ದಿಕ್ಕುಗಳಿಂದ ಬೇರೆ ಬೇರೆ ನಾಲ್ಕು ಸೈನ್ಯದ ತುಕ್ಕಡಿಗಳು ಪರ್ವತವನ್ನು ಹತ್ತಿ ಹೋಗಿ ರಾಮಕೃಷ್ಣರನ್ನು ನಡುವೆ ಹಿಡಿದು ಕೊಲ್ಲಬೇಕೆಂದು ತನ್ನ ಅಭಿಪ್ರಾಯವನ್ನು ಕೊಟ್ಟನು. ಆದರೆ ಚೇದಿ ದೇಶಾಧಿಪತಿಯಾದ ಶಿಶುಪಾಲನು ಜರಾಸಂಧನನ್ನು ಕುರಿತು—

"ನಮ್ಮ ಸೈನ್ಯದವರಿಗೆ ಪರ್ವತವನ್ನು ಏರಿ ಹೋಗಿ ಯುದ್ಧಮಾಡುವ ಅಭ್ಯಾಸವಿಲ್ಲ. ಅವರಿಗೆ ಸಪಾಟ ನೆಲದ ಮೇಲೆ ರಥದಲ್ಲಿ ಕುಳಿತು ಬಾಣ ಹೊಡೆಯಲಿಕ್ಕೆ ಮಾತ್ರ ಗೊತ್ತಿರುತ್ತದೆ. ಆದುದರಿಂದ ಈ ಪ್ರಕಾರ ಮಾಡದೆ ಪರ್ವತದ ಸುತ್ತಲು ಬೆಂಕಿ ಹಚ್ಚಿದರೆ ಪರ್ವತವೆಲ್ಲ ಸುಟ್ಟು ಹೋಗಿ ರಾಮಕೃಷ್ಣರು ಸಾಯುವರು ಅಥವಾ ಪರ್ವತದ ಮೇಲಿಂದ ಜಿಗಿದು ಸಪಾಟ ನೆಲದ ಮೇಲೆ ಬರುವದು" ಎಂದು ಜರಾಸಂಧನಿಗೆ ಹೇಳಿದನು. ಆಗ ಜರಾಸಂಧನು ಶಿಶುಪಾಲನ ಅಭಿಪ್ರಾಯನ್ನು ಒಪ್ಪಿಕೊಂಡು ಆ ಪರ್ವತಕ್ಕೆ ನಾಲ್ಕೂ ಕಡೆಯಿಂದ ಬೆಂಕಿ ಹಚ್ಚಿಸಿದನು. ಈ ಬೆಂಕಿಯ ಪ್ರಖರ ತಾಪದಿಂದ ಆ ಪರ್ವತದೊಳಗಿನ ಯಾವತು ಧಾತುಗಳು ಕರಗಿ ಅವುಗಳ ರಸವು ಹರಿಯಹತ್ತಿತು.

ದೊಡ್ಡ ದೊಡ್ಡ ಗಿಡಗಳು ಸುಟ್ಟು ಹೋಗಿ ಅವುಗಳ ನಿಗಿ ನಿಗಿ ಕೆಂಡವು ಕೆಳಗೆ ಬೀಳಲಾರಂಭಿಸಿತು. ಸರ್ಪಗಳು ತಮ್ಮ ಅರ್ಧ ಶರೀರವು ಸುಟ್ಟ ವೇದನೆಯಿಂದ ಭಯಂಕರವಾಗಿ ಘೂತ್ಕಾರವನ್ನು ಮಾಡುತ್ತಲೂ, ತಮ್ಮ ಆಕ್ರಾಳ ವಿಕ್ರಾಳ ವಾದ ಹೆಡೆಗಳನ್ನು ಮೇಲಕ್ಕೆ ಎತ್ತುತ್ತಲೂ, ಸಿಟ್ಟಿನಿಂದ ಕಣ್ಣು ಕೆಂಪಗೆ ಮಾ ಡುತ್ತಲೂ ಅತ್ತಿಂದ ಇತ್ತ, ಇತ್ತಿಂದ ಅತ್ತ ಜಿಗಿದಾಡಹತ್ತಿದವು. ಸಿಂಹ, ಹುಲಿ, ತೋಳ ಮುಂತಾದ ಹಿಂಸಕಪ್ರಾಣಿಗಳು ಸಂಕಟಪಡುತ್ತ ತಮ್ಮ ಗವಿಗ ಳಿಂದ ಹೊರಬಿದ್ದು ಉರಿಯುವ ಬೆಂಕಿಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಎದ್ದೆ ದ್ದು ಜಿಗಿದು, ತಲೆ ಅಪ್ಪಳಿಸಿ, ಭಯಂಕರ ಗರ್ಜನೆ ಮಾಡುತ್ತ, ತಮ್ಮ ಪ್ರಾಣ ವನ್ನು ಬಿಡಹತ್ತಿದವು. ಚಿಗರಿ, ಮೊಲ ಮೊದಲಾದ ಸಣ್ಣ ಸಣ್ಣ ಶ್ವಾಪದಗಳಂ ತೂ ಬೆಂಕಿಯಲ್ಲಿ ಸುಟ್ಟು ಹೊರಪಳಿಸಿಕೊಂಡು ಛಟ ಛಟನೆ ಸಾಯಹತ್ತಿದವು. ಇದನ್ನು ನೋಡಿ ರಾಮಕೃಷ್ಣರು ತಮ್ಮ ಸಲುವಾಗಿ ಪರ್ವತದ ಮೇಲಿನ ಯಾವತ್ತು ಪ್ರಾಣಿಗಳು ಸುಟ್ಟು ನಾಶವಾದವೆಂದು ಬಹಳ ಸಂತಾಪಪಟ್ಟು ತಮ್ಮ ಆಯುಧಗಳೊಂದಿಗೆ ಪರ್ವತದ ಕೆಳಗೆ ಹಾರಿಕೊಂಡು, ಜರಾಸಂಧನ ಸೈನ್ಯವು ಹರಡಿದ ಕಡೆಗೆ ಪರ್ವತದ ಆಶ್ರಯವಿದ್ದ ಯೋಗ್ಯ ಸ್ಥಳದ ಮೇಲೆ ಬಂದು ನಿಂತು, ತಮ್ಮ ಧನುಷ್ಯಗಳಿಗೆ ಬಾಣಗಳನ್ನು ಸಜ್ಜ ಮಾಡಿ ಬಾಣಗಳ ಮಳೆಗರಿಸಿದರು. ಇದರಿಂದ ಶತ್ರು ಸೈನ್ಯದಲ್ಲಿಯ ಸಾವಿರಾರು ರಥ-ಕುದುರೆ-ಆನೆಗಳೂ, ಕಾಲಾಳುಗಳೂ ತೀವ್ರವಾಗಿಯೇ ಯಮಸದನಕ್ಕೆ ಹೋದವು. ಎಷ್ಟೋ ಶತ್ರುಸೈನ್ಯವು ಓಡಿ ಹೋಯಿತು. ಆ ಬಳಿಕ ಬಲರಾಮನು ತನ್ನ ಕೈಯಲ್ಲಿ ನೇಗಿಲವನ್ನೂ, ಶ್ರೀಕೃಷ್ಣನು ಸುದರ್ಶನ ಚಕ್ರವನ್ನೂ ತೆಗೆದುಕೊಂಡು ಯುದ್ಧ ಮಾಡಿದರು. ಬಲರಾಮನು ನೇಗಿಲದಿಂದ ಶತ್ರುಗಳ ರಥಗಳನ್ನೂ ಆನೆ ಗಳನ್ನೂ ಹಿಡಿದು ಜಗ್ಗಿ, ತನ್ನ ಒನಿಕೆಯ ಹೊಡತಗಳಿಂದ ಅವುಗಳನ್ನು ಸಂಹ ರಿಸಿದನು. ಶ್ರೀಕೃಷ್ಣನು ತನ್ನ ಸುದರ್ಶನ ಚಕ್ರವನ್ನು ಶತ್ರುಗಳ ಮೈಮೇಲೆ ಒಗೆಯುತ್ತಿದ್ದುದರಿಂದ ಅದು ಆವರ ಶಿರಚ್ಛೇದವನ್ನು ಮಾಡಿ ತಿರುಗಿ ಅವನ ಕೈಯಲ್ಲಿ ಬರುತ್ತಿತ್ತು. ಈ ಪ್ರಕಾರ ಈ ಇಬ್ಬರು ವೀರರು, ಶ್ರೀರಾಮಚಂದ್ರನು ಜನಸ್ಥಾನದೊಳಗೆ ತನ್ನ ಕಾಲಮೇಲೆ ನಿಂತು ಯುದ್ಧಮಾಡಿ ಹದಿನಾಲ್ಕು ಸಾವಿರ ರಾಕ್ಷಸರನ್ನು ಕೊಂದಂತೆ, ಜರಾಸಂಧನ ಲಕ್ಷಾವಧಿ ಸೈನ್ಯದ ಪರಾಭವವನ್ನು

ತಮ್ಮ ಕಾಲ ಮೇಲೆ ನಿಂತುಕೊಂಡು ಮಾಡಿದರು. ಆ ಸಮಯದಲ್ಲಿ ರಣಭೂಮಿ ಯು ಯಮಧರ್ಮನ ವಿಹಾರಭುವನವೋ ಏನೋ ಅಂಬುವಂತೆ ರಣಗುಟ್ಟು ತ್ತಿತ್ತು. ಕೊನೆಗೆ ಜರಾಸಂಧನು ಪರಾಭವವನ್ನು ಹೊಂದಿ ತಿರುಗಿ ಹೋದನು. ಅವನ ಸಂಗಡ ಅವನ ಮತ್ತು ಇತರ ರಾಜರ ಜೀವದಿಂದುಳಿದ ಸೈನ್ಯವು ಹೊ ರಟು ಹೋಯಿತು. ಶ್ರೀಕೃಷ್ಣ ಮತ್ತು ಬಲರಾಮರು ಅವರ ಬೆನ್ನ ಹತ್ತಿ ಹೋ ಗದೆ ಕ್ರೌಂಚಪುರಕ್ಕೆ ಹೋದರು. ಅಲ್ಲಿ ಶಿಶುಪಾಲನ ತಂದೆಯೂ ಚೇದಿದೇಶಾಧಿ ಪತಿಯೂ ಆದ ದಮಘೋಷನು ಮತ್ತು ಕ್ರೌಂಚಪುರದ ಅರಸನು ಅವರ ಅದ್ವಿತೀಯ ಪರಾಕ್ರಮವನ್ನು ಹೊಗಳಿದರು. ಇಷ್ಟು ದಿವಸ ಇವರಿಬ್ಬರೂ ಮಲ್ಲವಿದ್ಯೆಯಲ್ಲಿ ಮಾತ್ರ ಪ್ರಸಿದ್ಧರಿದ್ದು ಈಗ ಧನುರ್ವಿದ್ಯೆಯಲ್ಲಿ ಪ್ರಸಿದ್ಧರಾದ ದ್ದನ್ನು ನೋಡಿ ದಮಘೋಷನು ತನಗೆ ಶ್ರೀಕೃಷ್ಣನ ಅತ್ತೆಯನ್ನು ಕೊಟ್ಟ ಸಂಬಂಧವನ್ನು ಸಹ ಲಕ್ಷ್ಯದಲ್ಲಿ ತಂದು ಜರಾಸಂಧನ ಪಕ್ಷವನ್ನು ಬಿಟ್ಟು ಕೊಟ್ಟನು. ರಾಮಕೃಷ್ಣರು ಕ್ರೌಂಚಪುರದಿಂದ ಮಥುರೆಗೆ ಹೊರಡುವಾಗ ಕ್ರೌಂಚಪುರದ ಅರಸನು ಅವರಿಗೆ ಒಂದು ಉತ್ತಮ ರಥವನ್ನೂ, ಕೆಲವು ಸೈನ್ಯ ವನ್ನೂ ಕೊಟ್ಟು ಬಹಳ ಸನ್ಮಾನ ಮಾಡಿದನು. ಅವರ ರಥವು ಕರವೀರದ ಮೇಲಿಂದ ಹೋಗಲು ಅಲ್ಲಿಯ ದುಷ್ಟ ಅರಸನಾದ ಶೃಗಾಲನು ರಾಮ ಕೃಷ್ಣರ ಪರಾಕ್ರಮವನ್ನು ಹೀಯಾಳಿಸಿ ಅವರಿಗೆ ಮುಂದೆ ಹೋಗಲಿಕ್ಕೆ ಪ್ರತಿ ಬಂಧ ಮಾಡಿದ್ದಲ್ಲದೆ ಶ್ರೀಕೃಷ್ಣನ ಸಂಗಡ ದ್ವಂದ್ವ ಯುದ್ಧವನ್ನು ಮಾಡಿ ಅವನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ಆಗ ಶ್ರೀಕೃಷ್ಣನು ನಗ ನಗುತ್ತ ಅವನ ಬಾಣಗಳನ್ನು ಕತ್ತರಿಸಿ, ಕಡೆಗೆ ಅವನ ಎದೆಯ ಮೇಲೆ ತನ್ನ ಸುದರ್ಶನ ಚಕ್ರವನ್ನು ಒಗೆಯಲಾಗಿ ಅದು ಅವನ ಎದೆಯನ್ನು ಸೀಳಿ ಪುನಃ ಶ್ರೀಕೃಷ್ಣನ ಕೈಯೊಳಗೆ ಬಂತು! ಈ ಪ್ರಕಾರ ಶೃಗಾಲ ರಾಜನು ಪತಂಗದ ಹುಳವು ಅಗ್ನಿಯಲ್ಲಿ ಬಿದ್ದು ಸಾಯುವಂತೆ ತನ್ನ ಮೈಸೊಕ್ಕಿನಿಂದ ಶ್ರೀಕೃಷ್ಣನೊಡನೆ ನಿಷ್ಕಾರಣವಾಗಿ ಯುದ್ಧ ಮಾಡಿ ಸತ್ತು ಹೋದನು. ಆ ಮೇಲೆ ಶೃಗಾಲರಾಜನ ಹೆಂಡತಿಯೂ ಮಕ್ಕಳೂ ಶ್ರೀಕೃಷ್ಣನಿಗೆ ಶರಣು ಬಂದ ದ್ದರಿಂದ ಶ್ರೀಕೃಷ್ಣನು ಶೃಗಾಲರಾಜನ ಮಗನನ್ನು ಕರವೀರದ ಸಿಂಹಾಸನದ ಮೇಲೆ ಕುಳ್ಳಿರಿಸಿ ಶೃಗಾಲರಾಜನ ದಿವ್ಯರಥದ ಮೇಲೆ ತಾನೂ ಬಲರಾಮನೂ ಕುಳಿತುಕೊಂಡು ಅದೇ ದಿವಸ ಅಲ್ಲಿಂದ ಮುಂದೆ ಹೊರಟು ಹೋದರು.

ಆ ಮೇಲೆ ಅವರಿಬ್ಬರು ಐದು ದಿವಸ ದಾರಿಯನ್ನು ನಡೆದು ಒಂದು ದಿವಸ ಚೇದಿಪತಿಯಾದ ದಮಘೋಷನ ರಾಜಧಾನಿಯಲ್ಲಿ ಇದ್ದುಕೊಂಡು ಹಿಂದುಗಡೆ ಮಥುರೆಗೆ ಬಂದು ಮುಟ್ಟಿದರು. ರಾಮಕೃಷ್ಣರು ಎಲ್ಲ ಶತ್ರುಗಳನ್ನು ಗೆದ್ದು ಧನುರ್ಧರ ಶ್ರೇಷ್ಠರೆಂದು ಹೆಸರು ಪಡೆದು ಮರಳಿ ಬಂದದ್ದನ್ನು ನೋಡಿ ಮಥುರೆಯ ಜನರು ಅತ್ಯಂತ ಆನಂದಪಟ್ಟು ಅವರಿಗೆ ಸುಸ್ವಾಗತವನ್ನು ಮಾಡಿದರು. ಈ ಪ್ರಕಾರ ಅಲ್ಲಿ ರಾಮಕೃಷ್ಣರು ಒಂದೆರಡು ವರ್ಷ ಸುಖದಿಂದ ಕಳೆದರು. ಆ ಬಳಿಕ ಅವರಿಗೆ ತಮ್ಮ ಸೋದರಅತ್ತೆಯಾದ ಕುಂತಿಯು ತನ್ನ ಗಂಡನಾದ ಪಾಂಡುರಾಜನು ಸತ್ತದ್ದರಿಂದ ನಿರಾಶ್ರಿತರಾಗಿ ಐದು ಮಂದಿ ಸಣ್ಣ ಮಕ್ಕಳನ್ನು ಕೂಡಿಕೊಂಡು ಹಿಮಾಲಯದಿಂದ ಹಸ್ತಿನಾಪುರಕ್ಕೆ ಬಂದಿರುತ್ತಾಳೆಂದು ತಿಳಿದ ಕಾರಣ ಅವರು ಅವಳಿಗೆ ಸಮಾಧಾನವನ್ನು ಹೇಳ ಬರಲಿಕ್ಕೆ ಅಕ್ರೂರನನ್ನು ಕಳುಹಿಸಿದರು. ಆ ಕಾಲಕ್ಕೆ ಧರ್ಮನು ಏಳು ವರ್ಷದವನು, ಭೀಮನು ಆರು ವರ್ಷದವನು ಮತ್ತು ಅರ್ಜುನನು ಐದು ವರ್ಷದವನು ಇದ್ದರು. ಆಗ ಶ್ರೀಕೃಷ್ಣನು ಇಪ್ಪತ್ತೆರಡು ಅಥವಾ ಇಪ್ಪತ್ತುಮೂರು ವರ್ಷದವನು ಇದ್ದು ಪೂರ್ಣವಾಗಿ ತಾರುಣ್ಯಕ್ಕೆ ಬಂದಿದ್ದನು. ಅಕ್ರೂರನು ರಾಮಕೃಷ್ಣರ ಹೇಳಿಕೆಯ ಮೇರೆಗೆ ಹಸ್ತಿನಾಪುರಕ್ಕೆ ಹೋಗಿ ಕುಂತೀದೇವಿಯನ್ನು ಕಂಡು ಅವಳಿಗೆ—"ಪರಾಕ್ರಮಿಯಾದ ಶ್ರೀಕೃಷ್ಣನು ನಿನ್ನ ಮಕ್ಕಳಿಗೆ ಬೇಕಾದ ಸಹಾಯವನ್ನು ಮಾಡುತ್ತಾನೆ. ನೀನು ಚಿಂತೆ ಮಾಡಬೇಡ" ಎಂದು ತಿಳಿಸಿದ್ದಲ್ಲದೆ ಧೃತರಾಷ್ಟ್ರನನ್ನು ಕಂಡು ಅವನಿಗೆ—"ನೀನು ಧರ್ಮ, ಭೀಮ ಅರ್ಜುನಾದಿಗಳನ್ನು ಯೋಗ್ಯ ರೀತಿಯಿಂದ ರಕ್ಷಣ ಮಾಡು" ಎಂದು ಉಪದೇಶ ಹೇಳಿ ತಿರುಗಿ ಬಂದನು. ಇತ್ತಲಾ ಶ್ರೀಕೃಷ್ಣನ ಇನ್ನೊಬ್ಬ ಸೋದರ ಅತ್ತೆಯಾದ ಶಿಶುಪಾಲನ ತಾಯಿಯು ಅಂದರೆ ದಮಘೋಷನ ಹೆಂಡತಿಯು ವಸುದೇವನನ್ನು ಕಾಣಲಿಕ್ಕೆ ಬಂದಾಗ ಶ್ರೀಕೃಷ್ಣನಿಗೆ—"ನನ್ನ ಮಗನು ಜರಾಸಂಧನ ಬಲವಿಗೆ ಬಿದ್ದು ಕೆಟ್ಟ ಮಾರ್ಗವನ್ನು ಹಿಡಿದಿದ್ದರೂ ನೀನು ಅವನ ಅಪರಾಧವನ್ನು ಕ್ಷಮಿಸು" ಎಂದು ಬೇಡಿಕೊಂಡಳು. ಅದಕ್ಕೆ ಶ್ರೀಕೃಷ್ಣನು ಒಪ್ಪಿಕೊಂಡು ಅವಳನ್ನು ಸಮಾಧಾನ ಮಾಡಿ ಕಳಿಸಿಕೊಟ್ಟನು. ರಾಮಕೃಷ್ಣರು ಹೊರಟು ಬಂದಾಗಿನಿಂದ ವೃಂದಾವನದಲ್ಲಿಯ ನಂದ ಯಶೋದೆಯರಿಗೂ

ಯಾವತ್ತು ಗೋಪಗೋಪಿಯರಿಗೂ ಸಮಾಧಾನವಿದ್ದಿಲ್ಲ. ಆದುದರಿಂದ ಶ್ರೀ ಕೃಷ್ಣನು ಅವರಿಗೆ ಸಮಾಧಾನ ಮಾಡಿ ಬರುವದಕ್ಕಾಗಿ ಸ್ವತಃ ಬಲರಾಮನನ್ನು ವೃಂದಾವನಕ್ಕೆ ಕಳಿಸಿದನು. ಆ ಪ್ರಕಾರ ಬಲರಾಮನು ಅಲ್ಲಿಗೆ ಹೋಗಿ ನಂದಯಶೋದೆಯರಿಗೂ ಯಾವತ್ತು ಗೋಪಗೋಪಿಯರಿಗೂ ಸಮಾಧಾನ ಹೇಳಿ ಮಥುರೆಗೆ ತಿರುಗಿ ಬಂದನು.

ಆಗ ರಾಮಕೃಷ್ಣರು ತಾರುಣ್ಯಾವಸ್ಥೆಗೆ ಬಂದದ್ದರಿಂದ ವಸುದೇವನಿಗೂ ಅವನ ಇಬ್ಬರು ಹೆಂಡಂದಿರಾದ ರೋಹಿಣಿ ಮತ್ತು ದೇವಕಿಯರಿಗೂ ಅವರಿಬ್ಬರ ಮದುವೆಯ ಚಿಂತೆಯು ಹತ್ತಿತು. ಇಷ್ಟರಲ್ಲಿ ವಿದರ್ಭದೇಶದ ಅರಸನಾದ ಭೀಷ್ಮನು ಕುಂಡಿನಪುರದಲ್ಲಿ ತನ್ನ ಮಗಳಾದ ರುಕ್ಮಿಣಿಯ ಸ್ವಯಂವರವನ್ನು ಮಾಡುತ್ತಾನೆಂಬ ವರ್ತಮಾನವು ತಿಳಿದುಬಂದಿತು. ಭೀಷ್ಮನ ಮಗನಾದ ರುಕ್ಮಿಯು ಜರಾಸಂಧನ ಪಕ್ಷದವನಿದ್ದ ಕಾರಣ ಅವನು ಯಾವತ್ತು ದೇಶದ ರಾಜರಿಗೆ ಈ ಸ್ವಯಂವರಕ್ಕೆ ಬರುವದಕ್ಕಾಗಿ ಅಮಂತ್ರಣಗಳನ್ನು ಕಳಿಸಿಕೊಟ್ಟಾಗ್ಯೂ ಶ್ರೀ ಕೃಷ್ಣನಿಗೆ ಮಾತ್ರ ಆಮಂತ್ರಣವನ್ನು ಕಳಿಸಲಿಲ್ಲ. ರುಕ್ಮಿಣಿಯು ಪ್ರತ್ಯಕ್ಷ ಲಕ್ಷ್ಮಿಯ ಅಂಶವಾಗಿದ್ದು ಶ್ರೀಕೃಷ್ಣನ ಸಲುವಾಗಿಯೇ ನಿರ್ಮಾಣವಾಗಿದ್ದಳು. ಅವಳು ಶ್ರೀಕೃಷ್ಣನ ಸೌಂದರ್ಯ, ಪರಾಕ್ರಮ ಮತ್ತು ವೈಭವಗಳನ್ನು ಕೇಳಿ ಅವನನ್ನೇ ವರಿಸಬೇಕೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿದಳು. ಶ್ರೀಕೃಷ್ಣನಾದರೂ ರುಕ್ಮಿಣಿಯ ಲೋಕೋತ್ತರ ಲಾವಣ್ಯವನ್ನೂ, ಅವಳ ಮನಸ್ಸು ತನ್ನಲ್ಲಿ ಆಸಕ್ತವಿರುವದನ್ನೂ, ಅವಳ ಸೌಜನ್ಯವನ್ನೂ ಕೇಳಿ ಅವಳನ್ನೇ ವರಿಸಬೇಕೆಂದು ನಿಶ್ಚಯಿಸಿದನು. ಆದುದರಿಂದ ಅವನು ಮಥುರೆಯ ರಕ್ಷಣದ ಸಲುವಾಗಿ ಬಲರಾಮನನ್ನು ಇಟ್ಟು ಕೆಲವು ಯಾದವ ಸೈನ್ಯವನ್ನು ತನ್ನ ಸಂಗಡ ಕರಕೊಂಡು ಕುಂಡಿನಪುರಕ್ಕೆ ಹೋಗಿ ಮುಟ್ಟಿದನು. ಭೀಷ್ಮಕರಾಜನು ಶ್ರೀಕೃಷ್ಣನಿಗೆ ಅಮಂತ್ರಣವನ್ನು ಕಳಿಸದೆ ಇದ್ದಾಗ್ಯೂ ಅವನು ಬಂದದ್ದನ್ನು ನೋಡಿ ಯಾವತ್ತು ದೇಶದ ಅರಸರು ಅವನು ರುಕ್ಮಿಣಿಯ ಪ್ರಾಪ್ತಿಯ ಸಲುವಾಗಿಯೇ ಬಂದಿರುತ್ತಾನೆಂದು ತರ್ಕಿಸಿದರು. ದಂಡವಕ್ರ ಮೊದಲಾದ ಕೆಲವು ಅರಸರು—“ಶ್ರೀಕೃಷ್ಣನು ಸುಜ್ಞನು ಇರುತ್ತಾನೆ. ರುಕ್ಮಿಣಿಯು ಅವನನ್ನು ವರಿಸಿದರೆ ವರಿಸಲಿ. ಅವಳು ಅವನನ್ನು ವರಿಸದಿದ್ದರೆ ಅವನು ಅವಳನ್ನು ಬಲಾತ್ಕಾರದಿಂದ ಒಯ್ಯಲಾರನು.

ಆದುದರಿಂದ ಅವನನ್ನು ಸ್ವಯಂವರಕ್ಕೆ ಕರಕೊಂಡು ಹೋಗೋಣ" ಎಂದು ಹೇಳಿದರು. ಆದರೆ ಕೆಲವು ಅರಸರು ಅಂದರೆ ಶಾಲ್ವ, ಶಿಶುಪಾಲ ಇತ್ಯಾದಿ ಜನರು ಶ್ರೀಕೃಷ್ಣನು ಮೂರ್ಧಾಭಿಷಿಕ್ತ ರಾಜನಲ್ಲದ ಕಾರಣ ಅವನಿಗೆ ಸ್ವಯಂವರಕ್ಕೆ ಬರಲಿಕ್ಕೆ ಅಧಿಕಾರವಿಲ್ಲವೆಂದು ಹಟವನ್ನು ಹಿಡಿದರು. ಪರಶುರಾಮನಿಂದ ಅಸ್ತ್ರಗಳನ್ನು ಸಂಪಾದಿಸಿದ ಕಾರಣ ಸೊಕ್ಕಿಗೆ ಬಂದಿದ್ದ ರುಕ್ಮಿಯು--"ನಾನು ಸ್ವಯಂವರದಲ್ಲಿಯಾಗಲಿ, ಇತರ ರೀತಿಯಿಂದಾಗಲಿ, ಶ್ರೀಕೃಷ್ಣನಿಗೆ ನನ್ನ ತಂಗಿಯನ್ನು ಎಂದಿಗೂ ವರಿಸಲಿಕ್ಕೆ ಕೊಡಲಾರೆನು" ಎಂದು ಹೇಳಿದನು. ಈ ಪ್ರಕಾರ ಶ್ರೀಕೃಷ್ಣನ ವಿರೋಧಿಗಳು ಈರ್ಷೆಯಿಂದ ಮಾತಾಡುವದನ್ನು ಕಂಡು ಭೀಷ್ಮಕನ ಆಪ್ತನಾದ ಕ್ರಥಕೈಶಿಕ ರಾಜನು ಶ್ರೀಕೃಷ್ಣನಿಗೆ ನನ್ನ ರಾಜ್ಯವನ್ನು ಕೊಟ್ಟು ಅವನಿಗೆ ಮೂರ್ಧಾಭಿಷೇಕ ಸಮಾರಂಭವನ್ನು ಮಾಡಿದನು. ಭೀಷ್ಮಕ ರಾಜನಾದರೂ ಶ್ರೀಕೃಷ್ಣನನ್ನು ತನ್ನ ಮನೆಗೆ ಕರೆಯಿಸಿ ಅವನ ಸ್ವಾಗತವನ್ನು ಮಾಡಿದನು. ಜರಾಸಂಧ, ಶಾಲ್ವ, ಶಿಶುಪಾಲ ಇತ್ಯಾದಿ ರಾಜರು ಶ್ರೀಕೃಷ್ಣನ ಮೂರ್ಧಾಭಿಷೇಕ ಸಮಾರಂಭಕ್ಕಾಗಲಿ, ಸ್ವಾಗತ ಸಮಾರಂಭಕ್ಕಾಗಲಿ ಹೋಗದೆ ಸಿಟ್ಟಿನಿಂದ ತಮ್ಮ ದೇಶಗಳಿಗೆ ಹೊರಟು ಹೋದರು. ಆದುದರಿಂದ ರುಕ್ಮಿಣಿಯ ಸ್ವಯಂವರವು ನಿಂತು ಹೋಯಿತು. ಆಗ ಶ್ರೀಕೃಷ್ಣನು ಕ್ರಥಕೈಶಿಕನಿಗೆ ಅವನ ರಾಜ್ಯವನ್ನು ತಿರುಗಿ ಕೊಟ್ಟು ಅತ್ಯಂತ ಪ್ರೇಮದಿಂದ ಅವನ ನಿರೂಪವನ್ನು ತೆಗೆದುಕೊಂಡು ತನ್ನ ಯಾದವ ಸೈನ್ಯವನ್ನೊಡಗೂಡಿ ಮಥುರೆಗೆ ಹೊರಟು ಹೋದನು.

ಈ ಪ್ರಕಾರ ರುಕ್ಮಿಣಿಯ ಸ್ವಯಂವರವು ನಿಂತು ಹೋಗಲಾಗಿ ಜರಾಸಂಧನಿಗೆ ಬಹಳ ಸಿಟ್ಟು ಬಂದಿತು. "ನಾನು ಹಿಂದುಸ್ಥಾನದ ಸಾರ್ವಭೌಮನಿದ್ದು ನಾನು ಹೋದಲ್ಲೆಲ್ಲ ಈ ಸಣ್ಣ ಹುಡುಗನು ನನ್ನ ಅವಮಾನವನ್ನು ಮಾಡುತ್ತಾನೆ" ಎಂದು ಅವನು ಮನಸ್ಸಿನಲ್ಲಿ ಬಹಳ ಕುದಿಯುತ್ತ ಹೊರಗಿನ ಶತ್ರುವನ್ನು ಕರೆಯಿಸಿ ಶ್ರೀಕೃಷ್ಣನಿಗೆ ಈ ಸಾರೆ ಚನ್ನಾಗಿ ಕೈ ಹಚ್ಚಬೇಕೆಂಬ ವಿಚಾರದಿಂದ ಶಾಲ್ವನನ್ನು ಕಾಲಯುವನನ ಕಡೆಗೆ ಕಳುಹಿಸಿ, ಅವನನ್ನು ತನ್ನ ಸಹಾಯಕ್ಕಾಗಿ ಕರೆಯಿಸಿಕೊಂಡನು. ಆ ಬಳಿಕ ಜರಾಸಂಧನು ಪೂರ್ವ

ದ ಕಡೆಯಿಂದಲೂ, ಕಾಲಯವನ ಮತ್ತು ಶಾಲ್ವರು ಪಶ್ಚಿಮದ ಕಡೆಯಿಂ ದಲೂ ಮಥುರೆಯ ಮೇಲೆ ಮುತ್ತಿಗೆಯನ್ನು ಹಾಕಬೇಕೆಂದು ನಿಶ್ಚಯಿಸಿ ತಮ್ಮ ಪ್ರಚಂಡ ಸೈನ್ಯವನ್ನು ಕರಕೊಂಡು ಹೊರಟರು. ಈ ವರ್ತಮಾ ನವು ಶ್ರೀಕೃಷ್ಣನಿಗೆ ಮುಟ್ಟಲಾಗಿ ಶ್ರೀಕೃಷ್ಣನು ತನ್ನಷ್ಟಕ್ಕೆ--"ನಾನು ಈಗೀಗ ಮಥುರೆಗೆ ತಿರುಗಿ ಬಂದದ್ದರಿಂದ ಮಥುರೆಯ ನಿವಾಸಿಗಳು ತಮ್ಮ ನಗರವನ್ನು ಶೃಂಗರಿಸಿ ಅಲ್ಲಲ್ಲಿ ಧ್ವಜಪತಾಕೆಗಳನ್ನು ನಿಲ್ಲಿಸಿ ನನ್ನ ಸ್ವಾಗತವನ್ನು ಮಾಡಿದರು. ಹಾಗೂ ನಾನು ಕಂಸನನ್ನು ಕೊಂದು ಕಂಸನ ಸಿಂಹಾಸನದ ಮೇಲೆ ಕುಳಿತುಕೊಳ್ಳದೆ ಉಗ್ರಸೇನನನ್ನು ಕುಳ್ಳಿರಿಸಿ ಅವನ ಕಡೆಯಿಂದ ಅರ್ಘ್ಯ ಪೂಜೆಯನ್ನು ಸಹ ಮಾಡಿಸಿಕೊಳ್ಳದೆ ಮಥುರೆಗೆ ತಿರುಗಿ ಬಂದದ್ದಕ್ಕಾಗಿ ನನ್ನ ನಿಃಸ್ವಾರ್ಥ ಬುದ್ಧಿಯನ್ನು ಸ್ತುತಿ ಮಾಡಿದರು. ಈಗ ಅವರ ಕಡೆಯಿಂದ ಶ್ರೀ ಕೃಷ್ಣನು ಜರಾಸಂಧನ ಕೂಡ ಕಡು ವೈರತ್ವವನ್ನು ಮಾಡಿ ನಮ್ಮನ್ನು ಮೇಲಿಂದ ಮೇಲೆ ಸಂಕಟಕ್ಕೆ ಎಡೆ ಮಾಡುತ್ತಾನೆಂದು ಅನ್ನಿಸಿಕೊಳ್ಳುವದು ಬಹಳ ನಾಚಿಕೆಯ ಮಾತು. ಆದುದರಿಂದ ನಾನು ಮಥುರೆಯನ್ನು ನಿರಂತರ ವಾಗಿ ಬಿಟ್ಟುಕೊಟ್ಟು ಆನರ್ತ ದೇಶ (ಗುಜರಾಥ) ದಲ್ಲಿ ಸಮುದ್ರ ದಂಡೆಯ ಮೇಲೆ ಒಂದು ನೂತನ ನಗರವನ್ನು ಸ್ಥಾಪಿಸುವದು ಒಳ್ಳೇದು" ಎಂದು ಯೋಚಿಸಿ ಈ ತನ್ನ ಹಂಚಿಕೆಯನ್ನು ಯಾವತ್ತು ಯಾದವರಿಗೆ ತಿಳಿಸಿದನು. ಅದಕ್ಕೆ ಅವರೆಲ್ಲರು ಆನಂದದಿಂದ ಒಪ್ಪಿಕೊಳ್ಳಲಾಗಿ ರಾಮಕೃಷ್ಣರು ಅದೇ ದಿವಸ ತಮ್ಮ ಸೈನ್ಯವನ್ನೂ, ರಥಗಳನ್ನೂ, ದ್ರವ್ಯವನ್ನೂ ತೆಗೆದುಕೊಂಡು ಮಥುರೆಯನ್ನು ಬಿಟ್ಟು ಹೋದರು. ಮುಂದೆ ಅವರು ಮಾರ್ಗಕ್ರಮಣ ಮಾಡುತ್ತ ಆನರ್ತದೇಶಕ್ಕೆ ಹೋಗಿ ಮುಟ್ಟಿ ಅಲ್ಲಿ ಸಮುದ್ರದ ದಂಡೆಯ ಮೇಲೆ ಕುಶಸ್ಥಲವೆಂಬಲ್ಲಿ ಒಂದು ನಗರವನ್ನು ಸ್ಥಾಪನ ಮಾಡಿಕೊಂ ಡರು. ಆ ಮೇಲೆ ಶ್ರೀಕೃಷ್ಣನು ಈ ಹೊಸ ನಗರದ ಮೇಲೆ ದುಷ್ಟನಾದ ಕಾಲಯವನನ ಪೀಡೆಯುಂಟಾಗಬಾರದೆಂದು ಅವನನ್ನು ಹಾದಿಯಲ್ಲಿಯೇ ಮರ್ದಿಸುವದಕ್ಕಾಗಿ ತಿರುಗಿ ಮಥುರೆಗೆ ಹೊರಟು ಧೋಲಾಪುರದ ಹತ್ತರ ಅವನನ್ನು ಕಂಡು ಅವನ ಕೂಡ ತಾನೂ ಯುದ್ಧ ಮಾಡುವ ಆವಿರ್ಭಾವವನ್ನು ತೋರಿಸಿ ಹಿಂದಕ್ಕೆ ಸರಿದುಕೊಂಡನು. ಇದರಿಂದ ಶ್ರೀಕೃಷ್ಣನು ತನಗೆ ಅಂಜಿ

ದನೆಂದು ಕಾಲಯುವನನು ತಿಳಿದುಕೊಂಡು ತ್ವರೆಯಿಂದ ಶ್ರೀಕೃಷ್ಣನ ಬೆನ್ನ ಹತ್ತಿ ಹೋದನು. ಆಗ ಯುದ್ಧಪಟುವಾದ ಶ್ರೀಕೃಷ್ಣನು ಒಂದು ಗುಡ್ಡವನ್ನು ಸೇರಲಾಗಿ ಕಾಲಯುವನನ ಸೈನ್ಯವು ಅವನ ಬೆನ್ನ ಹತ್ತಿ ಹೋಗಿ ಆ ಇಕ್ಕಟ್ಟಾದ ಸ್ಥಳದಲ್ಲಿ ಸಿಕ್ಕಿತು. ಈ ಪ್ರಕಾರ ಶ್ರೀಕೃಷ್ಣನು ಆ ಗುಡ್ಡದಲ್ಲಿ ಹೋಗುತ್ತ ಹೋಗುತ್ತ ಮುಚಕುಂದನು ಮಲಗಿಕೊಂಡಿದ್ದ ಗುಹೆಯನ್ನು ಪ್ರವೇಶಿಸಿ ಅಲ್ಲಿ ಒಂದು ಕಡೆಗೆ ಕತ್ತಲದೊಳಗೆ ನಿಂತುಕೊಂಡನು. ಕಾಲಯುವನನು ತಾನೂ ಶ್ರೀಕೃಷ್ಣನ ಬೆನ್ನ ಹತ್ತಿ ಆ ಗುಹೆ (ಗವಿ) ಯನ್ನು ಹೊಕ್ಕು ಅಲ್ಲಿ ಮಲಗಿಕೊಂಡಿದ್ದ ಮುಚಕುಂದನನ್ನು ನೋಡಿ-“ ಇಲ್ಲಿ ಕೃಷ್ಣನು ನಿದ್ದೆ ಮಾಡುವವನಂತೆ ಡಾಂಭಿಕತನದಿಂದ ಮಲಗಿಕೊಂಡಿರುತ್ತಾನೆ” ಎಂದು ಹೇಳಿ ಮುಚಕುಂದನನ್ನು ಒದ್ದನು. ಆ ಮುಚಕುಂದನು ಇಕ್ಷ್ವಾಕುವಂಶದ ಅರಸನಿದ್ದು ಹಿಂದೆ ದೇವತೆಗಳು ರಾಕ್ಷಸರ ಕೂಡ ಯುದ್ಧ ಮಾಡುವ ಸಮಯದಲ್ಲಿ ಅವನ ಸಹಾಯವನ್ನು ತೆಗೆದುಕೊಂಡಿದ್ದರು. ಆಗ ಅವನು ರಾಕ್ಷಸರ ಕೂಡ ಯುದ್ಧ ಮಾಡಿ ಅವರನ್ನು ಸೋಲಿಸಿದ್ದರಿಂದ ಆ ದೇವತೆಗಳು ಸಂತುಷ್ಟರಾಗಿ-“ ನೀನು ಬೇಕಾದ ವರವನ್ನು ಬೇಡಿಕೋ” ಎಂದು ಕೇಳಿದರು. ಹಾಗೂ ಈ ಪ್ರಕಾರ ಕೇಳುವ ಕಾಲಕ್ಕೆ ಅವನಿಗೆ--“ ನಿನ್ನ ಹೆಂಡತಿಮಕ್ಕಳು, ಮಂತ್ರಿ, ಸೇನಾಧಿಪತಿ, ಸೇವಕರು ಮುಂತಾದ ಯಾವತ್ತು ಜನರು ಸತ್ತಿರುತ್ತಾರೆ” ಎಂದು ತಿಳಿಸಿದರು. ಆದುದರಿಂದ ಆ ದುಃಖಿತನಾದ ಮುಚಕುಂದ ಅರಸನು-“ ನನಗೆ ಇಲ್ಲಿಯೇ ದೀರ್ಘನಿದ್ರೆಯು ಹತ್ತಲಿ. ಆದರೆ ಯಾರಾದರೂ ನನನ್ನು ನಿದ್ರೆಯಿಂದ ಎಚ್ಚರಿಸಿದಲ್ಲಿ ಆ ಎಚ್ಚರಿಸಿದವನನ್ನು ನಾನು ನೋಡಿದ ಕೂಡಲೆ ಅವನು ಅಲ್ಲಿಂದಲ್ಲಿಯೇ ಸುಟ್ಟು ಭಸ್ಮವಾಗಲಿ” ಎಂದು ವರವನ್ನು ಬೇಡಿಕೊಂಡು ಆ ಗುಹೆಯಲ್ಲಿ ಮಲಗಿದ್ದನು. ಇಂಥ ಮುಚಕುಂದನನ್ನು ಈಗ ಕಾಲಯುವನನು ನಿದ್ರೆಯಿಂದ ಎಚ್ಚರಿಸಿದ ಕಾರಣ ಅವನು ಈ ರಾಜರ್ಷಿಯ ಕಣ್ಣೊಳಗಿಂದ ಹೊರಟ ಕಿಡಿಗಳಿಂದ ಸುಟ್ಟು ಭಸ್ಮವಾದನು. ಈ ಪ್ರಕಾರ ಶ್ರೀಕೃಷ್ಣನು ಯುಕ್ತಿಯನ್ನು ಮಾಡಿ ಕಾಲಯುವನನ ಮೃತ್ಯುವನ್ನುಂಟುಮಾಡಿದ ತರುವಾಯ ಮುಚಕುಂದನಿಗೆ ದರ್ಶನ ಕೊಡಲಾಗಿ ಮುಚಕುಂದನು ಅವನಿಗೆ-“ ಈಗ ಯಾವ ಯುಗವು ನಡೆದಿರುತ್ತದೆ? ” ಎಂದು

ಕೇಳಿದನು. ಆದಕ್ಕೆ ಶ್ರೀಕೃಷ್ಣನು—"ಈಗ ದ್ವಾಪರ ಯುಗವು ಮುಗಿಯುತ್ತ ಬಂದಿದ್ದು ಕಲಿಯುಗದ ಆರಂಭವಾಯಿತೆಂದು ತಿಳಿ" ಎಂದು ಹೇಳಿದನು. ಆಗ ಮುಚಕುಂದ ರಾಜರ್ಷಿಯು ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ತನ್ನ ಗುಹೆಯೊಳಗಿಂದ ಹೊರಗೆ ಬಂದು ನೋಡಲಾಗಿ ಸಣ್ಣ ಸಣ್ಣ ಮನುಷ್ಯರು, ಸಣ್ಣ ಸಣ್ಣ ಗಿಡಗಳು, ಸಣ್ಣ ಸಣ್ಣ ಆಕಳು ಎತ್ತುಗಳು ಈ ಪ್ರಕಾರ ಯಾವತ್ತು ಜೀವಸೃಷ್ಟಿಯು ಅಲ್ಪ ಪರಿಮಾಣದವು, ಅಲ್ಪ ಬಲದವು ಮತ್ತು ಅಲ್ಪ ಉತ್ಸಾಹವುಳ್ಳವು ಆಗಿರುವದನ್ನು ನೋಡಿ ತನ್ನ ರಾಜ್ಯವನ್ನು ಎರಡನೇ ಯಾರಾದರೂ ತೆಗೆದುಕೊಂಡಿರಬಹುದೆಂದು ತನ್ನ ಮನಸ್ಸಿನಲ್ಲಿ ನೆನಸಿ ಶ್ರೀಕೃಷ್ಣನ ಅನುಮತಿಯನ್ನು ತೆಗೆದುಕೊಂಡು ಹಿಮಾಲಯದೊಳಗೆ ಬದರಿಕಾಶ್ರಮದಲ್ಲಿ ತಪಶ್ಚರ್ಯ ಮಾಡಲಿಕ್ಕೆ ಹೊರಟು ಹೋದನು. ಇತ್ತಲಾಗಿ ಸೇನಾನಾಯಕನಾದ ಕಾಲಯವನನು ಸತ್ತು ಹೋದದ್ದರಿಂದ ಇಕ್ಕಟ್ಟಾದ ಸ್ಥಳದಲ್ಲಿ ಸಿಕ್ಕಿದ್ದ ಅವನ ಯಾವತ್ತು ಸೈನ್ಯವನ್ನು ಶ್ರೀಕೃಷ್ಣನು ಸುಲಭವಾಗಿ ಪರಾಭವ ಮಾಡಿ ಅವನ ಆನೆ-ಕುದುರೆ-ರಥ ಮುಂತಾದ ಯಾವತ್ತು ಸಂಪತ್ತನ್ನು ತೆಗೆದುಕೊಂಡು ಕೆಲವು ಯವನ ವೀರರನ್ನು ತನ್ನ ಬಳಿಯಲ್ಲಿ ಕೆಲಸ ಮಾಡಲಿಕ್ಕೆ ನೇಮಿಸಿಕೊಂಡನು. ಈ ಪ್ರಕಾರ ಶ್ರೀಕೃಷ್ಣನು ಕಾಲಯವನನ ಉಪದ್ರವನ್ನು ಪರಿಹರಿಸಿದ ಬಳಿಕ ಅವನ ಸೈನ್ಯವನ್ನೂ ಸಂಪತ್ತನ್ನೂ ತೆಗೆದುಕೊಂಡು ಮಥುರೆಗೆ ಹೋಗಿ ಉಗ್ರಸೇನನಿಗೆ ಈ ಯಾವತ್ತು ವರ್ತಮಾನವನ್ನು ತಿಳಿಸಿ ಅವನ ಸಮಾಧಾನ ಮಾಡಿದ ತರುವಾಯ ತನ್ನ ಯಾವತ್ತು ಸೈನ್ಯ ಮತ್ತು ಸಂಪತ್ತು ಸಹಿತವಾಗಿ ದ್ವಾರಕೆಗೆ ಬಂದು ಮುಟ್ಟಿದನು. ಇತ್ತಲಾ ಜರಾಸಂಧನಿಗೆ ಕಾಲಯವನನು ಸತ್ತ ಸಂಗತಿಯೂ, ಯಾದವರು ಮಥುರೆಯನ್ನು ಬಿಟ್ಟು ಸಮುದ್ರದಲ್ಲಿ ತಮ್ಮ ಸಲುವಾಗಿ ದ್ವಾರಕಾ ನಗರವನ್ನು ಸ್ಥಾಪಿಸಿದ ಸಂಗತಿಯೂ ಗೊತ್ತಾಗಲಾಗಿ ಅವನು ಮಥುರೆಯ ಮೇಲಿನ ಮುತ್ತಿಗೆಯನ್ನು ತೆಗೆದು ಬಿಟ್ಟು ಮಗಧ ದೇಶಕ್ಕೆ ತಿರುಗಿ ಹೋದನು.

---

# ೩. ದ್ವಾರಕಾಪರ್ವ.



ಶ್ರೀಕೃಷ್ಣನು ಕಾಲಯವನನ್ನು ಕೊಲ್ಲಿಸಿ, ಜರಾಸಂಧನನ್ನು ಓಡಿಸಿದ ತರುವಾಯ ಕಾಲಯವನನ ಅಪಾರ ಸಂಪತ್ತನ್ನು ತೆಗೆದುಕೊಂಡು ದ್ವಾರಕೆಗೆ ಬಂದು ಆ ನಗರವನ್ನು ಸುಂದರವಾಗಿ ರಚಿಸಿದ್ದಲ್ಲದೆ ಅದರ ಸಮೀಪದಲ್ಲಿ ಒಂದು ಭದ್ರವಾದ ಕೋಟೆಯನ್ನೂ, ಆ ಕೋಟೆಯ ನಡುವೆ ಒಂದು ಭವ್ಯವಾದ ಅರಮನೆಯನ್ನೂ, ಕುಲದೇವತೆಯಗೋಸ್ಕರ ಒಂದು ವಿಶಾಲವಾದ ದೇವಾಲಯವನ್ನೂ ಕಟ್ಟಿಸಿದನು. ಇದಲ್ಲದೆ ಯಾದವ ಸರದಾರರಿಗೋಸ್ಕರ ಅವನು ಆ ನಗರದಲ್ಲಿ ಬೇರೆ ಬೇರೆ ಸ್ಥಳಗಳನ್ನು ಗೊತ್ತುಮಾಡಿಕೊಟ್ಟದ್ದರಿಂದ ಅವರು ತಮ್ಮ ತಮ್ಮ ಸಲುವಾಗಿ ಸುಂದರವಾದ ಮಂದಿರಗಳನ್ನು ಕಟ್ಟಿಸಿಕೊಂಡರು. ಶ್ರೀಕೃಷ್ಣನು ತನ್ನ ಸಲುವಾಗಿ ಒಂದು ವಿಸ್ತೀರ್ಣವಾದ ಅಂತಃಪುರವನ್ನೂ ಅಗ್ನಿಶಾಲೆಯುಳ್ಳ ಒಂದು ಭವ್ಯವಾದ ಪ್ರಾಸಾದವನ್ನೂ ಕಟ್ಟಿಸಿದನು. ಬಲರಾಮ, ಸಾತ್ಯಕಿ, ಅಕ್ರೂರ ಮೊದಲಾದ ಅನೇಕ ಮಂದಿ ಸರದಾರರು ಸಹ ತಮ್ಮ ಸಲುವಾಗಿ ಭವ್ಯವಾದ ಮಂದಿರಗಳನ್ನು ಕಟ್ಟಿಸಿದರು. ಈ ಇಡೀ ನಗರದ ಮೇಲೆ ಸಮುದ್ರದ ಸ್ವಚ್ಛ ಮತ್ತು ಶೀತಲವಾದ ಗಾಳಿಯು ಬೀಸುತ್ತಿದ್ದುದರಿಂದ ಅದರಲ್ಲಿಯ ಯಾವ ಭಾಗದಲ್ಲಿಯೂ ಜನ ದಟ್ಟಣೆಯ ಮೂಲಕ ಅನಾರೋಗ್ಯತೆಯಾಗಲಿಕ್ಕೆ ಅವಕಾಶವಿದ್ದಿಲ್ಲ. ಈ ನಗರದ ಒಳಭಾಗದಲ್ಲಿಯೂ ಹೊರಭಾಗದಲ್ಲಿಯೂ ಸಾವಿರಾರು ಸ್ವಚ್ಛ ಮತ್ತು ರುಚಿಕರವಾದ ನೀರಿನ ಬಾವಿಗಳಿದ್ದುದರಿಂದ ಎಲ್ಲಿ ನೋಡಿದಲ್ಲಿ ಹೂ ಹಣ್ಣುಗಳ ಮತ್ತು ಪಲ್ಯೆ ಕಾಯಿಗಳ ತೋಟಗಳು ಕಂಗೊಳಿಸುತ್ತಿದ್ದವು. ಈ ನಗರದಲ್ಲಿ ದೊಡ್ಡ ದೊಡ್ಡ ಪೇಟೆಯ ಸ್ಥಳಗಳಿದ್ದುದರಿಂದ ದೂರ ದೂರ ದೇಶಗಳಿಂದ ಅನೇಕ ಮಂದಿ ವ್ಯಾಪಾರಸ್ಥರು ತಮ್ಮ ವ್ಯಾಪಾರದ ಸರಕುಗಳನ್ನು ಹೇರಳವಾಗಿ ತುಂಬಿಕೊಂಡು ಬರುತ್ತಿದ್ದರು. ಈ ಪ್ರಕಾರ ಸುಖಸಮಾಧಾನದಿಂದ ಸಮೃದ್ಧವಾಗಿದ್ದ ಈ ಸುಂದರವಾದ ದ್ವಾರಕಾ ನಗರದಲ್ಲಿ ಶ್ರೀಕೃಷ್ಣನು ತನ್ನ ಜ್ಞಾತಿ

ಬಾಂಧವರಾದ ಯಾದವರನ್ನು ಕೂಡಿಕೊಂಡು ಇರುತ್ತಿದ್ದುದರಿಂದ ಚಂದ್ರನು ಆಕಾಶಕ್ಕೆ ಶೋಭೆಯನ್ನುಂಟುಮಾಡುವಂತೆ ಶ್ರೀಕೃಷ್ಣನು ದ್ವಾರಕಾ ನಗರಕ್ಕೆ ಶೋಭೆಯನ್ನುಂಟುಮಾಡಿದ್ದನು. ಇಷ್ಟೇ ಅಲ್ಲ, ಈ ನಗರವು ಯಾವತ್ತು ತರದ ಜನರಿಗೆ ವಾಸಮಾಡಿಕೊಂಡು ಇರಲಿಕ್ಕೆ ಎಲ್ಲ ರೀತಿಯಿಂದ ಅನುಕೂಲವುಳ್ಳದ್ದಾಗಿತ್ತು. ಈ ನಗರದಲ್ಲಿ ಮಲೀನ ವಸ್ತ್ರವನ್ನು ಹಾಕಿದವನಾಗಲಿ, ತನಗೆ ಏನಾದರೂ ಭಿಕ್ಷೆ ಹಾಕಿರೆಂದು ಬೇಡಿಕೊಳ್ಳುವವನಾಗಲಿ ಎಲ್ಲಿಯೂ ಕಣ್ಣಿಗೆ ಬೀಳುತ್ತಿದ್ದಿಲ್ಲ. ಇಂಥ ಸುಖ ಸಂಪನ್ನ ನಗರದೊಳಗೆ ಶ್ರೀಕೃಷ್ಣನು ವಸುದೇವನಿಗೆ ರಾಜ್ಯಾಭಿಷೇಕ ಮಾಡಿಸಿ, ಅರಸನಿಗೆ ಆಲೋಚನೆ ಹೇಳುವದಕ್ಕೆ ಹತ್ತು ಮಂದಿ ಬುದ್ಧಿವಂತರಾದ ಯಾದವರ ಒಂದು ಮಂತ್ರಿಮಂಡಲವನ್ನು ಸ್ಥಾಪಿಸಿ, ಬಲರಾಮನನ್ನು ಯುವರಾಜನಾಗಿಯೂ, ವಿಪೃಥುವಿನನ್ನು ಮುಖ್ಯ ಮಂತ್ರಿಯಾಗಿಯೂ, ಅನಾಧೃಷ್ಟಿ ಮತ್ತು ಸಾತ್ಯಕಿ ಇವರಿಬ್ಬರನ್ನು ಸೇನಾಪತಿಗಳಾಗಿಯೂ ನೇಮಿಸಿ, ತನ್ನ ಕುಲಗುರುಗಳಾದ ಸಾಂದೀಪನಿಯನ್ನು ಉಜ್ಜಯನಿಯಿಂದ ಕರೆಯಿಸಿ ಅವನನ್ನು ರಾಜಪುರೋಹಿತನಾಗಿಯೂ ಮಾಡಿದನು. ಈ ಪ್ರಕಾರ ಶ್ರೀಕೃಷ್ಣನು ನಿಃಸ್ವಾರ್ಥ ಬುದ್ಧಿಯಿಂದ ಅವರವರಿಗೆ ಯಥಾಯೋಗ್ಯ ಅಧಿಕಾರಗಳನ್ನು ಕೊಟ್ಟು ಆ ರಾಜ್ಯದ ವ್ಯವಸ್ಥೆಯನ್ನು ಮಾಡಿದ ತರುವಾಯ ಅದು ತೀವ್ರವಾಗಿ ಊರ್ಜಿತವೂ ಬಲಿಷ್ಠವೂ ಆಯಿತು.

ಈ ಕಾಲಕ್ಕೆ ಶ್ರೀಕೃಷ್ಣನು ೨೫ ವರ್ಷದವನಾಗಿದ್ದು ಲಗ್ನಕ್ಕೆ ಪೂರ್ಣ ಯೋಗ್ಯನಾಗಿದ್ದನು. ಬಲರಾಮನ ಲಗ್ನವು ಈ ಮುಂಚಿತವಾಗಿ ಮಥುರೆಯಲ್ಲಿ ಆಗಿತ್ತು. ಆನರ್ತ (ಗುಜರಾಥ) ದೇಶದ ರೇವತ ರಾಜನ ಮಗಳಾದ ರೇವತಿಯು ಅವನ ಹೆಂಡತಿಯು. ಬಹುಶಃ ಇದೇ ಆಪ್ತತ್ವದ ಸಲುವಾಗಿ ಶ್ರೀಕೃಷ್ಣನು ಮತ್ತು ಯಾವತ್ತು ಯಾದವರು ಆನರ್ತ ದೇಶದ ಸಮೀಪದಲ್ಲಿ ಸಮುದ್ರದ ದಂಡೆಯ ಮೇಲೆ ತಮ್ಮ ನಗರವನ್ನು ಸ್ಥಾಪಿಸಿದರೆಂದು ಕಾಣುತ್ತದೆ. ಇರಲಿ. ಇತ್ತ ಶ್ರೀಕೃಷ್ಣನ ಸೌಂದರ್ಯ, ಪರಾಕ್ರಮ, ಬುದ್ಧಿ, ಸೌಜನ್ಯ ಮೊದಲಾದ ಸದ್ಗುಣಗಳಿಗೆ ಅನುರೂಪಳಾದ ಪತ್ನಿಯು ಹೇಗೆ ದೊರಕುವಳೋ ಎಂದು ಎಲ್ಲರು ವಿಚಾರದಲ್ಲಿ ತೊಡಗಿದ್ದರು. ಅವನ ಪತ್ನಿಯಾಗಲಿಕ್ಕೆ ಯಾವತ್ತು ರೀತಿಯಿಂದ ಯೋಗ್ಯವಾದವಳು ರುಕ್ಮಿಣಿಯೊಬ್ಬಳು ಇದ್ದಳು.

ರುಕ್ಮಿಣಿಯು ಮನಸ್ಸು ಶ್ರೀಕೃಷ್ಣನಲ್ಲಿಯೂ, ಶ್ರೀಕೃಷ್ಣನ ಮನಸ್ಸು ರುಕ್ಮಿಣಿಯಲ್ಲಿಯೂ ಆಸಕ್ತವಾಗಿತ್ತು. ಆದರೆ ರುಕ್ಮಿಣಿಯ ತಂದೆಯಾದ ಭೀಷ್ಮಕನೂ, ರುಕ್ಮಿಣಿಯ ಅಣ್ಣನಾದ ರುಕ್ಮಿಯೂ ಜರಾಸಂಧನ ಪಕ್ಷದವರು ಇದ್ದು ಅವರು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಬೇಕೆಂದು ನಿಶ್ಚಯ ಮಾಡಿ ಅವಳ ಮದುವೆಯ ಸಿದ್ಧತೆಯನ್ನು ನಡೆಸಿದ್ದರು. ಅವಳ ಸ್ವಯಂವರವು ಹೇಗೆ ನಿಂತು ಹೋಯಿತೆಂಬುದನ್ನು ಹಿಂದೆ 'ಮಥುರಾಪರ್ವ' ದಲ್ಲಿ ಹೇಳಿದ್ದೇವೆ. ಆದುದರಿಂದ ಶ್ರೀಕೃಷ್ಣನಿಗೆ ರುಕ್ಮಿಣಿಯು ಹೇಗೆ ದೊರೆಯುವಳೆಂಬ ಬಗ್ಗೆ ಎಲ್ಲರಿಗೂ ಹೆಚ್ಚು ಚಿಂತೆಯಾಯಿತು. ಹೀಗಿರುವಾಗ ಜರಾಸಂಧನ ಆಗ್ರಹದ ಮೂಲಕವಾಗಿ ಶಿಶುಪಾಲನಿಗೆ ರುಕ್ಮಿಣಿಯನ್ನು ಮದುವೆ ಮಾಡಿಕೊಡುವ ಕುರಿತು ಲಗ್ನತಿಥಿಯು ಸಹ ನಿಶ್ಚಯವಾಗಿರುತ್ತದೆಂತಲೂ, ಲಗ್ನ ಸಮಾರಂಭಕ್ಕಾಗಿ ಜರಾಸಂಧ ಮೊದಲಾದ ರಾಜರು ಕುಂಡಿನೀಪುರಕ್ಕೆ ಬರಲಿಕ್ಕೆ ಹತ್ತಿರುತ್ತಾರೆಂತಲೂ ಶ್ರೀಕೃಷ್ಣನಿಗೆ ವರ್ತಮಾನವು ಗೊತ್ತಾಯಿತು. ದಮಘೋಷನ ಕಡೆಯಿಂದ ಯಾದವರಿಗೆ ಲಗ್ನಪತ್ರವು ಸಹ ಬಂದು ಮುಟ್ಟಿತು. ಈ ಬಗ್ಗೆ ಮುಂದೆ ಏನು ಮಾಡಬೇಕೆಂದು ಶ್ರೀಕೃಷ್ಣನು ವಿಚಾರಮಗ್ನನಾದನು. ರುಕ್ಮಿಣಿಯ ಸ್ವಯಂವರವು ನಿಂತು ಹೋದ ದಿವಸದಿಂದ ಅವನ ಮನಸ್ಸು ರುಕ್ಮಿಣಿಯ ಮೇಲೆ ಪೂರ್ಣವಾಗಿ ಕುಳಿತಿತ್ತು. ರುಕ್ಮಿಣಿಯಂತೂ ವಿಮಲಚರಿತನೂ ಕಮಲನಯನನೂ ಆದ ಶ್ರೀಕೃಷ್ಣನ ಹೊರತಾಗಿ ಎರಡನೆಯವನನ್ನು ತಾನು ಮದುವೆಮಾಡಿಕೊಳ್ಳುವದಿಲ್ಲೆಂದು ತನ್ನ ಮಾತಾಪಿತೃಗಳಿಗೆ ಖಂಡಿತವಾಗಿ ತಿಳುಹಿಸಿದಳು. ಆದರೂ ಅವಳ ಅಣ್ಣನಾದ ರುಕ್ಮಿಯ ದುರಾಗ್ರಹದ ಮೂಲಕ ಅವಳ ಮಾತು ಏನೂ ನಡೆಯಲಿಲ್ಲ. ಲಗ್ನದ ದಿವಸವು ಸಮೀಪಕ್ಕೆ ಬಂದ ಹಾಗೆ ರುಕ್ಮಿಣಿಯು ಬಹಳ ಕಸವಿಸಿಪಡಹತ್ತಿದಳು. ಹಾಗೂ ತನ್ನನ್ನು ಶ್ರೀಕೃಷ್ಣನ ಹೊರತಾಗಿ ಎರಡನೆಯವರಿಗೆ ಮದುವೆ ಮಾಡಿಕೊಟ್ಟರೆ ತಾನು ಜೀವವನ್ನು ಇಡುವದಿಲ್ಲವೆಂದು ಸಹ ತನ್ನ ತಾಯಿಗೆ ಸ್ಪಷ್ಟವಾಗಿ ತಿಳುಹಿಸಿದಳು. ರುಕ್ಮಿಣಿಯ ತಾಯಿಯು ರುಕ್ಮಿಣಿಯ ಈ ಅಂಬೋಣವನ್ನು ತನ್ನ ಮಗನ ಮುಂದೆ ತಿಳಿಸಲಾಗಿ ಅವನು ಮೂರ್ಖತನದಿಂದ ಅವಳಿಗೆ—"ಜೀವವು ಹೋಗುವದಕ್ಕೆ ಹಾದಿಯ ಮೇಲೆ ಬಿದ್ದಿರುತ್ತದೇನು?" ಎಂದು ಉತ್ತರ ಕೊಟ್ಟನು. ಈ ರೀತಿಯಿಂದ ರುಕ್ಮಿಣಿಯು ನಿರುಪಾಯಳಾಗಿ ಶ್ರೀಕೃಷ್ಣನಿಗೆ ಒಂದು ಪ್ರೇಮಪತ್ರ

ವನ್ನು ಬರೆದು ಅದನ್ನು ಒಬ್ಬ ಬ್ರಾಹ್ಮಣನ ಕಡೆಯಿಂದ ಕಳುಹಿಸಿದಳು. ಆ ಪತ್ರದಲ್ಲಿ ಅವಳು ಬರೆದದ್ದೇನಂದರೆ:—“ಎಲೈ ಭುವನಸುಂದರಾ, ಅಚ್ಯುತಾ! ನಿನ್ನ ಅದ್ವಿತೀಯ ಗುಣಗಳ ಮತ್ತು ರೂಪದ ವರ್ಣನೆಯನ್ನು ಕೇಳಿದಾಗಿನಿಂದ ನನ್ನ ಮನಸ್ಸು ನಿನ್ನ ಚರಣಾರವಿಂದದಲ್ಲಿ ಆಸಕ್ತವಾಗಿರುವದು. ಪ್ರಭೋ! ನಾನು ಮನಸ್ಸಿನಿಂದ ನಿನ್ನನ್ನು ಪತಿಯಾಗಿ ವರಿಸಿ ನಿನಗೆ ನನ್ನ ಆತ್ಮವನ್ನು ಅರ್ಪಣ ಮಾಡಿದ್ದೇನೆ. ಈ ಸಮಯದಲ್ಲಿ ನೀನು ಯೋಗ್ಯವಾದ್ದನ್ನು ಮಾಡಲಿಕ್ಕೆ ತಡಮಾಡಬೇಡ. ಸಿಂಹದ ಭಾಗವನ್ನು ನರಿಯು ತೆಗೆದುಕೊಂಡು ಹೋಗುವಂತೆ ದುಷ್ಟ ಶಿಶುಪಾಲನು ನನ್ನನ್ನು ತೆಗೆದುಕೊಂಡು ಹೋದಾನು. ನಾನು ದೇವರನ್ನೂ, ಋಷಿಗಳನ್ನೂ, ಗುರುಗಳನ್ನೂ, ಪರಮೇಶ್ವರನನ್ನೂ ಮನೋಭಾವದಿಂದ ಪೂಜಿಸುವದು ನಿಜವಿದ್ದ ಪಕ್ಷದಲ್ಲಿ ನೀನು ಈ ಸಮಯದಲ್ಲಿ ನನ್ನ ಉಪೇಕ್ಷೆಯನ್ನು ಮಾಡಲಾರೆ. ನನ್ನ ಅಣ್ಣನನ್ನು ಕೊಂದ ಹೊರತಾಗಿ ನನ್ನನ್ನು ತೆಗೆದುಕೊಂಡು ಹೋಗಲಿಕ್ಕೆ ನಿನಗೆ ಒಂದು ವೇಳೆ ಸಂಶಯ ಬಂದರೆ ನಾನು ಒಂದು ಹಂಚಿಕೆಯನ್ನು ಹೇಳುತ್ತೇನೆ, ಕೇಳು. ಲಗ್ನದ ಮುಂಚಿನ ದಿವಸ ವಧುವನ್ನು ಗಿರಿಜೆಯ ದರ್ಶನಕ್ಕೆ ಒಯ್ಯುವ ಸಾಂಪ್ರದಾಯವು ನಮ್ಮಲ್ಲಿರುವದು. ಆ ಪ್ರಕಾರ ನಾನು ಅಲ್ಲಿಗೆ ಹೋದಾಗ ನೀನು ಬಂದು ನನ್ನನ್ನು ತೆಗೆದುಕೊಂಡು ಹೋಗು. ಎಲೈ ಅಂಬುಜಾಕ್ಷಾ, ಶ್ರೀಕೃಷ್ಣಾ! ನೀನು ನನ್ನ ಮೇಲೆ ಕೃಪೆಯನ್ನು ಮಾಡದಿದ್ದರೆ ನಾನು ಜನ್ಮ ಜನ್ಮಾಂತರಗಳಲ್ಲಿ ನಿನ್ನ ಬಗ್ಗೆ ಕಠಿಣ ವ್ರತಗಳನ್ನು ಮಾಡಿ ನನ್ನ ಜೀವವನ್ನು ಸವಿಸಿ ನಿನ್ನ ಕೃಪೆಯನ್ನು ಸಂಪಾದಿಸುವೆನು.” ಈ ಪ್ರಕಾರ ರುಕ್ಮಿಣಿಯು ಬರೆದ ಪತ್ರವನ್ನು ಬ್ರಾಹ್ಮಣನು ಶ್ರೀಕೃಷ್ಣನಿಗೆ ಒಯ್ದು ಮುಟ್ಟಿಸಲಾಗಿ ಅವನು ಅದನ್ನು ಓದಿಕೊಂಡು, ತನ್ನ ರಥವನ್ನು ಸಿದ್ಧಪಡಿಸಿ, ಆ ರಥದಲ್ಲಿ ಆ ಬ್ರಾಹ್ಮಣನನ್ನು ಕುಳ್ಳಿರಿಸಿಕೊಂಡು, ವಾಯುವೇಗದಿಂದ ಕುದುರೆಯನ್ನು ನಡೆಸುತ್ತ ಕುಂಡಿನೀಪುರಕ್ಕೆ ಬಂದು ಮುಟ್ಟಿದನು. ಶ್ರೀಕೃಷ್ಣನು ಕುಂಡಿನೀಪುರಕ್ಕೆ ಹೊರಟು ಹೋದ ವರ್ತಮಾನವನ್ನು ಬಲರಾಮನು ಕೇಳಿ ಶ್ರೀಕೃಷ್ಣನ ಮೇಲೆ ದುರ್ಧರವಾದ ಯುದ್ಧದ ಪ್ರಸಂಗವು ಬಂದೀತೆಂದು ಅವನ ಹಿಂದಿನಿಂದ ಯಾದವ ಸೈನ್ಯವನ್ನು ತೆಗೆದುಕೊಂಡು ಹೊರಟು ಹೋದನು.

ಇತ್ತಲಾ ಕುಂಡಿನೀಪುರದಲ್ಲಿ ಲಗ್ನದ ಯಾವತ್ತು ಸಿದ್ಧತೆಯು ಮುಗಿದು ವಧುಪಕ್ಷದ ಕಡೆಯಿಂದ ಲಗ್ನದಕಿಂತ ಮುಂಚೆ ಜರುಗತಕ್ಕ ಸಂಸ್ಕಾರಗಳೂ, ಸಮಾರಂಭಗಳೂ ಜರುಗಿದವು. ಶಿಶುಪಾಲನಕಡೆಯು ವರಪಕ್ಷದ ಜನರು ಬಂದು, ಅವರ ಸೀಮಂತ ಪೂಜನದ ಕೆಲಸವು ಸಹ ವಿಜೃಂಭಣೆಯಿಂದ ಮುಗಿದ ನಂತರ ಅವರನ್ನು ಒಂದು ಬೇರೆ ಬಿಡಾರದಲ್ಲಿ ಇಳಿಸಿದರು. ಯಾವತ್ತು ನಗರವು ತಳಿರು ತೋರಣಗಳಿಂದಲೂ, ಧ್ವಜಪತಾಕೆಗಳಿಂದಲೂ ಶೃಂಗರಿಸಲ್ಪಟ್ಟು ಎಲ್ಲಿ ನೋಡಿದಲ್ಲಿ ತಾಸೆ, ಬಜಂತ್ರಿ, ಚೌಘಡ ಮುಂತಾದ ಮಂಗಲಕಾರಕ ವಾದ್ಯ ಗಳು ದುಮದುಮಿಸಿದವು. ಶ್ರೀಕೃಷ್ಣನು ಮುಂಚಿನಂತೆ ಬಂದು ಗೊಂದ ಲವನ್ನು ಎಬ್ಬಿಸಬಾರದೆಂದು ಶಿಶುಪಾಲನ ಮಿತ್ರರಾಜರಾದ ಶಾಲ್ವ, ಜರಾ ಸಂಧ, ದಂಡವಕ್ರ, ಪೌಂಡ್ರ ಮೊದಲಾದವರು ತಮ್ಮ ತಮ್ಮ ಸೈನ್ಯವನ್ನು ತೆಗೆ ದುಕೊಂಡು ಬಂದರು. ಅವರನ್ನು ಭೀಷ್ಮಕನು ಉತ್ತಮ ರೀತಿಯಿಂದ ಸ್ವಾಗತ ಮಾಡಿ ಬೇರೆ ಬೇರೆ ಪ್ರಾಸಾದಗಳಲ್ಲಿ ಇಳಿಸಿದನು. ಶಿಶುಪಾಲನಕಡೆಯು ಹಂದರದಲ್ಲಿ ದಮಘೋಷನು ವರಪಕ್ಷದ ಸಮಾರಂಭವನ್ನು ಮಾಡಿದನು. ಈ ಪ್ರಕಾರ ಯಾವತ್ತು ಜನರು ಲಗ್ನದ ಅನೇಕ ಕೆಲಸಗಳ ಅವಸರದಲ್ಲಿ ತೊಡಗಿ ರುವಾಗ ಯಾವಳ ಸುಖದ ಸಲುವಾಗಿ ಇಷ್ಟೆಲ್ಲ ಸಮಾರಂಭವು ನಡೆದಿತ್ತೋ ಆ ಮದುಮಗಳ ಮನಸ್ಸಿನ ಸ್ಥಿತಿಯು ಏನಾಗಿರುವದೆಂಬದರ ಕಡೆಗೆ ಯಾರ ಲಕ್ಷ್ಯವೂ ಇದ್ದಿಲ್ಲ. ತಾನು ಕಳೆಸಿದ ಬ್ರಾಹ್ಮಣನು ಇನ್ನೂ ಬರಲಿಲ್ಲವೆಂದು ರುಕ್ಮಿಣಿಯು ನಾನಾಪ್ರಕಾರದ ತರ್ಕಗಳನ್ನು ಮಾಡುತ್ತ ದುಃಖಸಮುದ್ರದಲ್ಲಿ ಮುಳುಗಿ—“ತಾಯಿಾ ಜಗನ್ಮಾತೇ! ನೀನೇ ನನ್ನ ಮೇಲೆ ಕರುಣೆಯನ್ನಿಟ್ಟು ನನ್ನ ಮೇಲೆ ಬಂದಿರುವ ಸಂಕಟವನ್ನು ನಿವಾರಣ ಮಾಡು” ಎಂದು ಕಣ್ಣು ಮುಚ್ಚಿ ಬೇಡಿಕೊಂಡಳು. ಈ ಪ್ರಕಾರ ಅವಳು ಕಣ್ಣುಮುಚ್ಚಿ ದೇವಿಯನ್ನು ಬೇಡಿಕೊಂಡು ತನ್ನ ಕಣ್ಣು ತೆರೆಯುವಷ್ಟರಲ್ಲಿ ತಾನು ಕಳುಹಿಸಿದ ಬ್ರಾಹ್ಮಣನು ಅವಳ ಮುಂದೆ ಬಂದು ನಿಂತನು. ಆಗ ಅವಳು ಆ ಬ್ರಾಹ್ಮಣನ ಪ್ರಸನ್ನ ಮು ದ್ರೆಯನ್ನು ನೋಡಿ ಅವನು ತನ್ನ ಕೆಲಸವನ್ನು ಸರಿಯಾಗಿಮಾಡಿಕೊಂಡು ಬಂದಿ ರುತ್ತಾನೆಂದು ನಿಶ್ಚಯದಿಂದ ತಿಳಿದುಕೊಂಡು ಹರ್ಷಪಟ್ಟು, ಅವನಿಗೆ ಏನು ಪ್ರತಿ ಫಲವನ್ನು ಕೊಡಬೇಕೆಂಬುದನ್ನು ತಿಳಿಯದೆ, ಅವನಿಗೆ ಅಂತಃಕರಣಪೂರ್ವ

ಕವಾಗಿ ನಮಸ್ಕಾರವನ್ನು ಮಾಡಿದಳು. ಆಗ ಅವನು—“ಅಕ್ಕಾ, ಏಳಿರಿ. ಚಿಂತೆ ಮಾಡಬೇಡಿರಿ. ನಾನು ಶ್ರೀಕೃಷ್ಣನನ್ನು ಕರಕೊಂಡು ಬಂದಿರುತ್ತೇನೆ. ನೀವು ನಿರ್ಭಯದಿಂದ ನಿಮ್ಮ ಕೆಲಸವನ್ನು ಸಾಗಿಸಿರಿ” ಎಂದು ಹೇಳಿದನು. ಈ ಅವನ ಉತ್ಸಾಹಜನಕ ಶಬ್ದಗಳನ್ನು ಕೇಳಿ ರುಕ್ಮಿಣಿಯು ಎದ್ದು ಆ ಬ್ರಾಹ್ಮಣನಿಗೆ—“ದ್ವಿಜೋತ್ತಮನೇ, ನಾನು ನಿನ್ನ ಉಪಕಾರವನ್ನು ಜನ್ಮ ಜನ್ಮಾಂತರಗಳಲ್ಲಿ ಮರೆಯಲಾರೆನು. ನೀನು ಮಾಡಿಕೊಂಡು ಬಂದ ಈ ಅಮೌಲ್ಯ ಸೇವೆಯ ಸಲುವಾಗಿ ನಿನಗೆ ಏನು ಕೊಡಬೇಕೆಂಬುದು ನನಗೆ ತಿಳಿಯದೆ ಹೋದ ಮೂಲಕ ನಾನು ನಿನಗೆ ಜನ್ಮ ಜನ್ಮಾಂತರಗಳಲ್ಲಿ ನಮಸ್ಕಾರ ಮಾಡುವೆನು” ಎಂದು ನುಡಿದಳು. ಆಮೇಲೆ ಕೆಲವು ಹೊತ್ತಿನ ತರುವಾಯ ಕುಲಸಾಂಪ್ರದಾಯಕ್ಕನುಸರಿಸಿ ವಧುವನ್ನು ದೇವಿಯ ದರ್ಶನಕ್ಕೆ ಒಯ್ಯುವದಕ್ಕಾಗಿ ಮುತ್ತೈದಿಯರು ಬಂದು ಅವಳಿಗೆ ಎರೆದು, ಅವಳನ್ನು ಉತ್ತಮ ವಸ್ತ್ರಾಲಂಕಾರಗಳಿಂದ ಭೂಷಿಸಿ, ಊದಿಸುತ್ತ, ಬಾರಿಸುತ್ತ, ಮಂಗಲಗೀತೆಗಳನ್ನು ಹಾಡುತ್ತ, ದೇವಿಯ ದರ್ಶನಕ್ಕೆ ಕರಕೊಂಡು ಹೋದರು. ಅವರೆಲ್ಲರು ದೇವಿಯ ಗುಡಿಗೆ ಹೋಗಿ ಮುಟ್ಟಿದ ಬಳಿಕ ರುಕ್ಮಿಣಿಯು ತನ್ನ ಕೈಕಾಲುಗಳನ್ನು ತೊಳಕೊಂಡು, ಗುಡಿಯೊಳಗೆ ಹೋಗಿ, ದೇವಿಯನ್ನು ಯಥಾಸಾಂಗವಾಗಿ ಪೂಜಿಸಿ ಅವಳಿಗೆ-“ಮಾತೇ, ಭವಾನೀ, ಇಂದ್ರಾಯಣೀ! ನನಗೆ ಇಚ್ಛಿತ ಪತಿಯನ್ನು ಕೊಡು” ಎಂದು ಎರಡೂ ಕೈಜೋಡಿಸಿ ಪ್ರಾರ್ಥಿಸಿದಳು. ಆಗ ಪೂಜಾರಿಯು—“ತಥಾಸ್ತು” ಎನ್ನಲಾಗಿ ಸ್ತ್ರೀಯರು ಅರಿಷಿಣ, ಕುಂಕುಮ, ವಸ್ತ್ರ, ತೆಂಗಿನಕಾಯಿಗಳನ್ನು ಹಂಚಿದರು. ಆ ಮೇಲೆ ರುಕ್ಮಿಣಿಯು ಎಲ್ಲರ ಆಶೀರ್ವಾದಗಳನ್ನು ತೆಗೆದುಕೊಂಡು, ಮನಸ್ಸಿನಲ್ಲಿ ಥರಥರ ಅಂಜಿ ನಡಗುತ್ತ, ಗುಡಿಯ ಹೊರಗೆ ಬಂದು ಅದರ ಪಾವಟಿಗೆಗಳ ಬಳಿಯಲ್ಲಿ ನಿಂತುಕೊಳ್ಳಲಾಗಿ ಮೇಘದಂತೆ ಗಡಗಡ ಸಪ್ಪಳ ಮಾಡುವ ರಥವು ಅಲ್ಲಿಗೆ ತ್ವರೆಯಿಂದ ಬಂದಿತು. ಅದು ಯಾರ ಕಡೆಯಿಂದ ಯಾವ ಪ್ರಕಾರ ಬಂದಿತು ಎಂಬುದನ್ನು ವಿಚಾರ ಮಾಡಿ ನೋಡಲಿಕ್ಕೆ ಯಾರಿಗೂ ಅವಕಾಶವಿರಲಿಲ್ಲ. ಅದರಲ್ಲಿ ಲಕ್ಷ ಚಂದ್ರರ ಕಾಂತಿಯಿಂದ ಒಪ್ಪುವಂಥ ಶ್ರೀಕೃಷ್ಣನನ್ನು ನೋಡಿ ರುಕ್ಮಿಣಿಯು ಪರವಶಳಾಗಿ, ಮಧುರ ಹಾಸ್ಯವನ್ನು ಮಾಡುತ್ತ, ತನ್ನ ಮೋರೆಯನ್ನು ಕೆಳಗೆ

ಬಾಗಿಸಿದಳು. ಅವಳ ಆ ರಮ್ಯ ಅವಸ್ಥೆಯನ್ನು ನೋಡಿ ಶ್ರೀಕೃಷ್ಣನು ಆನಂದಾತಿಶಯದಿಂದ ಅವಳಿಗೆ ತನ್ನ ಕೈಕೊಟ್ಟು ಅವಳನ್ನು ಒಮ್ಮಿಲೆ ರಥದಲ್ಲಿ ಜಗ್ಗಿಕೊಂಡು ಕುಳ್ಳಿರಿಸಿದನು. "ಇದೇನು ಆಶ್ಚರ್ಯ! ಇದೇನು ಆಶ್ಚರ್ಯ!" ಎಂದು ಜನರು ಕೂಗಾಡಲಿಕ್ಕೆ ಹತ್ತಿದರು. ಇಷ್ಟರಲ್ಲಿ ಆ ರಥವು ಒತ್ತರದಿಂದ ಮುಂದಕ್ಕೆ ಸಾಗಿತು. ಆದುದರಿಂದ ಅದು ಬೇಗನೆ ಕಣ್ಣಿಗೆ ಕಾಣಿಸದಂತಾಯಿತು. ಈ ವರ್ತಮಾನವು ಶಿಶುಪಾಲನಿಗೆ ತಿಳಿಯಲಾಗಿ ಅವನು ನಾಚಿಕೆಯಿಂದ ತನ್ನ ಮೋರೆಯನ್ನು ಒಣಗಿಸಿಕೊಂಡು ಕುಳಿತನು. ಜರಾಸಂಧನೂ ರುಕ್ಮಿಯೂ ಕ್ರೋಧದಿಂದ ಸಂತಪ್ತರಾದರು.

ಈ ಪ್ರಕಾರ ಸಿಂಹವು ನರಿಗಳ ಹಿಂಡಿನಿಂದ ತನ್ನ ಭಾಗವನ್ನು ಎತ್ತಿಕೊಂಡು ಹೋದ ಬಳಿಕ ಅದರ ಹಿಂದಿನಿಂದ ನರಿಗಳು ಕುಂಯಿ ಕುಂಯಿ ಎಂದು ಕೂಗುತ್ತ ಬೆನ್ನು ಹತ್ತುವಂತೆ ಅಥವಾ ಗರುಡವು ಕಾಗೆಗಳ ಹಿಂಡಿನಿಂದ ತನ್ನ ಭಾಗವನ್ನು ತೆಗೆದುಕೊಂಡು ಹೋದ ಬಳಿಕ ಕಾಗೆಗಳು ಕವ್ವ ಕವ್ವ ಎಂದು ಬೆನ್ನು ಹತ್ತುವಂತೆ ಜರಾಸಂಧ ಶಾಲ್ವ ಮೊದಲಾದ ಅರಸರು ಶ್ರೀಕೃಷ್ಣನನ್ನು ಹಿಡಿಯುವದಕ್ಕಾಗಿ ಅವನ ಬೆನ್ನು ಹತ್ತಿದರು. ಅವರನ್ನು ದಾರಿಯಲ್ಲಿ ಬಲರಾಮ, ಅನಾಧೃಷ್ಟಿ, ಕಂಕ ಮೊದಲಾದ ಯಾದವ ವೀರರು ಪ್ರತಿಬಂಧಿಸಲಾಗಿ ಅವರವರೊಳಗೆ ಯುದ್ಧವೆಸಗಿತು. ರುಕ್ಮಿಯು ಅತಿಶಯ ಸಂತಾಪದಿಂದ—"ನಾನು ಶ್ರೀಕೃಷ್ಣನನ್ನು ಕೊಂದು ರುಕ್ಮಿಣಿಯನ್ನು ತಿರುಗಿ ತಾರದೆ ಕುಂಡಿನೀಪುರಕ್ಕೆ ಮೋರೆಯನ್ನು ತೋರಿಸಲಿಕ್ಕಿಲ್ಲ" ಎಂದು ಪ್ರತಿಜ್ಞೆಯನ್ನು ಮಾಡಿ ಅತಿ ವೇಗದಿಂದ ತನ್ನ ರಥವನ್ನು ನಡೆಸುತ್ತ, ಬಲರಾಮನ ಸೈನ್ಯದ ಕೂಡ ಜರಾಸಂಧಾದಿಗಳು ಯುದ್ಧವನ್ನು ಮಾಡುವಲ್ಲಿ ತೊಡಗಿರುವಾಗ ಅವರನ್ನು ಒಂದು ಮಗ್ಗಲಿಗೆ ಸರಿಸಿ, ದ್ವಾರಕೆಯ ದಾರಿಯಿಂದ ಹೋದನು. ಆ ಮೇಲೆ ಶ್ರೀಕೃಷ್ಣನ ರಥವು ಅವನಿಗೆ ನರ್ಮದಾ ನದಿಯ ಮೇಲೆ ಕಣ್ಣಿಗೆ ಬಿದ್ದಿತು. ಆಗ ಅವನು ಶ್ರೀಕೃಷ್ಣನಿಗೆ—"ನಿಲ್ಲು ಕಳ್ಳಾ, ನಿಲ್ಲು" ಎಂದು ಕೂಗಿ ಅವನನ್ನು ಯುದ್ಧಕ್ಕೆ ಆವ್ಹಾನ ಮಾಡಿದನು. ಇದನ್ನು ಕೇಳಿ ಶ್ರೀಕೃಷ್ಣನು ತನ್ನ ರಥವನ್ನು ನಿಲ್ಲಿಸಿ ರುಕ್ಮಿಯ ಕೂಡ ಯುದ್ಧ ಮಾಡಲಿಕ್ಕೆ ಅವನ ಎದುರಾಗಿ ನಿಂತನು. ಆಗ ರುಕ್ಮಿಯು—"ಈ ಯುದ್ಧದಲ್ಲಿ ನನ್ನ ಪತಿಯಾದರೂ ಮಡಿಯು

ವನು; ಇಲ್ಲವೆ ನನ್ನ ಅಣ್ಣನಾದರೂ ಮಡಿಯುವನು ” ಎಂದು ವ್ಯಸನ ಮಾಡಿ ದಳು. ಇದನ್ನು ಕಂಡು ಶ್ರೀಕೃಷ್ಣನು ಯುದ್ಧದಲ್ಲಿ ತೊಡಗಿದ ಗಂಡನಾಗಲಿ, ಸಹೋದರನಾಗಲಿ ಸತ್ತರೆ ಕ್ಷತ್ರಿಯ ಸ್ತ್ರೀಯರು ಎಂದಿಗೂ ಶೋಕ ಮಾಡತಕ್ಕದ್ದಲ್ಲವೆಂದು ರುಕ್ಮಿಣಿಗೆ ಹೇಳಲಾಗಿ ರುಕ್ಮಿಣಿಯು ಬಹಳ ಅಳಲಿಕ್ಕೆ ಹತ್ತಿ, ಶ್ರೀಕೃಷ್ಣನಿಗೆ-“ ಪ್ರಭೋ, ಇಬ್ಬರೂ ಸುರಕ್ಷಿತವಿರುವಂತೆ ಮಾಡುವದು ನಿಮಗೆ ಏನೂ ಹೆಚ್ಚಿನ ಕೆಲಸವಲ್ಲ” ಎಂದು ಕೈಮುಗಿದು ಬೇಡಿಕೊಂಡಳು. ಅದಕ್ಕೆ ಶ್ರೀಕೃಷ್ಣನು—“ ಒಳ್ಳೇದು. ಹಾಗೇ ಆಗಲಿ. ನೀವು ಸ್ತ್ರೀಯರು ನಿಮ್ಮದೇ ಮಾತು ನಡೆಸುತ್ತೀರಿ !” ಎಂದು ನುಡಿದು ಅವಳನ್ನು ರಥದ ಹಿಂಭಾಗದಲ್ಲಿ ಕುಳ್ಳಿರಿಸಿ ರುಕ್ಮಿಯ ಸಂಗಡ ಯುದ್ಧ ಮಾಡಿದನು. ರುಕ್ಮಿಯಾದರೂ ಧರ್ಮಯುದ್ಧ ಮಾಡುವ ನಿಶ್ಚಯದಿಂದ ಅವನ ಮೇಲೆ ಮೊದಲಿಗೆ ಎಚ್ಚರಿಕೆಯಿಂದ ಬಾಣ ಪ್ರಹಾರ ಮಾಡಿದನು. ಆದರೆ ಅದರಿಂದ ಏನೂ ಉಪಯೋಗವಾಗಲಿಲ್ಲವೆಂದು ನೋಡಿ ತನಗೆ ಪರಶುರಾಮನು ಕೊಟ್ಟ ಅನೇಕ ಅಸ್ತ್ರಗಳನ್ನು ಶ್ರೀಕೃಷ್ಣನ ಮೇಲೆ ನಡೆಸಿದನು. ಶ್ರೀಕೃಷ್ಣನು ಆ ಎಲ್ಲ ಅಸ್ತ್ರಗಳಿಗೆ ಪ್ರತಿಯಾದ ಅಸ್ತ್ರಗಳನ್ನು ಉಪಯೋಗಿಸಿ ಅವುಗಳನ್ನು ಪ್ರತೀಕಾರ ಮಾಡಿದನು. ಇಷ್ಟೇ ಅಲ್ಲದೆ, ರುಕ್ಮಿಯ ಕುದುರೆಯನ್ನೂ, ಸಾರಥಿಯನ್ನೂ ಕೊಂದು ಅವನ ಧ್ವಜವನ್ನು ಸಹ ಸಂಹಾರ ಮಾಡಿದನು. ಆ ಮೇಲೆ ರುಕ್ಮಿಯು ತನ್ನ ಕೈಯಲ್ಲಿ ಕತ್ತಿ ಢಾಲುಗಳನ್ನು ತೆಗೆದುಕೊಂಡು ರಥದಿಂದ ಕೆಳಗೆ ಜಿಗಿದು ಶ್ರೀಕೃಷ್ಣನ ಮೇಲೆ ಸಾಗಿ ಹೋದನು. ಇಷ್ಟರಲ್ಲಿ ಶ್ರೀಕೃಷ್ಣನು ರುಕ್ಮಿಣಿಯ ಬಂಧುಪ್ರೇಮದ ಸಲುವಾಗಿ ಸ್ವಲ್ಪ ಅನುಮಾನಮಾಡಿ ಕೈ ನಡುಗಿಸುತ್ತ ತನ್ನ ಕೊನೆಯ ಬಾಣವನ್ನು ಬಿಡಲಾಗಿ ಅದರ ಪೆಟ್ಟಿನಿಂದ ರುಕ್ಮಿಯು ಸ್ವಲ್ಪ ಗಾಯಪಟ್ಟು ಮೂರ್ಛೆ ಹೊಂದಿ ಭೂಮಿಯ ಮೇಲೆ ಬಿದ್ದನು. ಆಗ ಶ್ರೀಕೃಷ್ಣನು ತನ್ನ ರಥದ ಕೆಳಗೆ ಇಳಿದು ತನ್ನ ಉತ್ತರೀಯದಿಂದ ಅವನ ಗಾಯದ ಕೈಯನ್ನು ಕಟ್ಟಿ, ತಾನು ಹಿಂದುಗಡೆ ರಥದಲ್ಲಿ ಕುಳಿತು ದ್ವಾರಕೆಗೆ ಪ್ರಯಾಣ ಮಾಡಿದನು. ರುಕ್ಮಿಯ ಅನುಯಾಯಿಗಳು ರುಕ್ಮಿಯು ಬಿದ್ದ ಸ್ಥಳಕ್ಕೆ ಬಂದು ಅವನನ್ನು ಎರಡನೆ ರಥದೊಳಗೆ ಹಾಕಿಕೊಂಡು ಕುಂಡಿನೀಪುರಕ್ಕೆ ಹೋಗುತ್ತಿರುವಾಗ ರುಕ್ಮಿಯು ದಾರಿಯಲ್ಲಿ ಎಚ್ಚರಿಕೆಯ ಮೇಲೆ ಬಂದು ಅಲ್ಲಿಯೇ ಇಳಿದುಕೊಂಡು ಬಿಟ್ಟನು. ಮುಂದೆ ಅವನು

ತನ್ನ ಪ್ರತಿಜ್ಞೆಯನ್ನು ಸತ್ಯ ಮಾಡುವದಕ್ಕಾಗಿ ಅಲ್ಲಿ ಭೋಜಕಟವೆಂಬ ನಗರವನ್ನು ಸ್ಥಾಪನ ಮಾಡಿ ಆಮರಣ ಅಲ್ಲಿಯೇ ಇದ್ದುಕೊಂಡನು. ಇತ್ತ ಶ್ರೀಕೃಷ್ಣನು ರುಕ್ಮಿಣಿಯನ್ನು ಕರಕೊಂಡು ದ್ವಾರಕೆಗೆ ಬರಲಾಗಿ ಅಲ್ಲಿಯ ಜನರಿಗೆ ಅತ್ಯಂತ ಆನಂದವಾಯಿತು. ಬಲರಾಮನು ಮತ್ತು ಇತರ ಯಾದವರು ದ್ವಾರಕೆಗೆ ತಿರುಗಿ ಬಂದ ಬಳಿಕ ಅಲ್ಲಿ ಶ್ರೀಕೃಷ್ಣ ರುಕ್ಮಿಣಿಯರ ಲಗ್ನ ಸಮಾರಂಭವು ಬಹಳ ವೈಭವದಿಂದ ಜರುಗಿತು.

ರುಕ್ಮಿಣಿಯಂಥ ಸುಂದರ, ಚತುರ, ಸುಶೀಲ ಮತ್ತು ಪತಿಯ ಮೇಲೆ ನಿಸ್ಸೀಮ ಪ್ರೇಮ ಮಾಡುವ ಗೃಹಿಣಿಯು ಶ್ರೀಕೃಷ್ಣನಿಗೆ ದೊರಕಿದ್ದರಿಂದ ಅವನ ಗೃಹಸ್ಥಾಶ್ರಮವು ಯೋಗ್ಯ ವೈಭವದಿಂದಲೂ, ಸೌಖ್ಯದಿಂದಲೂ ಆರಂಭವಾಯಿತು. ಶ್ರೀಕೃಷ್ಣನಿಗೆ ರುಕ್ಮಿಣಿಯ ಹೊಟ್ಟೆಯಿಂದ ಪ್ರದ್ಯುಮ್ನ, ಚಾರುದೇಷ್ಣ, ಸುಷೇಣ, ಚಾರುಗುಪ್ತ, ಚಾರುಬಾಹು, ಚಾರುವಿಂದ, ಚಾರು, ಸುಚಾರು ಮತ್ತು ಭದ್ರಚಾರು ಈ ಪ್ರಕಾರ ಒಂಬತ್ತು ಮಂದಿ ಸುಂದರ ಗಂಡುಮಕ್ಕಳೂ, ಚಾರುಮತಿಯೆಂಬ ಒಬ್ಬ ಸುಂದರ ಹೆಣ್ಣುಮಗಳೂ ಹುಟ್ಟಿದರು. ಈ ಎಲ್ಲ ಸುಂದರವಾದ ಮಕ್ಕಳಿಂದ ಕೂಡಿದ ಶ್ರೀಕೃಷ್ಣನ ಮಂದಿರವು ಒಂದು ಆನಂದನಿವಾಸವಾಗಿತ್ತು. ಶ್ರೀಕೃಷ್ಣನಿಗೆ ರುಕ್ಮಿಣಿಯು ಹೊರತಾಗಿ ಇನ್ನೂ ಏಳು ಜನ ಹೆಂಡಂದಿರು ಇದ್ದರು. ಅವರೆಲ್ಲರಲ್ಲಿ ರುಕ್ಮಿಣಿಯು ಅಧಿಕಾರವೇ ಹೆಚ್ಚಿನದಿದ್ದು ಅವಳ ಮೇಲೆ ಶ್ರೀಕೃಷ್ಣನ ಪ್ರೇಮವು ಅತಿಶಯವಿತ್ತು. ಬಂದು ಹೋದವರ ಯೋಗ್ಯ ಆದರಾತಿಥ್ಯವನ್ನೂ, ದೇವರುದಿಂಡರ ಮತ್ತು ದ್ವಿಜರ ಪೂಜೆಯನ್ನೂ ರುಕ್ಮಿಣಿಯೇ ಮಾಡುತ್ತಿದ್ದಳು. ಸಾರಾಂಶ, ಗೃಹಸ್ಥಾಶ್ರಮದ ಯಾವತ್ತು ಕರ್ತವ್ಯವು ಅವಳ ಕಡೆಗೇ ಇತ್ತು. ಶ್ರೀಕೃಷ್ಣನು ಉಳಿದ ಏಳು ಮಂದಿ ಹೆಂಡಂದಿರಾದ ಸತ್ಯಭಾಮಾ, ಸತ್ಯಾ, ಸುದತ್ತಾ, ಲಕ್ಷ್ಮಣಾ, ಜಾಂಬವತಿ, ಮಿತ್ರವಿಂದಾ, ಮತ್ತು ಕಾಲಿಂದಿ ಈ ಎಲ್ಲರ ಮೇಲೂ ಚನ್ನಾಗಿ ಪ್ರೀತಿ ಮಾಡುತ್ತಿದ್ದನು. ಇವರೆಲ್ಲರಿಗೂ ಅನೇಕ ಮಂದಿ ಗಂಡುಮಕ್ಕಳು ಹುಟ್ಟಿದರು. ಸತ್ಯಭಾಮೆಗೆ ಭಾನು, ಭೀಮರಥ ಮೊದಲಾದ ಆರುಮಂದಿ ಗಂಡುಮಕ್ಕಳೂ, ಭಾನುಕನ್ಯಾ ಮೊದಲಾದ ನಾಲ್ಕು ಮಂದಿ ಹೆಣ್ಣುಮಕ್ಕಳೂ ಹುಟ್ಟಿದರು. ಜಾಂಬವತಿಗೆ ಪ್ರಸಿದ್ಧ ವೀರನಾದ ಸಾಂಬನು ಮತ್ತು ಮಿತ್ರವಿಂದ ಮೊದಲಾದವರು ಗಂಡುಮಕ್ಕಳಿದ್ದರು. ಅವನ ಇತರ ಹೆಂಡಂದಿರಿಗೂ ಅನೇಕ ಮಂದಿ

ಗಂಡು ಮತ್ತು ಹೆಣ್ಣುಮಕ್ಕಳು ಹುಟ್ಟಿದರು. ಈ ಪ್ರಕಾರ ಶ್ರೀಕೃಷ್ಣನು ತನ್ನ ಸಂಸಾರವನ್ನು ಯೋಗ್ಯ ರೀತಿಯಿಂದ ಮಾಡುತ್ತ ದ್ವಾರಕೆಯಲ್ಲಿ ಆನಂದ ದಿಂದ ಕಾಲ ಕಳೆಯಹತ್ತಿದನು.

ಶ್ರೀಕೃಷ್ಣನು ತನ್ನ ಎಂಟು ಮಂದಿ ಹೆಂಡಂದಿರಲ್ಲಿ ರುಕ್ಮಿಣಿಯ ತರುವಾಯ ಸತ್ಯಭಾಮೆಯ ಮೇಲೆ ವಿಶೇಷ ಪ್ರೀತಿ ಮಾಡುತ್ತಿದ್ದನು. ಸತ್ಯಭಾಮೆಯ ಲಗ್ನದ ವೃತ್ತಾಂತವು ಬಹಳ ಮನೋರಂಜಕವಿರುತ್ತದೆ. ಆ ವೃತ್ತಾಂತವೇ ಸ್ಯಮಂತಕಮಣಿಯ ಕಥೆಯು. ದ್ವಾರಕೆಯಲ್ಲಿ ಸತ್ರಾಜಿತನೆಂಬ ಯಾದವ ಸರದಾರನಿದ್ದನು. ಅವನು ಸೂರ್ಯ ನಾರಾಯಣನ ಆರಾಧನೆಯನ್ನು ಮಾಡಿ ಸ್ಯಮಂತಕಮಣಿಯನ್ನು ಪಡೆದುಕೊಂಡಿದ್ದನು. ಅದು ಅವನಿಗೆ ದಿನಾಲು ಎರಡು ಶೇರು ತೂಕ ಬಂಗಾರವನ್ನು ಕೊಡುತ್ತಿತ್ತು. ಇಂಥ ದಿವ್ಯ ಮಣಿಯು ತನ್ನ ಹತ್ತರ ಅಥವಾ ತನ್ನ ತಂದೆಯಾದ ಸುದೇವನ ಹತ್ತರ ಇರಬೇಕೆಂದು ಶ್ರೀಕೃಷ್ಣನು ಅಪೇಕ್ಷಿಸಿ ಒಂದು ಸಾರೆ ಅದನ್ನು ಸತ್ರಾಜಿತನಿಗೆ ಬೇಡಿದನು. ಆದರೆ ಅದನ್ನು ಬಲಾತ್ಕಾರದಿಂದ ಹರಣ ಮಾಡಬೇಕೆಂದು ಶ್ರೀಕೃಷ್ಣನ ಮನಸ್ಸಿನಲ್ಲಿ ಎಂದೂ ಇರಲಿಲ್ಲ. **ಯಾಂಚಾ ಮೋಘಾ ವರಮಧಿಗುಣೆ ನಾಧಮೆ ಲಬ್ಧಕಾಮಾ** ಎಂಬ ನ್ಯಾಯದಂತೆ ಅವನು ಅದನ್ನು ತನಗೆ ಕೊಡಬೇಕೆಂದು ಸತ್ರಾಜಿತನಿಗೆ ಕೇಳಿದನು. ಆದರೆ ಅವನು ಅದನ್ನು ಕೊಡಲಿಲ್ಲ. ಅದಕ್ಕೆ ಶ್ರೀಕೃಷ್ಣನಾದರೂ ವಿಶೇಷ ಮಹತ್ವ ಕೊಡದೆ ಅದನ್ನು ಮರೆತುಬಿಟ್ಟನು. ಮುಂದೆ ಕೆಲವು ದಿವಸಗಳ ತರುವಾಯ ಸತ್ರಾಜಿತನ ತಮ್ಮನು ಈ ದಿವ್ಯ ಮಣಿಯನ್ನು ಕೊರಳಲ್ಲಿ ಹಾಕಿಕೊಂಡು ಬೇಟೆಯಾಡಲಿಕ್ಕೆ ಅಡವಿಗೆ ಹೋದಾಗ್ಗೆ ಒಂದು ಸಿಂಹವು ಅವನನ್ನು ಕೊಂದಿತು. ಆದರೆ ಆ ಸಿಂಹವನ್ನು ಅಸ್ವಲದ (ಕರಡಿಯ) ರಾಜನಾದ ಜಾಂಬವಾನನು ಕೊಂದು ಆ ಮಣಿಯನ್ನು ತಾನು ತೆಗೆದುಕೊಂಡು ಹೋಗಿ ತನ್ನ ಮಗನ ಕೊರಳಲ್ಲಿ ಕಟ್ಟಿದನು. ಇತ್ತ ಆ ಸ್ಯಮಂತಕ ಮಣಿಯನ್ನು ಕೊರಳಲ್ಲಿ ಹಾಕಿಕೊಂಡು ಹೋಗಿದ್ದ ಪ್ರಸೇನನು ಇಲ್ಲವಾದ ಕೂಡಲೆ ಸತ್ರಾಜಿತನ ಮನಸ್ಸಿನಲ್ಲಿ ಶ್ರೀಕೃಷ್ಣನ ಬಗ್ಗೆ ಸಂಶಯವು ಹುಟ್ಟಿ ಅವನು ಯಾದವರ ಸಭೆಯಲ್ಲಿ--"ಶ್ರೀಕೃಷ್ಣನು ನನ್ನ ಹತ್ತರ ಆ ಮಣಿಯನ್ನು ಬೇಡಿದಾಗ್ಗೆ ನಾನು ಅವನಿಗೆ ಅದನ್ನು ಕೊಡಲಿಲ್ಲ. ಆದುದರಿಂದ

ಅವನು ಈ ಪಾಪಕೃತ್ಯವನ್ನು ಮಾಡಿಸಿರಬಹುದು" ಎಂದು ನುಡಿದನು. ಇದನ್ನು ಕೇಳಿ ಶ್ರೀಕೃಷ್ಣನಿಗೆ ಬಹಳ ವ್ಯಸನವಾಯಿತು. ಆಗ ಅವನು ತನ್ನ ಮೇಲೆ ಬಂದ ಆರೋಪವನ್ನು ಕಳೆದುಕೊಳ್ಳುವದಕ್ಕಾಗಿ ತತ್ಕಾಲವೇ ತನ್ನ ಸಂಗಡ ದಾರಿಯಲ್ಲಿ ಮೂಡಿದ ಹೆಜ್ಜೆಯ ಗುರತು ಹಿಡಿಯುವ ಕೆಲವು ಚತುರ ಜನರನ್ನು ಕರಕೊಂಡು ಅರಣ್ಯದಲ್ಲಿ ಅಡ್ಡಾಡಲಾಗಿ ಅವರಿಗೆ ಪ್ರಸೇನನ ಹೆಣವು ಕಣ್ಣಿಗೆ ಬಿದ್ದಿತು. ಆಮೇಲೆ ಅವರು ಮುಂದಕ್ಕೆ ಸ್ವಲ್ಪ ದೂರ ಹೋಗಲಾಗಿ ಸಿಂಹದ ಹೆಣವು ಬಿದ್ದಿರುವದನ್ನು ಕಂಡರು. ಆದರೆ ಆ ಸಿಂಹದ ಹತ್ತರ ಸ್ಯಮಂತಕಮಣಿಯು ಇದ್ದಿಲ್ಲ. ಮುಂದೆ ಅವರು ಆ ಸಿಂಹವನ್ನು ಕರಡಿಯು ಕೊಂದಿರುತ್ತದೆಂದು ಗೊತ್ತು ಹಚ್ಚಿ ಆ ಕರಡಿಯನ್ನು ಹುಡುಕುತ್ತ ಜಾಂಬವಾನನ ಗುಹೆಯ ತನಕ ಬಂದರು. ಅಲ್ಲಿ ಶ್ರೀಕೃಷ್ಣನು ತನ್ನ ಸಂಗಡ ಬಂದವರನ್ನು ಆ ಗುಹೆಯ ಬಾಯಿಯ ಹತ್ತರ ನಿಲ್ಲಿಸಿ ತಾನು ಆ ಗುಹೆಯೊಳಗೆ ಪ್ರವೇಶ ಮಾಡಿದನು. ಆದರೆ ಜಾಂಬವಾನನು ಸಾಮೋಪಚಾರದಿಂದ ಆ ಮಣಿಯನ್ನು ಕೊಡಲಿಲ್ಲ. ಆದುದರಿಂದ ಶ್ರೀಕೃಷ್ಣನು ಜಾಂಬವಾನನ ಕೂಡ ಇಪ್ಪತ್ತೊಂದು ದಿವಸ ಯುದ್ಧಮಾಡಿ ಅಜಿಂಕ್ಯನಾದ ಜಾಂಬವಾನನ್ನು ಗೆದ್ದನು. ಆಗ ಜಾಂಬವಾನನು ಶ್ರೀಕೃಷ್ಣನು ವಿಷ್ಣುವಿನ ಅವತಾರವಿರಲಿಕ್ಕೇಬೇಕೆಂದು ತಿಳಿದು ಅವನಿಗೆ ದಿವ್ಯ ಮಣಿಯನ್ನು ಕೊಟ್ಟದ್ದಲ್ಲದೆ ತನ್ನ ಮಗಳಾದ ಜಾಂಬವತಿಯನ್ನು ಸಹ ಕೊಟ್ಟನು. ಈ ಪ್ರಕಾರ ಶ್ರೀಕೃಷ್ಣನು ಆ ಸ್ಯಮಂತಕಮಣಿಯನ್ನು ತೆಗೆದುಕೊಂಡು ಬಂದು ಸತ್ರಾಜಿತ ರಾಜನಿಗೆ ಕೊಟ್ಟನು. ಆಗ ಸತ್ರಾಜಿತನಿಗೆ ತಾನು ಶ್ರೀಕೃಷ್ಣನ ಮೇಲೆ ವ್ಯರ್ಥವಾಗಿ ಸಂಶಯ ತೆಗೆದುಕೊಂಡದ್ದಕ್ಕಾಗಿ ಬಹಳ ಪಶ್ಚಾತ್ತಾಪವಾಯಿತು. ಆದರಿಂದ ಅವನು ನಾಚಿಕೊಂಡು ತನ್ನ ತಲೆಯನ್ನು ಬಾಗಿಸಿದ್ದಲ್ಲದೆ ತನ್ನ ಮಗಳಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ಲಗ್ನ ಮಾಡಿಕೊಟ್ಟು ಸ್ಯಮಂತಕಮಣಿಯನ್ನು ಅವನಿಗೆ ವರದಕ್ಷಿಣೆವೆಂದು ಕೊಟ್ಟನು. ಆದರೆ ಶ್ರೀಕೃಷ್ಣನು—"ಯಾವ ಮಣಿಯ ಸಲುವಾಗಿ ನನ್ನ ಮೇಲೆ ಇಷ್ಟು ಅಪವಾದವು ಬಂದಿರುತ್ತದೆಯೋ ಅದು ನನಗೆ ಬೇಡ' ಎಂದು ಹೇಳಿ ಅದನ್ನು ತನ್ನ ಮಾವನಾದ ಸತ್ರಾಜಿತ ರಾಜನ ಹತ್ತರವೇ ಬಿಟ್ಟುಕೊಟ್ಟನು.

ಆದರೆ ಆ ಸ್ಯಮಂತಕಮಣಿಯ ಪ್ರಭಾವವು ಇಷ್ಟಕ್ಕೆ ಮುಗಿಯ ಲಿಲ್ಲ. ಸತ್ಯಭಾಮೆಯು ಲಗ್ನವು ಶ್ರೀಕೃಷ್ಣನ ಕೂಡ ಆಗುವ ಮುಂಚೆ ಶತಧನ್ವಾ ಎಂಬ ಭೋಜ ಸರದಾರನು ಅವಳನ್ನು ತನಗೆ ಬೇಡಿದ್ದನು. ಆದುದರಿಂದ ಅವನು ತನಗೆ ಸತ್ಯಭಾಮೆಯನ್ನು ಲಗ್ನ ಮಾಡಿಕೊಡಲಿಲ್ಲೆಂದು ಸತ್ರಾಜಿತನ ಮೇಲೆ ಸಿಟ್ಟಿಗೆದ್ದು ಅವನನ್ನು ಕೊಂದು ಆ ಮಣಿಯನ್ನು ಕಸದುಕೊಳ್ಳಬೇ ಕೆಂದು ಯೋಚಿಸಿ ಅದರಂತೆ ಸಿದ್ಧತೆಯನ್ನು ನಡೆಸಿದನು. ಈ ಕೆಲಸದಲ್ಲಿ ಅವನಿಗೆ ಅಕ್ರೂರನೂ ಕೃತವರ್ಮನೂ ಸಹಾಯ ಮಾಡಲಿಕ್ಕೆ ಒಪ್ಪಿಕೊಂ ಡರು. ಆದುದರಿಂದ ಶತಧನ್ವನು ತನ್ನ ದುಷ್ಟ ಕೃತ್ಯಕ್ಕೆ ಯೋಗ್ಯ ಪ್ರಸಂಗ ವನ್ನು ಸಾಧಿಸಿಕೊಂಡು ಕುಳಿತನು. ಹೀಗಿರುವಾಗ ಒಂದು ಸಾರೆ ಬಲರಾಮ ನೂ ಕೃಷ್ಣನೂ ವಾರಣಾವತದಲ್ಲಿ ಪಾಂಡವರು ಕುಂತಿ ಸಹಿತವಾಗಿ ಅರಗಿನ ಮನೆಯೊಳಗೆ ಸುಟ್ಟು ಹೋದ ದುಃಖದ ವರ್ತಮಾನವನ್ನು ಕೇಳಿ ಧೃತರಾ ಷ್ಟ್ರಾದಿಗಳನ್ನು ಮಾತಾಡಿಸಲಿಕ್ಕೂ, ಪಾಂಡವರ ಮತ್ತು ಕುಂತಿಯ ಉತ್ತರ ಕ್ರಿಯೆಗಳನ್ನು ಮಾಡಲಿಕ್ಕೂ ಮಥುರೆಯನ್ನು ಬಿಟ್ಟು ಹಸ್ತಿನಾಪುರಕ್ಕೆ ಹೋದ ರು. ಆ ಪ್ರಸಂಗವನ್ನು ಸಾಧಿಸಿ ಶತಧನ್ವನು ಸತ್ರಾಜಿತನ ಕೊಲೆಯನ್ನು ಮಾಡಿ ಆ ಮಣಿಯನ್ನು ಅವನಿಂದ ತೆಗೆದುಕೊಂಡು ಹೋದನು. ಆಗ ಸತ್ಯಭಾಮೆ ಯು ಹಸ್ತಿನಾಪುರಕ್ಕೆ ಹೋಗಿ ತನ್ನ ತಂದೆಯ ಕೊಲೆಯ ವರ್ತಮಾನವನ್ನು ರಾಮಕೃಷ್ಣರಿಗೆ ತಿಳುಹಿಸಿದಳು. ಇದನ್ನು ಕೇಳಿ ಅವರಿಬ್ಬರೂ ದ್ವಾರಕೆಗೆ ತಿರುಗಿ ಬಂದು ಶತಧನ್ವನಿಗೆ ಶಿಕ್ಷೆಯನ್ನು ಮಾಡಬೇಕೆಂದು ಅವನನ್ನು ಹುಡುಕಿ ದರು. ಶತಧನ್ವನು ಶ್ರೀಕೃಷ್ಣನ ಸಂಗಡ ಯುದ್ಧಮಾಡಬೇಕೆಂದು ಆಲೋಚಿಸಿ ಅಕ್ರೂರನಿಗೂ ಕೃತವರ್ಮನಿಗೂ ಸಹಾಯವನ್ನು ಕೇಳಲಾಗಿ ಅವರು ರಾಮ ಕೃಷ್ಣರ ಎದುರಾಳುಗಳಾಗಿ ಯುದ್ಧ ಮಾಡಲಿಕ್ಕೆ ಯಾರೂ ಸಮರ್ಥರಲ್ಲವೆಂದು ಹೇಳಿ ಅವನಿಗೆ ಸಹಾಯವನ್ನು ಕೊಡಲಿಲ್ಲ. ಆಗ ಅವನು ಸ್ಯಮಂತಕ ಮಣಿ ಯನ್ನು ಅಕ್ರೂರನ ಕಡೆಗೆ ಒಪ್ಪಿಸಿ ಒಂದು ದಿವಸಕ್ಕೆ ನೂರು ಹರದಾರಿ ನಡೆಯುವಂಥ ಒಂದು ಚಪಲವಾದ ಹೆಣ್ಣು ಕುದುರೆಯನ್ನು ಹತ್ತಿಕೊಂಡು ದ್ವಾರಕೆಯಿಂದ ಓಡಿ ಹೋದನು. ಅವನು ಓಡಿಹೋದ ವರ್ತಮಾನವನ್ನು ಕೇಳಿ ರಾಮಕೃಷ್ಣರು ವೇಗದಿಂದ ಅವನ ಬೆನ್ನಹತ್ತಿ ಹೋಗಲಾಗಿ ಅವನು ಕಾಶಿಯ ಹತ್ತರ ಅವನ ಕಣ್ಣಿಗೆ ಬಿದ್ದನು. ಅವನ ಕುದುರೆಯು ನೂರಾರು

ಹರದಾರಿ ಓಡಿದ್ದರಿಂದ ಅದು ಅಲ್ಲಿ ನೆಲದ ಮೇಲೆ ಕುಕ್ಕರಿಸಿ ಬಿದ್ದು ಸತ್ತಿತು. ಆ ಬಳಿಕ ಅವನು ಕಾಲಿನಿಂದ ಓಡಲಿಕ್ಕೆ ಹತ್ತಿದನು. ಆಗ ಶ್ರೀಕೃಷ್ಣನು ತಾನೂ ಕಾಲಿನಿಂದ ಓಡಿ ಹೋಗಿ ಅವನನ್ನು ಹಿಡಿದು ಕೊಂದು ಅವನ ಘೋರ ಪಾಪ ದ ಸಲುವಾಗಿ ಯೋಗ್ಯವಾದ ಪ್ರಾಯಶ್ಚಿತ್ತವನ್ನು ಮಾಡಿದನು. ಆದರೆ ಅವನ ಹತ್ತರ ಸ್ಯಮಂತಕ ಮಣಿಯು ಇದ್ದಿಲ್ಲ. ಶ್ರೀಕೃಷ್ಣನು ಬಲರಾಮನ ಬಳಿಗೆ ಬಂದು ಈ ಸಂಗತಿಯನ್ನು ತಿಳಿಸಲಾಗಿ—“ಸ್ಯಮಂತಕಮಣಿಯನ್ನು ನುಂಗಿ ಬಿಡುವದು ನಿನ್ನ ಮನಸ್ಸಿನಲ್ಲಿರುವದು. ನಾನು ಅದನ್ನು ಒಮ್ಮೆಯಾದರೂ ಕಣ್ಣಿಂದ ನೋಡದೆ ದ್ವಾರಕೆಗೆ ನನ್ನ ಮೋರೆಯನ್ನು ತೋರಿಸಲಾರೆನು” ಎಂದು ಹೇಳಿ ಮಿಥಿಲಾ ನಗರದೊಳಗೆ ಪ್ರವೇಶ ಮಾಡಿದನು. ಅಲ್ಲಿ ಮಿಥಿಲಾ ನಗರದ ರಾಜನು ಬಲರಾಮನ ಸತ್ಕಾರವನ್ನು ವಿಶೇಷವಾಗಿ ಮಾಡಿ ಅವ ನನ್ನು ತನ್ನ ಹತ್ತರ ಇಟ್ಟುಕೊಂಡನು. ರಾಮಕೃಷ್ಣರೊಳಗೆ ಒಡಕು ಹುಟ್ಟಿ ದ ವರ್ತಮಾನವನ್ನು ಕೇಳಿ ದುರ್ಯೋಧನನು ಅಲ್ಲಿಗೆ ಬಂದು ಬಲರಾಮನ ಕಡೆಯಿಂದ ಗದಾಯುದ್ಧದ ಕಲೆಯನ್ನು ಕಲಿತನು. ಇತ್ತಲಾ ಶ್ರೀಕೃಷ್ಣ ನಿಗೆ ಬಲರಾಮನ ಹೊರತು ಸಮಾಧಾನವಾಗುತ್ತಿದ್ದಿಲ್ಲ. ಅವನು ಸ್ಯಮಂತಕ ಮಣಿಯು ಯಾರ ಹತ್ತರ ಇರಬಹುದೆಂದು ಶೋಧವನ್ನು ಮಾಡಿದನು. ಅದು ಅಕ್ರೂರನ ಹತ್ತರ ಇತ್ತು. ಆದರಿಂದ ಅವನಿಗೆ ದಿನಾಲು ಬಂಗಾರವು ದೊರಕುತ್ತಿತ್ತು. ಅದನ್ನು ಅವನು ದಾನ ಧರ್ಮ ಮಾಡುತ್ತಿದ್ದನು. ಇಲ್ಲವೆ ಯಜ್ಞಯಾಗಾದಿಗಳಿಗಾಗಿ ವೆಚ್ಚಮಾಡುತ್ತಿದ್ದನು. ಮೊದಲಿನಿಂದಲೂ ಜನರು ಅಕ್ರೂರನಿಗೆ ‘ದಾನಪತಿ’ ಯೆನ್ನುತ್ತಿದ್ದರು. ಈಗ ಅವನಿಗೆ ‘ಯಜ್ಞಪತಿ’ ಯೆನ್ನಹತ್ತಿದರು. ಅಕ್ರೂರನ ಹತ್ತರ ದಿನಾಲು ಇಷ್ಟು ದ್ರವ್ಯವು ಎಲ್ಲಿಂದ ಬರುತ್ತದೆಂದು ಶ್ರೀಕೃಷ್ಣನು ವಿಚಾರಮಾಡುತ್ತಿರಲಾಗಿ ಅವನ ಹತ್ತರ ಸ್ಯಮಂ ತಕ ಮಣಿಯು ಇರಬಹುದೆಂದು ಸಂಶಯ ಬಂದಿತು. ಹಾಗೂ ಇದನ್ನು ಅವ ನು ಯಾದವರ ಸಭೆಯಲ್ಲಿ ಆಡಿ ತೋರಿಸಿದನು. ಆಗ ಅಕ್ರೂರನು ತನ್ನ ಮೇಲೆ ಶ್ರೀಕೃಷ್ಣನು ಸಾಗಿ ಬಂದಾನೆಂಬ ಹೆದರಿಕೆಯಿಂದ ತನ್ನ ಸೋದರಮಾವನಾದ ಶ್ವಫಲ್ಕನೆಂಬ ಕಾಶಿಯ ರಾಜನ ಬಳಿಗೆ ಹೋದನು. ಅಕ್ರೂರನು ಸ್ಯಮಂತಕ ಮಣಿಯನ್ನು ತೆಗೆದುಕೊಂಡು ಕಾಶಿಗೆ ಹೋದುದರಿಂದ ಕಾಶಿಯಲ್ಲಿ ಮಳೆಯು ಸಮೃದ್ಧಿಯಾಗಿ ಬರಗಾಲವು ಇಲ್ಲದಂತಾಯಿತು. ಹಾಗೂ ಅಲ್ಲಿ ಯಾವತ್ತು

ಪ್ರಕಾರದ ಸುಖವೂ ವೈಭವವೂ ಉಂಟಾದವು. ಇತ್ತಲಾ ದ್ವಾರಕೆಯಲ್ಲಿ ಮಳೆಯು ಕಡಿಮೆಯಾಗಿ ಬರಗಾಲವು ಬಂದಿತು. ಇದರಿಂದ ಶ್ರೀಕೃಷ್ಣನಿಗೆ ಬಹಳ ದುಃಖವುಂಟಾಗಿ ಅವನು ಅಕ್ರೂರನಿಗೆ—“ ಸ್ಯಮಂತಕ ಮಣಿಗೆ ವಾಸ್ತವವಾಗಿ ಸತ್ಯಭಾಮೆಯ ಮಗನು ಒಡೆಯನು. ಆದರೆ ನಾನು ಅದರ ಮೇಲೆ ಯಾವದೊಂದು ತರದ ಅಧಿಕಾರವನ್ನು ಹೇಳುವದಿಲ್ಲ. ಬಲರಾಮನ ಮನಸ್ಸಿನಲ್ಲಿ ಸ್ಯಮಂತಕ ಮಣಿಯನ್ನು ಕಣ್ಣಿನಿಂದ ನೋಡತಕ್ಕದ್ದದೆ. ಅದನ್ನು ನೀನು ಒಮ್ಮೆ ಯಾದವ ಸಭೆಯಲ್ಲಿ ತಂದು ಬಲರಾಮನ ಕಣ್ಣಿಗೆ ಹಾಕು. ಆದರೆ ನೀನೇ ಆ ಮಣಿಯನ್ನು ಇಟ್ಟುಕೋ ” ಎಂದು ಸಮಾಧಾನೋಕ್ತಿಯನ್ನು ಹೇಳಿ ಕಳುಹಿಸಿದನು. ಇದಕ್ಕೆ ಅಕ್ರೂರನು ಒಪ್ಪಿಕೊಂಡು ದ್ವಾರಕೆಗೆ ಬಂದನು. ಬಲರಾಮನಾದರೂ ಬಂದನು. ಆಮೇಲೆ ಅಕ್ರೂರನು ಅದನ್ನು ಯಾದವರ ಸಭೆಯಲ್ಲಿ ತಂದು ಬಲರಾಮನಿಗೂ ಇತರ ಯಾದವರಿಗೂ ತೋರಿಸಲಾಗಿ ಅವರೆಲ್ಲರು ಸಮಾಧಾನಪಟ್ಟರು. ಆ ಬಳಿಕ ಶ್ರೀಕೃಷ್ಣನು ತಾನು ಮೊದಲೇ ಒಪ್ಪಿಕೊಂಡ ಪ್ರಕಾರ ಆ ಮಣಿಯನ್ನು ಅಕ್ರೂರನ ಕಡೆಗೆ ಕೊಟ್ಟನು. ಈ ಪ್ರಕಾರ ಈ ಸ್ಯಮಂತಕ ಮಣಿಯು ಅನರ್ಥಪರಂಪರೆಯನ್ನು ಮಾಡಿ ಕೊನೆಗೆ ದಾನಶೂರನಾದ ಅಕ್ರೂರನ ಬಳಿಯಲ್ಲಿಯೇ ಉಳಿಯಿತು.

ಶ್ರೀಕೃಷ್ಣನಿಗೆ ರುಕ್ಮಿಣಿಯ ಹೊರತು ಸ್ಯಮಂತಕ ಮಣಿಯ ಜಗಳದ ಸಲುವಾಗಿ ಜಾಂಬವತಿ ಮತ್ತು ಸತ್ಯಭಾಮಾ ಈ ಇಬ್ಬರು ಹೆಂಡಂದಿರಾದರು. ನಾಲ್ಕನೆ ಹೆಂಡತಿಯು ಕೋಸಲ ದೇಶದ ನಗ್ನಜಿತ ರಾಜನ ಮಗಳಾದ ನಗ್ನಜಿತಿಯು. ಇವಳ ತಂದೆಯು ತನ್ನ ಮಗಳನ್ನು ಮದವೇರಿದ ಏಳು ಎತ್ತುಗಳನ್ನು ಎಳೆದು ತಂದು ಕಟ್ಟುವವನಿಗೆ ಮದುವೆ ಮಾಡಿ ಕೊಡುತ್ತೇನೆಂದು ಪ್ರತಿಜ್ಞೆಯನ್ನು ಸಾರಿದ್ದನು. ಆ ಪ್ರಕಾರ ಶ್ರೀಕೃಷ್ಣನು ಮಾಡಿ ಅವನ ಮಗಳನ್ನು ಮದುವೆಯಾದನು. ಐದನೆ ಹೆಂಡತಿಯು ಅವಂತಿಯ ರಾಜನ ಮಗಳಾದ ಮಿತ್ರವಿಂದಾ ಎಂಬವಳು. ಇವಳು ಶ್ರೀಕೃಷ್ಣನನ್ನು ಸ್ವಯಂವರದಲ್ಲಿ ವರಿಸಿದ ಬಳಿಕ ಶ್ರೀಕೃಷ್ಣನು ಇವಳನ್ನು ದುರ್ಯೋಧನನ ಪಕ್ಷದ ಪ್ರಸಿದ್ಧ ವಿಂದ ಮತ್ತು ಅನುವಿಂದ ಬಂಧುಗಳನ್ನು ಗೆದ್ದು ತಂದನು. ಆರನೆ ಹೆಂಡತಿಯು ಪ್ರತ್ಯಕ್ಷ ಕಾಲಿಂದಿಯು. ಇವಳು ಮನುಷ್ಯ ರೂಪವನ್ನು ಧಾರಣ ಮಾಡಿದ ಪವಿತ್ರವಾದ ಯಮುನೆಯು. ಏಳನೆ ಹೆಂಡತಿಯು ಮದ್ರ ರಾಜನ ಮಗ

ಳಾದ ಲಕ್ಷ್ಮಣಾ ಎಂಬವಳು. ಇವಳು ಶ್ರೀಕೃಷ್ಣನನ್ನು ಸ್ವಯಂವರದಲ್ಲಿ ವರಿಸಿದಳು. ಎಂಟನೆ ಹೆಂಡತಿಯು ಕೇಕಿಯು ರಾಜನ ಮಗಳಾದ ಕೈಕೆಯಿ ಎಂಬವಳು.

ಈ ಪ್ರಕಾರ ಎಂಟು ಮಂದಿ ಮುಖ್ಯ ಹೆಂಡಂದಿರಲ್ಲದೆ ಶ್ರೀಕೃಷ್ಣನಿಗೆ ಹದಿನಾರು ಸಾವಿರ ಇತರ ಸ್ತ್ರೀಯರು ಇದ್ದರೆಂದು ಆಖ್ಯಾಯಿಕೆಯುಂಟು. ಪ್ರಾಗ್ಜ್ಯೋತಿಷದ ರಾಜನಾದ ನರಕಾಸುರ ರಾಕ್ಷಸನು ಇಡೀ ಭೂಮಂಡಲದೊಳಗಿನ ನಾನಾ ದೇಶಗಳಲ್ಲಿಯ ಮತ್ತು ನಾನಾ ಜಾತಿಗಳಲ್ಲಿಯ ಸುಂದರವಾದ ಕನ್ನಿಕೆಯರನ್ನು ತೆಗೆದುಕೊಂಡು ಬಂದು ಒಂದು ಪರ್ವತದ ಮೇಲೆ ಕಾರಾಗೃಹದಲ್ಲಿ ಇಟ್ಟಿದ್ದನು. ರಾವಣನು ಯಾವ ಪ್ರಕಾರ ಒಂದು ಸಾವಿರ ಸುಂದರ ಸ್ತ್ರೀಯರನ್ನು ತನ್ನ ಅಂತಃಪುರದಲ್ಲಿ ಇಟ್ಟಿದ್ದನೋ ಅದೇ ಪ್ರಕಾರ ನರಕಾಸುರನು ಇಟ್ಟಿದ್ದನು. ಇದಲ್ಲದೆ ನರಕಾಸುರನು ಸ್ವರ್ಗದಲ್ಲಿದ್ದ ಅದಿತಿಯ ಕುಂಡಲಗಳನ್ನು ಬಲಾತ್ಕಾರದಿಂದ ತೆಗೆದುಕೊಂಡು ಬಂದಿರುತ್ತಾನೆಂದು ಇಂದ್ರನು ಶ್ರೀಕೃಷ್ಣನಿಗೆ ತಿಳುಹಿಸಿದನು. ಆದುದರಿಂದ ಶ್ರೀಕೃಷ್ಣನು ಆ ಹದಿನಾರು ಸಾವಿರ ಹುಡಿಗಿಯರನ್ನು ಬಂಧಮುಕ್ತ ಮಾಡಬೇಕೆಂತಲೂ, ಅದಿತಿಯ ಕುಂಡಲಗಳನ್ನು ತಿರುಗಿ ತೆಗೆದುಕೊಂಡು ಬರಬೇಕೆಂತಲೂ ನಿಶ್ಚಯ ಮಾಡಿ ಸತ್ಯಭಾಮೆಯನ್ನೊಡಗೊಂಡು ಪ್ರಾಗ್ಜ್ಯೋತಿಷದ ಮೇಲೆ ಮುತ್ತಿಗೆಯನ್ನು ಹಾಕಿ ಯುದ್ಧದೊಳಗೆ ಮುರು, ನಿಸುಂದ, ಹಯಗ್ರೀವ ಮೊದಲಾದ ನರಕಾಸುರನ ಸೇನಾಧಿಪತಿಗಳನ್ನು ಕೊಂದುಹಾಕಿ ನರಕಾಸುರನನ್ನು ಸಹ ಕೊಂದನು. ಹಾಗೂ ಅವನು ಕಾರಾಗೃಹದಲ್ಲಿಟ್ಟಿದ್ದ ಯಾವತ್ತು ಹುಡಿಗಿಯರನ್ನು ಬಂಧಮುಕ್ತ ಮಾಡಿದನು. ಇದರಿಂದ ಆ ಹುಡಿಗಿಯರಿಗೆ ಅತ್ಯಾನಂದವಾಗಿ ಅವರೆಲ್ಲರು ಶ್ರೀಕೃಷ್ಣನನ್ನು ತಮ್ಮ ಮನೋಭಾವದಿಂದ ವರಿಸಿದರು. ಇದಲ್ಲದೆ ಶ್ರೀಕೃಷ್ಣನು ನರಕಾಸುರನು ತೆಗೆದುಕೊಂಡು ಬಂದಿದ್ದ ಅದಿತಿಯ ಕುಂಡಲಗಳನ್ನು ಸ್ವರ್ಗಕ್ಕೆ ಒಯ್ದು ಅದಿತಿಗೆ ಮುಟ್ಟಿಸಿದನು. ಇದಕ್ಕಾಗಿ ಇಂದ್ರನೂ ಅದಿತಿಯೂ ಬಹಳ ಸಂತೋಷಪಟ್ಟು ಅವನಿಗೂ ಅವನ ಸಂಗಡ ಹೋಗಿದ್ದ ಸತ್ಯಭಾಮೆಗೂ ಆಶೀರ್ವದಿಸಿದರು. ಅವನು ಸ್ವರ್ಗದೊಳಗಿಂದ ಬರುವಾಗ ನಂದನವನದೊಳಗಿನ ಒಂದು ಪಾರಿಜಾತ ವೃಕ್ಷವನ್ನು ತೆಗೆದುಕೊಂಡು ಬಂದು ಅದನ್ನು ಸತ್ಯಭಾಮೆಯ ಮಂದಿರದಲ್ಲಿ ಹಚ್ಚಿದನು.

ಶ್ರೀಕೃಷ್ಣನು ನಾಲ್ವತ್ತೈದು ಅಥವಾ ನಾಲ್ವತ್ತಾರು ವರ್ಷದವನಿದ್ದಾಗ ದ್ರುಪದ ರಾಜನು ದ್ರೌಪದಿಯ ಸ್ವಯಂವರವನ್ನು ಮಂಡಿಸಿ ಯಾದವರಿಗೆ ಆಮಂತ್ರಣ ಪತ್ರಿಕೆಯನ್ನು ಕಳುಹಿಸಿದನು. ಆದುದರಿಂದ ಶ್ರೀಕೃಷ್ಣನು ತನ್ನ ಮಗನಾದ ಪ್ರದ್ಯುಮ್ನನನ್ನು ಕರಕೊಂಡು ದ್ರೌಪದಿಯ ಸ್ವಯಂವರಕ್ಕೆ ಹೋದನು. ಬಲರಾಮನು ತನ್ನ ಮಕ್ಕಳಾದ ನಿಶಠ ಮತ್ತು ಉಲ್ಮುಕ ಈ ಇಬ್ಬರನ್ನೂ, ತನ್ನ ತರುವಾಯ ರೋಹಿಣಿಯ ಹೊಟ್ಟೆಯಿಂದ ಹುಟ್ಟಿದ ಸಾರಣಿ ಮೊದಲಾದ ತಮ್ಮಂದಿರನ್ನೂ ಕರಕೊಂಡು ಹೋದನು. ಶ್ರೀಕೃಷ್ಣನ ತರುವಾಯ ದೇವಕಿಯ ಹೊಟ್ಟೆಯಿಂದ ಹುಟ್ಟಿದ ಗದ ಎಂಬ ಮಗನೂ ಅವರ ಸಂಗಡ ಹೋದನು. ಇದಲ್ಲದೆ ಅಕ್ರೂರ, ಸಾತ್ಯಕಿ, ಉದ್ಧವ, ಕೃತವರ್ಮ, ಪೃಥು, ವಿಪೃಥು, ಕಂಕ, ಶಂಕು, ವಿದುರಥ ಮೊದಲಾದ ಯಾದವ ಮತ್ತು ಭೋಜ ವೀರರು ಸ್ವಯಂವರಕ್ಕೆ ಹೋದರು. ಈ ಸ್ವಯಂವರಕ್ಕೆ ಭರತಖಂಡದಲ್ಲಿಯ ಯಾವತ್ತು ದೊಡ್ಡ ದೊಡ್ಡ ಅರಸರು ಕೂಡಿದ್ದರು. ದುರ್ಯೋಧನನು ತನ್ನ ಬಂಧುಗಳನ್ನೂ ಕರ್ಣನನ್ನೂ ಕರಕೊಂಡು ಬಂದಿದ್ದನು. ದ್ರೌಪದಿಯ ಸೌಂದರ್ಯದ ಕೀರ್ತಿಯನ್ನು ಕೇಳಿ ಬಹುಶಃ ಯಾವತ್ತು ಕ್ಷತ್ರಿಯ ಅರಸರು ಈ ಸ್ವಯಂವರಕ್ಕೆ ಬಂದಿದ್ದರು. ಆದರೆ ದ್ರುಪದ ರಾಜನು ಸ್ವಯಂವರ ಮಂಟಪದಲ್ಲಿ ಮೊದಲೇ ಎದ್ದು ನಿಂತು ಸಾರಿ ಹೇಳಿದ ಪ್ರಕಾರ ಯಾರಿಗೂ ಅಲ್ಲಿ ಇಟ್ಟಿದ್ದ ಧನುಷ್ಯವನ್ನು ಎತ್ತಿ ಅದಕ್ಕೆ ಹೆದೆಯನ್ನೇರಿಸುವದು ಆಗಲಿಲ್ಲ. ಶ್ರೀಕೃಷ್ಣನು ಮತ್ತು ಸಾತ್ಯಕಿಯು ಸಮರ್ಥರಿದ್ದಾಗ್ಯೂ ಅವರು ಏಳಲಿಲ್ಲ. ಕರ್ಣನು ಎದ್ದು ಆ ಧನುಷ್ಯವನ್ನು ಮೇಲಕ್ಕೆ ಎತ್ತುವಷ್ಟರಲ್ಲಿ ಅವನು ಕ್ಷತ್ರಿಯನಿರದೆ ಸಾರಥಿಯ ಮಗನಿರುತ್ತಾನೆಂದು ದ್ರೌಪದಿಯು ತನ್ನ ಅಡ್ಡಿಯನ್ನು ಹೇಳಲಾಗಿ ಕರ್ಣನು ಅದನ್ನು ಅಲ್ಲಿಯೇ ಬಿಟ್ಟು ಹೋಗಿ ಕುಳಿತನು. ಆಮೇಲೆ ಬ್ರಾಹ್ಮಣ ವೇಷದಿಂದ ಅಲ್ಲಿ ಬಂದು ಕುಳಿತಿದ್ದ ಅರ್ಜುನನು ಎದ್ದು ದ್ರೌಪದಿಯು ಒಡ್ಡಿದ ಪಂಥದಂತೆ ಆ ಧನುಷ್ಯಕ್ಕೆ ಹೆದೆಯನ್ನೇರಿಸಿ ಐದು ಬಾಣಗಳನ್ನು ಬಿಡಲಾಗಿ ಅಲ್ಲಿ ತೂಗಿಹಾಕಿದ್ದ ಮೀನವು ಆ ಬಾಣಗಳ ಪೆಟ್ಟಿನಿಂದ ನೆಲದ ಮೇಲೆ ಬಿದ್ದಿತು. ಆಗ ದ್ರೌಪದಿಯು ಅವನಿಗೆ ಆನಂದದಿಂದ ಹೂವಿನ ಮಾಲೆಯನ್ನು ಹಾಕಿದಳು. ಅರ್ಜುನನನ್ನು ನೋಡಿದವನೇ ಶ್ರೀಕೃಷ್ಣನು ಅವನ ಗುರುತು ಹಿಡಿದು ಪಾಂಡವರು ಜೀವಂತವಿರುತ್ತಾರೆಂದು ಬಹಳ ಆನಂದಪಟ್ಟನು. ಅರ್ಜುನನು

ದ್ರೌಪದಿಯನ್ನೂ ತನ್ನ ಅಣ್ಣ ತಮ್ಮಂದಿರನ್ನೂ ಕೂಡಿಕೊಂಡು ತಾನು ಇಳಿದು ಕೊಂಡ ಮನೆಗೆ ಹೋಗುವಾಗ ಶ್ರೀಕೃಷ್ಣನು ಅವರ ಬೆನ್ನುಹತ್ತಿ ಹೋಗಿ ಕುಂತಿಗೆ ನಮಸ್ಕರಿಸಿ, ಪಾಂಡವರಿಗೆ ಸಮಾಧಾನ ಹೇಳಿ ದ್ರೌಪದಿಗೆ ತನ್ನ ತಂಗಿ ಯೆಂದು ಭಾವಿಸುತ್ತೇನೆಂದು ಹೇಳಿದನು. ಇದರಿಂದ ಕುಂತಿ ಸಹಿತವಾಗಿ ಪಾಂಡವರು ಜೀವಂತವಿರುತ್ತಾರೆಂಬ ವರ್ತಮಾನವು ನಾಲ್ಕೂ ಕಡೆಗೆ ಪಸರಿ ಸಿತು. ದ್ರುಪದರಾಜನಿಗೆ ತನ್ನ ಮನಸ್ಸಿನಲ್ಲಿದ್ದ ಪ್ರಕಾರ ಯೋಗ್ಯ ಅಳಿಯನು ಸಿಕ್ಕದ್ದರಿಂದ ಬಹಳ ಆನಂದವಾಯಿತು. ಆಮೇಲೆ ಕಾಂಪಿಲ್ಯಪುರದಲ್ಲಿ ದ್ರೌಪ ದಿಯ ಲಗ್ನವು ಐದು ಮಂದಿ ಪಾಂಡವರ ಕೂಡ ಬಹಳ ವಿಜೃಂಭಣೆಯಿಂದ ನೆರವೇರಿತು. ಈ ಲಗ್ನಕ್ಕೆ ಶ್ರೀಕೃಷ್ಣನೂ ಬಲರಾಮನೂ ಹೋಗಿ ತಮ್ಮ ಆಪ್ತರಾದ ಪಾಂಡವರಿಗೆ ಆಹೇರುಗಳನ್ನೂ ಕಾಣಿಕೆಯನ್ನೂ ಕೊಟ್ಟು ಬಂದರು.

ಪಾಂಡವರು ಜೀವಂತವಿರುತ್ತಿದ್ದು ಅವರಿಗೆ ದ್ರುಪದ ರಾಜನು ತನ್ನ ಮಗ ಳನ್ನು ಕೊಟ್ಟು ಲಗ್ನ ಮಾಡಿದನೆಂತಲೂ, ಆ ಲಗ್ನಕ್ಕೆ ಶ್ರೀಕೃಷ್ಣ ಬಲರಾಮರು ಹೋಗಿ ಯಥಾಯೋಗ್ಯ ಸತ್ಕಾರವನ್ನು ಮಾಡಿ ಬಂದರೆಂತಲೂ ಕೇಳಿ ಧೃತ ರಾಷ್ಟ್ರನ ಎದೆಗೆ ಗುಂಡಿನ ಸೆಲೆಯು ಬಡಿದಂತಾಯಿತು. ಇನ್ನು ಮೇಲೆ ಅವರು ಬಹುಶಃ ಯಾದವರ ಮತ್ತು ಪಾಂಚಾಳರ ಸಹಾಯದಿಂದ ತಮ್ಮ ಪಾಲಿನ ರಾಜ್ಯವನ್ನು ಬೇಡಲಿಕ್ಕೆ ಹಸ್ತಿನಾಪುರದ ಮೇಲೆ ಸಾಗಿ ಬರಬಹುದೆಂತಲೂ ತಾವು ಅವರನ್ನು ಅರಗಿನ ಮನೆಯಲ್ಲಿ ಹೇಗೆ ಕಪಟದಿಂದ ಸುಡಿಸಿದೆವೆಂಬುದು ಹೊರಬೀಳದೆ ಇರಲಿಕ್ಕಿಲ್ಲೆಂತಲೂ ಧೃತರಾಷ್ಟ್ರನು ತನ್ನ ಮನಸ್ಸಿನಲ್ಲಿ ಬಹಳ ಹೆದರಿಕೊಂಡನು. ಆದರೂ ಅವನು ಹೊರಗೆ ತೋರಿಕೆಯಗೋಸ್ಕರ ಪಾಂಡ ವರು ಜೀವಂತವಿರುವ ಬಗ್ಗೆ ಬಹಳ ಆನಂದ ಪ್ರದರ್ಶನ ಮಾಡಿ, ಶ್ರೀಕೃಷ್ಣ ಸಹ ವರ್ತಮಾನ ಪಾಂಡವರನ್ನೂ ಕುಂತಿಯನ್ನೂ ಕರಕೊಂಡು ಬರಲಿಕ್ಕೆ ವಿದುರನನ್ನು ಕಳುಹಿಸಿಕೊಟ್ಟನು. ಆ ಪ್ರಕಾರ ವಿದುರನು ಹೋಗಿ ಅವರೆಲ್ಲರ ನ್ನು ಕರಕೊಂಡು ಬಂದ ಬಳಿಕ ಧೃತರಾಷ್ಟ್ರನು ಪಾಂಡವರಿಗೂ ದುರ್ಯೋಧ ನನಿಗೂ ಸಮಾಧಾನ ಹೇಳಿ **ಸರ್ವನಾಶೆ ಸಮುತ್ಪನ್ನೆ ಅರ್ಧಂ ತ್ಯಜತಿ ಪಂಡಿತಃ** ಎಂಬ ನ್ಯಾಯದಂತೆ ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಟ್ಟನು. ಇದರಲ್ಲಿಯೂ ಧೃತರಾಷ್ಟ್ರನು ತನ್ನ ಲೋಭವನ್ನು ಅಥವಾ ಕಪಟವನ್ನು ಬಿಡ

ಲಿಲ್ಲ. ಹಸ್ತಿನಾಪುರದೊಳಗೆ ಯಮುನಾನದಿಯ ತೀರದಲ್ಲಿ ಅಡವಿಯಿಂದ ತುಂಬಿದ್ದ ಕೆಟ್ಟ ಪ್ರದೇಶವನ್ನು ಪಾಂಡವರಿಗೆ ಕೊಟ್ಟು ಗಂಗಾನದಿಯ ತೀರ ದಲ್ಲಿದ್ದ ಫಲವತ್ತಾದ ಪ್ರದೇಶವನ್ನು ದುರ್ಯೋಧನನಿಗಾಗಿ ಇಟ್ಟುಕೊಂ ಡನು. ಆದರೂ ಶಾಂತತಾಪ್ರಿಯರಾದ ಪಾಂಡವರು ಒಡಂಬಟ್ಟು ಶ್ರೀಕೃಷ್ಣನ ಉಪದೇಶದ ಮೇರೆಗೆ ಖಾಂಡವಪ್ರಸ್ಥದ ಸಮೀಪದಲ್ಲಿ ಇಂದ್ರಪ್ರಸ್ಥವೆಂಬ ಹೊಸ ನಗರವನ್ನು ಸ್ಥಾಪಿಸಿಕೊಂಡು ನ್ಯಾಯ ನೀತಿಯಿಂದ ತಮ್ಮ ರಾಜ್ಯಕಾರಭಾರ ವನ್ನು ಮಾಡಹತ್ತಿದರು. ಆದುದರಿಂದ ಸ್ವಲ್ಪ ದಿವಸಗಳಲ್ಲಿಯೇ ಪಾಂಡವರ ರಾಜ್ಯವು ಉತ್ಕರ್ಷಕ್ಕೆ ಬಂದಿತು. ಈ ಪ್ರಕಾರ ಶ್ರೀಕೃಷ್ಣನು ಪಾಂಡವರ ರಾಜ್ಯದ ವ್ಯವಸ್ಥೆಯನ್ನು ಮಾಡಿ ಮುಗಿಸಿ ದ್ವಾರಕೆಗೆ ತಿರುಗಿ ಬಂದನು. ಆ ದಿವಸದಿಂದ ಪಾಂಡವರ ಪ್ರೇಮವು ಶ್ರೀಕೃಷ್ಣನ ಮೇಲೆ ಹೆಚ್ಚಾಯಿತು. ಶ್ರೀಕೃಷ್ಣನು ತನ್ನ ಅತುಲ ಪರಾಕ್ರಮದಿಂದಲೂ, ಲೋಕೋತ್ತರ ಬುದ್ಧಿ ಸಾಮರ್ಥ್ಯದಿಂದಲೂ ಯಾವತ್ತು ದೇಶದ ಜನರಿಗೆ ಬಹಳ ಪ್ರಿಯನಾಗಿದ್ದನು. ಅವನು ಪ್ರತ್ಯಕ್ಷ ವಿಷ್ಣುವಿನ ಅವತಾರವೆಂತಲೇ ತಿಳಿದು ಅವರು ಅವನ ಮೇಲೆ ಭಕ್ತಿಯನ್ನಿಟ್ಟು ನಡೆಯುತ್ತಿದ್ದರು. ಪಾಂಡವರಾದರೂ ಅದೇ ಪ್ರಕಾರ ನಡೆದ ರೆಂಬುದನ್ನು ಬೇರೆ ಹೇಳುವ ಕಾರಣವಿಲ್ಲ. ಶ್ರೀಕೃಷ್ಣನು ಅರ್ಜುನನ ಪರಾ ಕ್ರಮವನ್ನೂ, ಸೌಜನ್ಯವನ್ನೂ, ತನ್ನ ಮೇಲಿನ ನಿಸ್ಸೀಮ ಭಕ್ತಿಯನ್ನೂ ಕಂಡು ಅವನ ಮೇಲೆ ಬಹಳ ಪ್ರೇಮ ಮಾಡುತ್ತಿದ್ದನು. ಆದುದರಿಂದ ಅವ ರಿಬ್ಬರೊಳಗೆ ಬಹಳ ಸ್ನೇಹವುಂಟಾಗಿ ಅವರಿಬ್ಬರೂ ನರನಾರಾಯಣರಂತೆ ಕೂಡಿ ನಡೆದರು. ಅರ್ಜುನನು ಶ್ರೀಕೃಷ್ಣನ ಶಿಷ್ಯನಾಗಿ ವರ್ತಿಸುತ್ತಿದ್ದನು. ಇತರ ಪಾಂಡವರೂ ಶ್ರೀಕೃಷ್ಣನ ಮೇಲೆ ಬಹಳ ಪ್ರೇಮ ಮಾಡುತ್ತಿದ್ದರು. ಧರ್ಮರಾಜನು ತನ್ನ ರಾಜ್ಯಕಾರಭಾರದ ಪ್ರತಿಯೊಂದು ಕೆಲಸದಲ್ಲಿ ಅವನನ್ನು ಕೇಳಿಕೊಳ್ಳುತ್ತಿದ್ದನು. ದ್ರೌಪದಿಯಾದರೂ ಶ್ರೀಕೃಷ್ಣನ ಮೇಲೆ ವಿಶೇಷವಾದ ಪ್ರೇಮವನ್ನು ಅಥವಾ ಭಕ್ತಿಯನ್ನು ಮಾಡುತ್ತಿದ್ದಳು. ದ್ರೌಪದಿಯ ಸ್ವಯಂವ ರವು ಆದ ದಿವಸದಿಂದಲೇ ಶ್ರೀಕೃಷ್ಣನು ಅವಳನ್ನು ತನ್ನ ತಂಗಿಯಕಿಂತಲು ಹೆಚ್ಚಾಗಿ ನೋಡುತ್ತಿದ್ದನು. ಈ ಪ್ರಕಾರ ಶ್ರೀಕೃಷ್ಣನ ಮೇಲೆ ಯಾವತ್ತು ಪಾಂಡವ ಮನೆತನದವರ ಭಕ್ತಿಯು ಇದ್ದು ಅದು ದಿವಸ ದಿವಸಕ್ಕೆ ಶುಕ್ಲ ಪಕ್ಷದ ಚಂದ್ರನಂತೆ ವೃದ್ಧಿಂಗತವಾಯಿತು.

ದ್ರೌಪದಿಯ ಸ್ವಯಂವರದ ಕಾಲಕ್ಕೆ ಅರ್ಜುನನು ೨೬ ಅಥವಾ ೨೭ ವರ್ಷದವನಿದ್ದನು. ಆ ಸ್ವಯುಂವರವಾದ ಎರಡು ವರ್ಷಗಳ ತರುವಾಯ ಅಂದರೆ ಕ್ರಿಸ್ತಶಕದ ಮುಂಚೆ ೩೧೪೦ ನೇ ವರ್ಷ ಇಂದ್ರಪ್ರಸ್ಥ ನಗರವು ಸ್ಥಾಪನವಾಯಿತು. ( ಇದೇ ನಗರವು ಅರ್ವಾಚೀನ ಕಾಲದಲ್ಲಿ ದಿಲ್ಲಿಯೆಂದು ಪ್ರಸಿದ್ಧವಿರುತ್ತದೆ. ) ಈ ಇಂದ್ರಪ್ರಸ್ಥ ನಗರದಲ್ಲಿ ಐದು ಮಂದಿ ಪಾಂಡವರು ತಮ್ಮ ಪ್ರಿಯ ಭಾರ್ಯೆಯನ್ನು ಕೂಡಿಕೊಂಡು ಸುಖದಿಂದ ರಾಜ್ಯಭಾರವನ್ನು ಮಾಡುತ್ತಿದ್ದಾಗ್ಗೆ ಒಂದು ದಿವಸ ಅರ್ಜುನನು ಒಬ್ಬ ಬ್ರಾಹ್ಮಣನ ಯಜ್ಞಕಾರ್ಯವನ್ನು ಸಂರಕ್ಷಿಸುವ ಸಲುವಾಗಿ ತನ್ನ ಧನುಷ್ಯವನ್ನು ತರಲಿಕ್ಕೆ ಧರ್ಮರಾಜನೂ ದ್ರೌಪದಿಯೂ ಕುಳಿತಂಥ ಏಕಾಂತ ಸ್ಥಳಕ್ಕೆ ಹೋಗಬೇಕಾಯಿತು. ಆ ಮುಂಚಿತವಾಗಿ ಆ ಐದೂ ಮಂದಿ ಅಣ್ಣ ತಮ್ಮಂದಿರು ತಮ್ಮ ಭಾರ್ಯೆಯ ಸಂಬಂಧವಾಗಿ ತಮ್ಮ ತಮ್ಮೊಳಗೆ ಮನಸ್ತಾಪವಾಗಬಾರದೆಂದು ಅವಳ ಕೂಡ ಒಬ್ಬರು ಏಕಾಂತದಲ್ಲಿ ಇರುವಾಗ್ಗೆ ಅಲ್ಲಿ ಇನ್ನೊಬ್ಬರು ಹೋಗಬಾರದೆಂದು ನೇಮವನ್ನು ಮಾಡಿಕೊಂಡಿದ್ದರು. ಆ ನೇಮದ ವಿರುದ್ಧವಾಗಿ ಅರ್ಜುನನು ಹೋದ ಕಾರಣ ಅವನು ತನ್ನ ಅಪರಾಧದ ಪ್ರಾಯಶ್ಚಿತ್ತಕ್ಕಾಗಿ ಹನ್ನೆರಡು ವರ್ಷ ತೀರ್ಥಯಾತ್ರೆಗೆ ಹೋದನು. ಅವನು ತೀರ್ಥಯಾತ್ರೆಗೆ ಹೋಗುವ ಕಾಲಕ್ಕೆ ಸುಮಾರು ೩೬ ವರ್ಷದವನಿದ್ದನು. ಆ ತೀರ್ಥಯಾತ್ರೆಯು ಮುಗಿಯುತ್ತ ಬಂದಾಗ್ಗೆ ಅವನು ದ್ವಾರಕೆಯ ಸಮೀಪದಲ್ಲಿದ್ದ ಸೋಮನಾಥ ಮತ್ತು ಪ್ರಭಾಸ ಪಟ್ಟಣಗಳ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಶ್ರೀಕೃಷ್ಣನನ್ನು ಕಾಣಲಿಕ್ಕೆ ದ್ವಾರಕೆಗೆ ಬಂದನು. ಆಗ ಶ್ರೀಕೃಷ್ಣನು ಅರ್ಜುನನ ಸನ್ಮಾನಕ್ಕೋಸ್ಕರ ರೈವತ ಪರ್ವತದ ಮೇಲೆ ಒಂದು ದೊಡ್ಡ ಉತ್ಸವವನ್ನು ಮಾಡಿಸಿದನು. ಆ ಉತ್ಸವದಲ್ಲಿ ಶ್ರೀಕೃಷ್ಣನು ಸುಭದ್ರೆಯನ್ನು ನೋಡಿ ಅವಳ ಮೇಲೆ ಮೋಹಿತನಾದನು. ಸುಭದ್ರೆಯು ರೋಹಿಣಿಯ ಕೊನೆಯ ಮಗಳು ಇದ್ದು ಬಲರಾಮನ ಒಡಹುಟ್ಟಿದ ತಂಗಿಯು ಅಂದರೆ ಶ್ರೀಕೃಷ್ಣನ ಮಲತಂಗಿಯು ಇದ್ದಳು. ಅವಳು ಈ ಉತ್ಸವದ ಕಾಲಕ್ಕೆ ಹದಿನಾರು ಹದಿನೇಳು ವರ್ಷದವಳಿದ್ದು ಅವಳನ್ನು ದುರ್ಯೋಧನನಿಗೆ ಲಗ್ನ ಮಾಡಿಕೊಡಬೇಕೆಂದು ಬಲರಾಮನು ಯತ್ನವನ್ನು ನಡೆಸಿದ್ದನು. ಅರ್ಜುನನ ಮನಸ್ಸು ಸುಭದ್ರೆಯ

ಮೇಲೂ, ಸುಭದ್ರೆಯ ಮನಸ್ಸು ಅರ್ಜುನನ ಮೇಲೂ ಇರುವದನ್ನು ಶ್ರೀಕೃಷ್ಣನು ಮನಗಂಡು ಅರ್ಜುನನಿಗೆ ಸುಭದ್ರೆಯನ್ನು ತೆಗೆದುಕೊಂಡು ಹೋಗುವದಕ್ಕಾಗಿ ತಿಳುಹಿಸಿದನು. ಆ ಪ್ರಕಾರ ಅರ್ಜುನನು ಸುಭದ್ರೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ತನ್ನ ದೇಶದ ಕಡೆಗೆ ನಡೆದಿರಲಾಗಿ ಬಲರಾಮನು ಅವನ ಮೇಲೆ ಸಾಗಿ ಹೋಗುವದಕ್ಕಾಗಿ ತನ್ನ ಯಾವತ್ತು ಯಾದವ ಸೈನ್ಯದವರಿಗೆ ಅಪ್ಪಣೆಯನ್ನು ಮಾಡಿದನು. ಆದರೆ ಶ್ರೀಕೃಷ್ಣನು ಅವರ ಸಂಗಡ ಹೊರಡಲಿಲ್ಲ. ಆಗ ಬಲರಾಮನು ಶ್ರೀಕೃಷ್ಣನ ಬಾಯಿಂದ ಅದರ ನಿಜವಾದ ಗುಟ್ಟನ್ನು ತಿಳಿದುಕೊಂಡು ಸುಭದ್ರೆಯೊಂದಿಗೆ ದ್ವಾರಕೆಗೆ ತಿರುಗಿ ಬರುವದಕ್ಕಾಗಿ ಅರ್ಜುನನಿಗೆ ಹೇಳಿ ಕಳುಹಿಸಿದನು. ಆ ಪ್ರಕಾರ ಅರ್ಜುನನು ಅಲ್ಲಿಗೆ ತಿರುಗಿ ಹೋಗಲಾಗಿ ಬಲರಾಮನು ಅವರ ಲಗ್ನವನ್ನು ಒಳ್ಳೇ ಸಮಾರಂಭದಿಂದ ಮಾಡಿದನು.

ಈ ಪ್ರಕಾರ ಶ್ರೀಕೃಷ್ಣನದೂ ದುರ್ಯೋಧನದೂ ಆಪ್ತತ್ವವಾಗುವದು ತಪ್ಪಿದಾಗ್ಯೂ ಅದು ಅನ್ಯ ರೀತಿಯಿಂದ ಬೇಗನೆ ಉಂಟಾಯಿತು. ಅದು ಹೇಗೆಂದರೆ:—ಶ್ರೀಕೃಷ್ಣನಿಗೆ ಜಾಂಬವತಿಯು ಹೊಟ್ಟೆಯಿಂದ ಸಾಂಬನೆಂಬ ಮಗನಿದ್ದನು. ಅವನು ದೊಡ್ಡ ಪರಾಕ್ರಮಿಯು ಇದ್ದು ಬಲರಾಮನ ಹತ್ತರ ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿತು ನಿಪುಣನಾಗಿದ್ದನು. ಅವನು ಹಸ್ತಿನಾಪುರಕ್ಕೆ ಹೋಗಿ ಸ್ವಯಂವರಕ್ಕೆ ಯೋಗ್ಯಳಾದ ಲಕ್ಷ್ಮಣಾ ಎಂಬ ದುರ್ಯೋಧನನ ಮಗಳನ್ನು ಕ್ಷತ್ರಿಯ ಪದ್ಧತಿಯ ಪ್ರಕಾರ ಬಲಾತ್ಕಾರದಿಂದ ತೆಗೆದುಕೊಂಡು ಬಂದನು. ಇದಕ್ಕಾಗಿ ದುರ್ಯೋಧನನು ಸಿಟ್ಟಾಗಿ ಕರ್ಣಾದಿ ತನ್ನ ಅನುಯಾಯಿಗಳನ್ನು ಕರಕೊಂಡು ಸಾಂಬನನ್ನು ಗೆದ್ದು ಅವನನ್ನು ಹಿಡಿದು ಕಾರಾಗೃಹದಲ್ಲಿಟ್ಟನು. ಈ ವರ್ತಮಾನವು ಬಲರಾಮನಿಗೆ ಗೊತ್ತಾದ ಕೂಡಲೆ ಬಲರಾಮನು ಶ್ರೀಕೃಷ್ಣನಿಗೆ—“ದುರ್ಯೋಧನನು ನನ್ನ ಶಿಷ್ಯನಿರುತ್ತಾನೆ. ಅವನು ನನ್ನ ಮಾತು ಎಂದೂ ಮೀರಲಿಕ್ಕಿಲ್ಲ. ನಾನು ಲಕ್ಷ್ಮಣೆಯನ್ನು ಸಾಂಬನಿಗೇ ಲಗ್ನಮಾಡಿಕೊಡುವಂತೆ ಅವನನ್ನು ಸಾಮೋಪಚಾರದಿಂದ ಒಡಂಬಡಿಸಿಕೊಂಡು ಬರುತ್ತೇನೆ. ನೀನು ಸ್ವಸ್ಥವಾಗಿರು” ಎಂದು ಹೇಳಿ ತಾನೊಬ್ಬನೇ ಕೌರವರ ಕಡೆಗೆ ಹೋದನು. ಬಲರಾಮನು ಬಂದ ಕೂಡಲೆ ಕೌರವರು ಅವನಿಗೆ ಯೋಗ್ಯ ಸತ್ಕಾರವನ್ನು ಮಾಡಿ ಅವನನ್ನು ಸಭೆಯಲ್ಲಿ ಕುಳ್ಳಿರಿಸಿ ಮಧುಪರ್ಕ

ದಿಂದ ಪೂಜೆಯನ್ನು ಮಾಡಿದರು. ಆದರೆ ಬಲರಾಮನು ಸಾಂಬನ ಲಗ್ನದ ಮಾತು ತೆಗೆದ ಕೂಡಲೆ ಆ ದುರಭಿಮಾನಿಯಾದ ದುರ್ಯೋಧನನು ಬಲರಾಮನಿಗೆ—“ ನೀವು ಯಾದವರೆಂದರೆ ಗೌಳಿಗರು. ನೀವು ರಾಜ್ಯದ ಅಧಿಕಾರಿಗಳಲ್ಲ. ನೀವು ಚಾಮರ, ವ್ಯಜನ, ಶಂಖ, ಶ್ವೇತಛತ್ರ, ಕಿರೀಟ, ಸಿಂಹಾಸನ, ಮತ್ತು ಶಯ್ಯಾ ಈ ರಾಜಚಿನ್ಹಗಳನ್ನು ನಮ್ಮ ಅನುಗ್ರಹದಿಂದ ಧಾರಣ ಮಾಡುತ್ತೀರಿ. ನಾವು ನಿಮಗೆ ನಮ್ಮ ಮಗಳನ್ನು ಎಂದೂ ಮದುವೆಮಾಡಿಕೊಡುವದಿಲ್ಲ” ಎಂದು ತಿರಸ್ಕಾರದಿಂದ ಮಾತಾಡಿದನು. ಅದಕ್ಕೆ ಬಲರಾಮನು—“ ನಾವು ರಾಜಚಿನ್ಹಗಳನ್ನು ನಿಮ್ಮ ಅನುಗ್ರಹದಿಂದ ಧರಿಸುವದಿಲ್ಲ. ಆದರೆ ಅವುಗಳನ್ನು ನಾವು ನಮ್ಮ ಪರಾಕ್ರಮದಿಂದ ಧರಿಸುತ್ತೇವೆ. ಇದರ ಅನುಭವವನ್ನು ನಾನು ನಿಮಗೆ ಈಗಲೇ ತಂದು ಕೊಡುತ್ತೇನೆ” ಎಂದು ಉತ್ತರ ಕೊಟ್ಟು ತತ್ಕಾಲವೇ ಹಸ್ತಿನಾಪುರದ ಹೊರಗೆ ಬಂದು ತನ್ನ ನೇಗಿಲದಿಂದ ಇಡೀ ಹಸ್ತಿನಾಪುರವನ್ನು ಮೀಟಲು, ಅದು ಡಬ್ಬಾಗಿ ಗಂಗಾನದಿಯಲ್ಲಿ ಈಗ ಬೀಳುತ್ತದೋ, ಇನ್ನೊಂದು ಗಳಿಗಿಗೆ ಬೀಳುತ್ತದೋ ಅನ್ನುವಂತೆ ಎಲ್ಲರಿಗೂ ಅಂಜಿಕೆಯಾಯಿತು. ಬಲರಾಮನ ಈ ಅದ್ಭುತ ಪರಾಕ್ರಮವನ್ನು ದುರ್ಯೋಧನಾದಿಗಳು ನೋಡಿ, ಬಲರಾಮನಿಗೆ ಶರಣು ಹೋಗಿ, ಸಾಂಬನನ್ನು ಬಂಧಮುಕ್ತ ಮಾಡಿ, ಅವನಿಗೆ ಲಕ್ಷ್ಮಣೆಯನ್ನು ಅರ್ಪಣ ಮಾಡಿದರು. ಈ ಪ್ರಕಾರ ಸಾಂಬ ಮತ್ತು ಲಕ್ಷ್ಮಣೆಯರ ಲಗ್ನ ಸಮಾರಂಭವು ಜೆಳೆದ ನಂತರ ಬಲರಾಮನು ಈ ಇಬ್ಬರನ್ನೂ ಕರಕೊಂಡು ದ್ವಾರಕೆಗೆ ಬಂದನು. ಇದನ್ನು ನೋಡಿ ಶ್ರೀಕೃಷ್ಣನಿಗೆ ಬಹಳ ಆನಂದವಾಯಿತು.

ಶ್ರೀಕೃಷ್ಣನು ಸುಭದ್ರೆಯ ಲಗ್ನವಾದ ಕೆಲವು ಅವಧಿಯ ನಂತರ ಸುಭದ್ರೆಯನ್ನು ತವರುಮನೆಗೆ ಕರೆದುತರುವದಕ್ಕಾಗಿ ಇಂದ್ರಪ್ರಸ್ಥ ನಗರಕ್ಕೆ ಹೋದನು. ಆಗ ಸುಭದ್ರೆಯು ಅಭಿಮನ್ಯುವಿನನ್ನು ಬಸುರಿದ್ದಳು. ಪಾಂಡವರು ವಾಡಿಕೆಯಂತೆ ಶ್ರೀಕೃಷ್ಣನನ್ನು ಸತ್ಕರಿಸಿದರು. ಯಾವಾಗಲು ಅರ್ಜುನನೂ ಶ್ರೀಕೃಷ್ಣನೂ ಏಕಾಂತದಲ್ಲಿ ಕುಳಿತು ಮಾತಾಡುವ ಸಾಂಪ್ರದಾಯವಿತ್ತು. ಆ ಪ್ರಕಾರ ಅವರಿಬ್ಬರು ಯಮುನಾನದಿಯ ದಂಡೆಯ ಮೇಲೆ ಏಕಾಂತದಲ್ಲಿ ಕುಳಿತು ಮಾತಾಡುವಾಗ್ಗೆ ಅಗ್ನಿಯು ಒಬ್ಬ ವಿಪ್ರನ ವೇಷವನ್ನು ತೆಗೆದುಕೊಂಡು ಬಂದು—“ ನನಗೆ ಹಸಿವೆಯು ಬಹಳ ಆಗಿರುತ್ತದೆ. ಈ ಖಾಂಡವ ಅರಣ್ಯ

ವನ್ನು ನನಗೆ ಕೊಟ್ಟು ನನ್ನ ಹಸಿವೆಯನ್ನು ಶಾಂತಮಾಡಿರಿ" ಎಂದು ಅವರಿಬ್ಬ ರಿಗೂ ಬೇಡಿಕೊಂಡನು. ಇಂದ್ರಪ್ರಸ್ಥದ ಪಶ್ಚಿಮಕ್ಕೆ ಖಾಂಡವ ಅರಣ್ಯವು ದಟ್ಟಾಗಿ ಬೆಳೆದಿತ್ತು. ಅದು ಇಂದ್ರನ ಸಂರಕ್ಷಣದ ಕೆಳಗೆ ಇದ್ದ ಕಾರಣ ಅಲ್ಲಿ ಯಾವಾಗಲು ಪರ್ಜನ್ಯವಾಗುತ್ತಿತ್ತು. ಆದುದರಿಂದ ಅದು ಎಂದೂ ಅಗ್ನಿ ಯ ಆಹಾರಕ್ಕೆ ದೊರಕುತ್ತಿದ್ದಿಲ್ಲ. ಈ ಅರಣ್ಯದಲ್ಲಿ ಅನೇಕ ಹಿಂಸಕ ಪಶುಗ ಳೂ, ಕಾಡು ಜನರೂ ಇದ್ದುದರಿಂದ ಇಂದ್ರಪ್ರಸ್ಥ ನಗರದ ಜನರಿಗೆ ಯಾವಾ ಗಲು ವಿಶೇಷ ಉಪದ್ರವವು ಆಗುತ್ತಿತ್ತು. ಆದುದರಿಂದ ಕೃಷ್ಣಾರ್ಜುನರು ವಿಚಾ ರಮಾಡಿ ಅಗ್ನಿಗೆ ಆ ಅರಣ್ಯವನ್ನು ದಾನ ಕೊಡಲಿಕ್ಕೆ ಒಪ್ಪಿಕೊಂಡು ತಾವು ಆ ಅರಣ್ಯದ ಎರಡೂ ಮಗ್ಗಲಿಗೆ ನಿಂತು ಅದಕ್ಕೆ ಬೆಂಕೀ ಹಚ್ಚಿದರು. ಅದರಿಂದ ಒಂದೂ ಜೀವಂತ ಪ್ರಾಣಿಗೆ ಅದರೊಳಗಿಂದ ತಪ್ಪಿಸಿಕೊಂಡು ಬರಲಿಕ್ಕೆ ಆಗಲಿಲ್ಲ. ಅಲ್ಲಿ ಇದ್ದ ಮಯಾಸುರನಿಗೆ ಮಾತ್ರ ಶ್ರೀಕೃಷ್ಣನು ಜೀವದಾನ ಕೊಟ್ಟು ಅವನಿಗೆ ಹೊರಗೆ ಹೋಗಗೊಟ್ಟನು. ತಕ್ಷಕನೆಂಬ ನಾಗಸರ್ಪವು ಮೊದಲೇ ಎರಡನೆ ಕಡೆಗೆ ಹೊರಟು ಹೋಗಿದ್ದರಿಂದ ಅದು ಬದುಕಿಕೊಂ ಡಿತು. ಅದರ ಬೆನ್ನಮೇಲೆ ಹುಟ್ಟಿದ್ದ ಅಶ್ವಸೇನ ಸರ್ಪವು ಯುಕ್ತಿಯಿಂದ ಹೊ ರಬಿದ್ದು ಹೋಯಿತು. ಈ ಎರಡೂ ಸರ್ಪಗಳು ಪಾಂಡವರ ಮತ್ತು ಅವರ ವಂಶಜರ ಕೂಡ ಕಡು ವೈರತ್ವವನ್ನು ಮಾಡಹತ್ತಿದವು. ಈ ಪ್ರಕಾರ ಖಾಂಡವ ಅರಣ್ಯವು ಸುಟ್ಟುಹೋದುದರಿಂದ ಅದರ ಸ್ಥಳದಲ್ಲಿ ಒಂದು ದೊಡ್ಡ ಪ್ರದೇಶವು ಪಾಂಡವ ರಾಜ್ಯದಲ್ಲಿರುವವರ ಜನವಸ್ತಿಗೂ ಒಕ್ಕಲತನಕ್ಕೂ ಸಿದ್ಧವಾಯಿತು. ಮಯಾಸುರನು ತನಗೆ ಜೀವದಾನವು ಸಿಕ್ಕಿದ್ದಕ್ಕಾಗಿ ಕೃತಜ್ಞತಾಬುದ್ಧಿಯಿಂದ ಪಾಂಡವರ ಸಲುವಾಗಿ ಇಂದ್ರಪ್ರಸ್ಥ ನಗರದೊಳಗೆ ಸ್ಫಟಿಕ ಶಿಲೆಗಳಿಂದಲೂ, ಸುವರ್ಣದಿಂದಲೂ, ವೈಢೂರ್ಯಮಣಿ ಮುಂತಾದ ರತ್ನಗಳಿಂದಲೂ ಕೂಡಿದ ಒಂದು ರಮಣೀಯವಾದ ಸಭಾಮಂದಿರವನ್ನು ಕಟ್ಟಿ ಕೊಟ್ಟನು. ಹಾಗೂ ಅದರ ಮುಂಭಾಗದಲ್ಲಿ ಸುವರ್ಣ ಕಮಲಗಳಿಂದ ಕೂಡಿದ ಒಂದು ಸರೋವ ರವನ್ನು ಸಹ ಮಾಡಿಕೊಟ್ಟನು. ಆ ಸಭಾಮಂದಿರವನ್ನು ಕಟ್ಟುವವರಿಗಾಗಿ ಅವನು ನಾನಾಪ್ರಕಾರದ ಕಲಾ ಕೌಶಲ್ಯವನ್ನು ಉಪಯೋಗಿಸಿ, ನೀರು ಇರು ವದನ್ನು ಭೂಮಿಯೆಂದು ತೋರುವಂತೆಯೂ, ಭೂಮಿಯು ಇರುವದನ್ನು

ನೀರೆಂದು ತೋರುವಂತೆಯೂ, ಬಾಗಿಲು ಇರುವದನ್ನು ಗೋಡಿಯಂತೆ ತೋರುವಂತೆಯೂ, ಗೋಡಿ ಇರುವದನ್ನು ಬಾಗಿಲದಂತೆ ತೋರುವಂತೆಯೂ ಮಾಡಿದನು. ಈ ಪ್ರಕಾರ ಮಯಾಸುರನು ಅಲ್ಲಿ ಅನೇಕಾನೇಕ ಚಮತ್ಕಾರಗಳನ್ನು ಮಾಡಿದ್ದರಿಂದ ಅದನ್ನು ನೋಡುವವರಿಗೆ ದಿಕ್ಕು ತಪ್ಪಿ ಹೋಗಿ ಅವರ ಕಣ್ಣಿಗೆ ಭ್ರಾಂತಿಯೂ, ಮನಸ್ಸಿಗೆ ಆಹ್ಲಾದವೂ ಏಕಕಾಲಕ್ಕೆ ಉಂಟಾಗುತ್ತಿದ್ದವು.

ಈ ಪ್ರಕಾರ ಶ್ರೀಕೃಷ್ಣನು ತನ್ನ ಮಧ್ಯಮ ಕಾಲದ ಸಂಪೂರ್ಣ ದಿವಸಗಳನ್ನು ದ್ವಾರಕೆಯಲ್ಲಿ ಕಳೆದನು. ಅವನು ಮುಂಜಾವಿನಲ್ಲಿ ಎದ್ದು ತನ್ನ ಕಣ್ಣಿಗೆ ನೀರು ಹಚ್ಚಿಕೊಂಡು ಪರಮಾತ್ಮನ ಧ್ಯಾನವನ್ನು ಮಾಡಿ, ಆ ಬಳಿಕ ನಿತ್ಯ ವಿಧಿಯನ್ನು ಮುಗಿಸಿ, ಸ್ನಾನ ಸಂಧ್ಯಾದಿಗಳನ್ನು ಮಾಡಿಕೊಂಡು, ಅಗ್ನಿಗೆ ಹೋಮವನ್ನು ಅರ್ಪಿಸಿ, ಗಾಯತ್ರಿ ಮಂತ್ರವನ್ನು ಜಪಿಸುತ್ತಿದ್ದನು. ಆ ಬಳಿಕ ಅವನು ಸೂರ್ಯನಾರಾಯಣನಿಗೆ ನಮಸ್ಕಾರಗಳನ್ನು ಹಾಕಿ, ದೇವರಿಗೂ ಪಿತೃಗಳಿಗೂ ಋಷಿಗಳಿಗೂ ತರ್ಪಣವನ್ನು ಕೊಡುತ್ತಿದ್ದನು. ಇಷ್ಟಾದ ಬಳಿಕ ಅವನು ದೇವ ಬ್ರಾಹ್ಮಣರ, ಮತ್ತು ವೃದ್ಧ ಪುರುಷರ ದರ್ಶನವನ್ನು ತೆಗೆದುಕೊಂಡು ಅವರ ಪೂಜೆಯನ್ನೂ, ಸೇವೆಯನ್ನೂ ಮಾಡುತ್ತಿದ್ದನು. ಅವನು ದಿನಾಲು ವಿಪ್ರರಿಗೆ ಆಕಳುಗಳನ್ನು ದಾನ ಮಾಡುತ್ತಿದ್ದನು. ಅವನು ಆ ದಾನ ಮಾಡಿದ ಆಕಳುಗಳ ಕೊಂಬಿಗೆ ಬಂಗಾರವನ್ನು ಕಟ್ಟಿ ಅವುಗಳು ಕೊಳಗಗಳಿಗೆ ಬೆಳ್ಳಿಯ ಮಡಾಸವನ್ನು ಮಾಡಿಸಿರುತ್ತಿದ್ದನು. ಈ ಪ್ರಕಾರ ಮಾಡಿದ ಮೇಲೆ ಅವನು ತನಗೆ ಗಂಧಲೇಪನವನ್ನೂ ವಸ್ತ್ರಭೂಷಣಗಳನ್ನೂ ಮಾಡಿಕೊಂಡು, ತುಪ್ಪದಲ್ಲಿ ಅಥವಾ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡು, ಹೊರಗೆ ಬಂದು ವಿಪ್ರರ ಕಡೆಯಿಂದಲೂ, ಊರ ಜನರ ಕಡೆಯಿಂದಲೂ, ಸೇವಕರ ಕಡೆಯಿಂದಲೂ, ಅಂತಃಪುರದ ಜನರ ಕಡೆಯಿಂದಲೂ ತನಗೆ ತಿಳುಹಿಸತಕ್ಕದ್ದನ್ನು ಕೇಳಿಕೊಂಡು, ಅಥವಾ ಅವರಿಗೆ ಕೊಡತಕ್ಕದ್ದನ್ನು ಕೊಟ್ಟು, ಮಿತ್ರರ, ಪಾರಪತ್ಯಗಾರರ, ಮತ್ತು ಸ್ತ್ರೀಯರ ಸಂಗಡ ಮಾತಾಡಿ ತನ್ನ ಕಡೆಗೆ ಬಂದಂಥ ಯಾಚಕರಿಗೆ ಸನ್ಮಾನ ಮಾಡಿ ಕಳುಹಿಸುತ್ತಿದ್ದನು. ಆ ಬಳಿಕ ಅವನು ತನ್ನ ಸಾರಥಿಯು ತನ್ನ ಮಂದಿರದ ಬಾಗಿಲಕ್ಕೆ ನಾಲ್ಕು ಸುಂದ

ಕುದುರೆಗಳನ್ನು ಹೂಡಿ ನಿಲ್ಲಿಸಿದಂಥ ಸುಂದರ ರಥದಲ್ಲಿ ಸಾತ್ಯಕಿ ಅಥವಾ ಉದ್ಧವನನ್ನು ಕೈಹಿಡಿದು ಕುಳ್ಳಿರಿಸಿಕೊಂಡು ಯಾದವ ಸಭೆಗೆ ಹೋಗುತ್ತಿದ್ದನು. ಆ ಸಭೆಯಲ್ಲಿ ಕೆಲವು ಹೊತ್ತು ನೃತ್ಯ ಗಾಯನಾದಿಗಳು ನಡೆದ ನಂತರ ಯಾದವರ ಸಂಗಡ ರಾಜಕೀಯ ಕೆಲಸಗಳ ಸಂಬಂಧವಾಗಿ ಮಾತಾಡಿ, ಎಲ್ಲರ ಕೂಡ ನಕ್ಕು ಕೆಲೆದು, ವಿನಯಪೂರ್ಣ ಭಾಷಣವನ್ನು ಮಾಡಿ, ಮಧ್ಯಾಹ್ನದ ಎರಡು ಗಂಟೆಯಾದ ಬಳಿಕ ತನ್ನ ಮಂದಿರಕ್ಕೆ ತಿರುಗಿ ಬರುತ್ತಿದ್ದನು. ಆಮೇಲೆ ಭೋಜನವನ್ನು ಮುಗಿಸಿಕೊಂಡು ಕೆಲವು ಹೊತ್ತು ವಿಶ್ರಾಂತಿಯನ್ನು ಹೊಂದಿ ಉದ್ಧವನ ಸಂಗಡ ಅಥವಾ ಯಾವಳೊಬ್ಬ ಪ್ರಿಯ ಪತ್ನಿಯ ಸಂಗಡ ಪಗಡಿಯ ಆಟವನ್ನು ಆಡುತ್ತಿದ್ದನು. ಸಾಯಂಕಾಲಕ್ಕೆ ಅವನು ಬೇರೆ ಬೇರೆ ಪ್ರಕಾರದ ಶಸ್ತ್ರ ವಿದ್ಯೆಗಳ ವ್ಯಾಯಾಮವನ್ನು ಮಾಡಿಕೊಂಡು, ಸಾಯಂಕಾಲದಲ್ಲಿ ಸಂಧ್ಯಾ ಮಾಡುವ ಹೊತ್ತು ಆದ ಕೂಡಲೆ ತನ್ನ ಮಂದಿರಕ್ಕೆ ಬಂದು ತನ್ನ ಸಂಧ್ಯಾದಿ ಕರ್ಮಗಳನ್ನು ತೀರಿಸಿಕೊಂಡು, ಭೋಜನೋತ್ತರದಲ್ಲಿ ಪ್ರಮುಖರಾದ ದ್ವಿಜರ ಸಂಭಾಷಣ ಮಾಡಿ, ಇತಿಹಾಸ ಪುರಾಣಗಳನ್ನು ಕೇಳುತ್ತಿದ್ದನು. ಆಮೇಲೆ ಯುದ್ಧವನ್ನು ಅಥವಾ ಒಪ್ಪಂದವನ್ನು ಕುರಿತು ಬಲರಾಮನ ಸಂಗಡ, ಹಾಗೂ ಧರ್ಮಾರ್ಥ ಕೆಲಸಗಳನ್ನು ಕುರಿತು ತನ್ನ ಪಾರಪತ್ಯಗಾರರ ಮತ್ತು ಸ್ತ್ರೀಯರ ಸಂಗಡ ಮಾತಾಡುತ್ತಿದ್ದನು. ಇದಲ್ಲದೆ ಮಕ್ಕಳ ಮದುವೆ, ಮುಂಜಿ, ಯಜ್ಞ, ವ್ರತ ಮುಂತಾದುದರ ವ್ಯವಸ್ಥೆಯನ್ನು ಸಹ ಮಾಡುತ್ತಿದ್ದನು. ಆಮೇಲೆ ಅವನು ಎರಡನೆ ಪ್ರಹರದಲ್ಲಿ ಮಲಗಲಿಕ್ಕೆ ಹೋಗುತ್ತಿದ್ದನು. ಈ ಪ್ರಕಾರ ಶ್ರೀಕೃಷ್ಣನು ನಿತ್ಯದಲ್ಲಿ ಸುವ್ಯವಸ್ಥಿತ ರೀತಿಯಿಂದ ಗೃಹಸ್ಥಾಶ್ರಮದ ಸದ್ಧರ್ಮವನ್ನು ಪಾಲಿಸುತ್ತ ಸುಖವನ್ನು ಅನುಭವಿಸಿದನು. ಹಾಗೂ ತಾನು ೬೬-೬೭ ವರ್ಷದವನಾಗುವ ತನಕ ಜನರಿಗೆ ತನ್ನ ವರ್ತನದ ಉಚ್ಚ ಪಾಠವನ್ನು ಕಲಿಸುತ್ತ ದ್ವಾರಕೆಯಲ್ಲಿ ತನ್ನ ದಿವಸಗಳನ್ನು ವಿನಿಯೋಗಿಸಿದನು.

# ೪. ರಾಜಸೂಯಪರ್ವ.

**ಪರಿತ್ರಾಣಾಯ ಸಾಧುನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೧॥**

( ಭಗವದ್ಗೀತಾ )

ಅರ್ಥ—ಶಿಷ್ಟರನ್ನು ಸಂರಕ್ಷಣಮಾಡುವದಕ್ಕೂ, ದುಷ್ಟರನ್ನು ಸಂಹರಿಸುವದಕ್ಕೂ, ಧರ್ಮವನ್ನು ಸಂಸ್ಥಾಪನ ಮಾಡುವದಕ್ಕೂ ನಾನು ಪ್ರತಿಯೊಂದು ಯುಗದಲ್ಲಿಯೂ ಅವತಾರವನ್ನು ತೆಗೆದುಕೊಳ್ಳುತ್ತೇನೆ.

ಮೇಲಿನ ವಚನದಲ್ಲಿ ಹೇಳಿದಂತೆ ಭಗವಂತನು ತನ್ನ ಅವತಾರ ಕೃತ್ಯಗಳನ್ನು ಈಡೇರಿಸುವ ಸಮಯವು ಮೆಲ್ಲಮೆಲ್ಲನೆ ಸಮೀಪಿಸಿತು. ಪೃಥ್ವಿಯು ತನ್ನ ಮೇಲಿನ ಉನ್ಮತ್ತ ಕ್ಷತ್ರಿಯರ ಭಾರವನ್ನು ಕಡಿಮೆಮಾಡಬೇಕೆಂದು ಶ್ರೀವಿಷ್ಣುವಿನನ್ನು ಮೊದಲಿಗೆ ಪ್ರಾರ್ಥಿಸಿದ ಪ್ರಕಾರ ಅವರ ವಿನಾಶದ ಸಲುವಾಗಿ ಅವರ ಕೈಯಿಂದಲೇ ಅನೇಕ ಪಾಪಕೃತ್ಯಗಳು ಘಟಿಸಲಿಕ್ಕೆ ಹತ್ತಿದವು. ಯಾದವರು ಶ್ರೀಕೃಷ್ಣನನ್ನೊಡಗೊಂಡು ಮಥುರೆಯನ್ನು ಬಿಟ್ಟು ಹೋದಂದಿನಿಂದ ಜರಾಸಂಧನಿಗೆ ಮಧ್ಯದೇಶದಲ್ಲಿ ಯಾರೂ ಶತ್ರುಗಳು ಉಳಿಯಲಿಲ್ಲ. ಆದುದರಿಂದ ಅವನು ನೂರಾರು ರಾಜರನ್ನು ಕಾರಾಗೃಹದಲ್ಲಿಟ್ಟು ಅವರನ್ನು ಯಜ್ಞದಲ್ಲಿ ಬಲಿ ಕೊಡುವ ವಿಚಾರವನ್ನು ನಡೆಯಿಸಿದನು. ಈ ಶೋಚನೀಯ ಸ್ಥಿತಿಯನ್ನು ನೋಡಿ ಎಷ್ಟೋ ಮಂದಿ ರಾಜರು ದ್ವಾರಕೆಗೆ ಬಂದು ಶ್ರೀಕೃಷ್ಣನ ಮುಂದೆ ಮೊರೆ ಇಟ್ಟರು. ಆ ಮೇಲೆ ಶ್ರೀಕೃಷ್ಣನು ಜರಾಸಂಧನನ್ನು ಹೇಗೆ ಬಗ್ಗುಬಡಿಯಬೇಕೆಂದು ವಿಚಾರ ಮಾಡುವದಕ್ಕಾಗಿ ಯಾದವರ ಸಭೆಯನ್ನು ಕೂಡಿಸಿ ಅವರ ಕೂಡ ಆಲೋಚನೆ ಮಾಡುತ್ತ ಕುಳಿತಿರಲು, ಅವನನ್ನು ಕರೆಯಲಿಕ್ಕೆ ಇಂದ್ರಪ್ರಸ್ಥ ನಗರದಿಂದ ಧರ್ಮರಾಜನ ಒಬ್ಬ ದೂತನು ಬಂದನು. ಶ್ರೀಕೃಷ್ಣನು ಪಾಂಡವರಿಗಾಗಿ ಮಯಾಸುರನು ಕಟ್ಟಿಕೊಟ್ಟ ದಿವ್ಯವಾದ ಸಭಾಮಂದಿರದ ಪ್ರತಿಷ್ಠಾಪನ ಸಮಾರಂಭಕ್ಕೆ ಹೋಗಿ ಈಗೀಗ ತಿರುಗಿ ಬಂದಿದ್ದನು. ಆದುದರಿಂದ ಅವನಿಗೆ ತನ್ನನ್ನು ಇಷ್ಟು ತೀವ್ರವಾಗಿ

ಧರ್ಮರಾಜನು ಕರೆಯಿಸಿದ್ದಕ್ಕಾಗಿ ಬಹಳ ಆಶ್ಚರ್ಯವೆನಿಸಿತು. ಆ ಕಾರಣ ಅವನು ಅವಸರದಿಂದ ಆ ಸಭೆಯ ಕೆಲಸವನ್ನು ಮುಗಿಸಿಕೊಂಡು ತನ್ನ ಮೂರು ಮಂದಿ ಹೆಂಡಂದಿರಿಗೆ ಇಂದ್ರಪ್ರಸ್ಥ ನಗರವನ್ನು-ವಿಶೇಷವಾಗಿ ಮಯಾಸುರನು ಕಟ್ಟಿದ ಪಾಂಡವರ ಸಭಾಮಂದಿರವನ್ನು-ತೋರಿಸಬೇಕೆಂದು ಅವರನ್ನು ತನ್ನ ಸಂಗಡ ಕರಕೊಂಡು ತ್ವರೆಯಿಂದ ಹೊರಟನು. ಅವನು ದ್ವಾರಕೆಯಿಂದ ಹೊರಟನಂತರ ಆನರ್ತ, ಸೌವೀರ, ಮರು ಈ ಮೂರು ದೇಶಗಳನ್ನು ದಾಟಿ, ವಿನಶನ ತೀರ್ಥದ ಮೇಲಿಂದ ಅಲ್ಲಲ್ಲಿ ದಾರಿಯೊಳಗೆ ಹತ್ತಿದ ಸಣ್ಣ ಸಣ್ಣ ನದಿಗಳನ್ನೂ ಊರುಗಳನ್ನೂ ನೋಡಲಿಕ್ಕೆ ವೇಳೆ ಕಳೆಯದೆ, ದೃಷದ್ವತಿ ಮತ್ತು ಸರಸ್ವತಿ ಈ ಎರಡು ದೊಡ್ಡ ನದಿಗಳನ್ನು ಇಳಿದು, ಮತ್ಸ್ಯ ದೇಶದೊಳಗಿಂದ ಇಂದ್ರಪ್ರಸ್ಥ ನಗರಕ್ಕೆ ಬಂದು ಮುಟ್ಟಿದನು. ಶ್ರೀಕೃಷ್ಣನು ತನ್ನ ಯಾವತ್ತು ಹೆಂಡಂದಿರನ್ನು ಕರಕೊಂಡು ಬರುತ್ತಾನೆಂಬ ಆನಂದದ ವರ್ತಮಾನವು ಧರ್ಮರಾಜನಿಗೆ ಮುಟ್ಟಲಾಗಿ ಧರ್ಮರಾಜನು ಅವನನ್ನು ಸ್ವಾಗತ ಮಾಡಿ ಕರೆದು ತರುವದಕ್ಕಾಗಿ ತನ್ನ ಯಾವತ್ತು ತಮ್ಮಂದಿರನ್ನು ಕೂಡಿಕೊಂಡು ರಾಜವೈಭವದಿಂದ ನಗರದ ಹೊರಗೆ ಹೋಗಿ ಅವನನ್ನು ಇದಿರುಗೊಂಡನು. ಧರ್ಮರಾಜನು ಶ್ರೀಕೃಷ್ಣನನ್ನು ನೋಡಿದ ಕೂಡಲೆ ಅವನಿಗೆ ಪ್ರೇಮಾಲಿಂಗನವನ್ನು ಕೊಟ್ಟ ನಂತರ ಇತರ ಪಾಂಡವರು ಶ್ರೀಕೃಷ್ಣನ ಚರಣಗಳ ಮೇಲೆ ತಮ್ಮ ಮಸ್ತಕವನ್ನಿಟ್ಟು ಅವನನ್ನು ನಮಸ್ಕರಿಸಿದರು. ಶ್ರೀಕೃಷ್ಣನು ಧರ್ಮರಾಜನ ಸಂಗಡ ಬಂದಿದ್ದ ವೃದ್ಧರಿಗೂ ವಿಪ್ರರಿಗೂ ನಮಸ್ಕಾರವನ್ನು ಮಾಡಿ ಪಾಂಡವರನ್ನು ಕೂಡಿಕೊಂಡು ನಗರದೊಳಗೆ ಬರಲಿಕ್ಕೆ ಸಮಾರಂಭದಿಂದ ಹೊರಟನು. ಆ ಕಾಲಕ್ಕೆ ಎಲ್ಲ ನಗರವು ತಳಿರು ತೋರಣಗಳಿಂದಲೂ ಪತಾಕೆಗಳಿಂದಲೂ ಶೃಂಗರಿಸಲ್ಪಟ್ಟಿತ್ತು. ರಾಜಮಾರ್ಗಗಳು ಚಂದನೋದಕದಿಂದ ಶೀತಲವಾಗಿಯೂ ನಿರ್ಮಲವಾಗಿಯೂ ಮಾಡಲ್ಪಟ್ಟಿದ್ದವು. ಅಲ್ಲಲ್ಲಿ ನಗರದೊಳಗಿನ ಸನ್ಮಾನ್ಯ ಜನರು ಶ್ರೀಕೃಷ್ಣನನ್ನು ಸತ್ಕರಿಸುವದಕ್ಕಾಗಿ ಚಿನ್ನದ ತಬಕಗಳಲ್ಲಿ ತಾಂಬೂಲವನ್ನೂ, ಹೂವಿನ ಮಾಲೆ ಮತ್ತು ಗೊಂಚಲಗಳನ್ನೂ ತೆಗೆದುಕೊಂಡು ಬಂದು ತಂಡತಂಡಾಗಿ ನಿಂತಿದ್ದರು. ನಗರದೊಳಗಿನ ಸ್ತ್ರೀಯರು ಶ್ರೀಕೃಷ್ಣನನ್ನೂ, ಅವನ ಹೆಂಡಂದಿರನ್ನೂ ನೋಡಲಿಕ್ಕೆ ದಾರಿಯ ಎರಡೂ ಮಗ್ಗಲಿಗೆ ಇರುವ ಮೇಲುಪ್ಪರಿಗೆಯ ಮನೆಗಳ ಕಿಡಿಕಿಯಲ್ಲಿ ಉತ್ಸುಕರಾಗಿ

ನಿಂತುಕೊಂಡು ಅವರ ಮೇಲೆ ಪುಷ್ಪ ವೃಷ್ಟಿಯನ್ನು ಮಾಡುತ್ತಿದ್ದರು. ಪ್ರತಿ ಯೊಂದು ಮನೆಯವರು ಮೃದಂಗ, ವೀಣಾ, ತಂಬೂರಿ, ಜಲತರಂಗ ಮೊದ ಲಾದ ಮಂಗಲ ವಾದ್ಯಗಳನ್ನು ಬಾರಿಸುತ್ತಿದ್ದರು. ವಾರಸ್ತ್ರೀಯರು ಅಲ್ಲಲ್ಲಿ ಹಾಡುವದನ್ನೂ, ಕುಣಿಯುವದನ್ನೂ ಮಾಡುತ್ತಿದ್ದರು. ದೇವಾಲಯಗಳಲ್ಲಿ ವಿಪ್ರರೂ ಅರ್ಚಕರೂ ನಿಂತುಕೊಂಡು ಶ್ರೀಕೃಷ್ಣನಿಗೆ ಆಶೀರ್ವಾದಗಳನ್ನು ಕೊಡುತ್ತಿದ್ದರು. ಈ ಪ್ರಕಾರ ಇವರೆಲ್ಲರು ಕೂಡಿಕೊಂಡು ಸಡಗರದಿಂದ ಅರಮನೆಗೆ ಬರಲಾಗಿ ಅಂತಃಪುರದ ಅನೇಕ ಮಂದಿ ಹೆಂಗಸರು ಅಲ್ಲಿ ನೆರೆದರು. ಆಗ ಶ್ರೀಕೃಷ್ಣನು ಅರಮನೆಯೊಳಗೆ ಪೃಥೆಯು (ಕುಂತಿಯು) ಪಾದದ ಮೇಲೆ ತಲೆಯನ್ನಿಟ್ಟು ನಮಸ್ಕಾರ ಮಾಡಿದನು. ಆ ಮೇಲೆ ಅವನ ಎಂಟೂಮಂದಿ ಹೆಂಡಂದಿರು ಆ ಪ್ರಕಾರ ಮಾಡಿದರು. ಪಾಂಡವರ ಪಟ್ಟಮಹಿಷಿಯಾದ ದ್ರೌಪದಿಯು ಶ್ರೀಕೃಷ್ಣನ ಹೆಂಡಂದಿರಾದ ರುಕ್ಮಿಣಿ, ಸತ್ಯಭಾಮಾ, ಮಿತ್ರ ವಿಂದಾ, ಸತ್ಯಾ, ಕಾಲಿಂದಿ, ಜಾಂಬವತಿ, ಮತ್ತು ಭದ್ರಾ ಈ ಎಂಟೂ ಮಂದಿ ಯನ್ನು ಬಹಳ ಸನ್ಮಾನದಿಂದ ಸ್ವಾಗತ ಮಾಡಿ ಅವರಿಗೆ ಉತ್ತಮ ವಸ್ತ್ರಗ ಳನ್ನೂ, ಹೂವಿನ ಮಾಲೆಗಳನ್ನೂ ಅರ್ಪಿಸಿದಳು. ಈ ಪ್ರಕಾರ ಅವರಿಗೆ ಸನ್ಮಾನ ವಾದನಂತರ ಶ್ರೀಕೃಷ್ಣನು ಪಾಂಡವರ ಭಕ್ತಿಪೂರ್ವಕವಾದ ಆತಿಥ್ಯವನ್ನು ಸ್ವೀಕರಿಸುತ್ತ ಅಲ್ಲಿ ಆನಂದದಿಂದ ಇರಲಿಕ್ಕೆ ಹತ್ತಿದನು. ಮುಂದೆ ಒಂದು ದಿವಸ ಧರ್ಮರಾಜನು ತನ್ನ ಸಭೆಯಲ್ಲಿ ಶ್ರೀಕೃಷ್ಣನಿಗೆ—“ಮಧುಸೂದನಾ, ನಿನ್ನ ಕೃಪೆಯಿಂದ ನಮ್ಮ ರಾಜ್ಯವು ಉತ್ಕೃರ್ಷವನ್ನು ಪಡೆದು ಈಗ ವೈಭವಶಿಖರಕ್ಕೆ ಮುಟ್ಟಿರುತ್ತದೆ. ಈಗೀಗ ನಾರದ ಋಷಿಗಳು ನಮ್ಮಲ್ಲಿಗೆ ಬಂದು ರಾಜಸೂಯ ಯಜ್ಞವನ್ನು ಮಾಡಲಿಕ್ಕೆ ನಮಗೆ ಆಗ್ರಹದಿಂದ ಹೇಳಿ ಹೋದರು. ಅದು ನನ್ನ ತಮ್ಮಂದಿರ ಮನಸ್ಸಿಗೆ ಒಪ್ಪಿತವಾಗಿದ್ದು ಅವರು ನನಗೆ ಆಗ್ರಹವನ್ನು ಮಾಡಲಿಕ್ಕೆ ಹತ್ತಿರುತ್ತಾರೆ. ಆದರೆ ನಾನು ಈ ಬಗ್ಗೆ ನಿನ್ನ ಆಲೋಚನೆಯನ್ನು ಕೇಳದೆ ಏನೂ ಮಾಡಬಾರದೆಂದು ನಿನ್ನನ್ನು ಬೇಕಂತೇ ಕರೆಸಿರುತ್ತೇನೆ. ನೀನು ನಮ್ಮೆಲ್ಲರಿಗೆ ಹಿರಿ ಯನೂ, ನಮ್ಮ ಹಿತಚಿಂತಕನೂ ಇದ್ದು ದೂರದರ್ಶಿಯೂ, ಬುದ್ಧಿಸಂಪನ್ನನೂ ಇರುತ್ತೀ. ಆದುದರಿಂದ ಈ ಮಹತ್ಕಾರ್ಯವು ನಮ್ಮಿಂದ ನಿರ್ವಿಘ್ನವಾಗಿ ಸಾಗೀತೇ ಹೇಗೆ ಎಂಬದನ್ನು ನಮ್ಮ ದಾಕ್ಷಿಣ್ಯವಿಲ್ಲದೆ ಹೇಳು” ಎಂದು ವಿನಯ

ದಿಂದ ಕೇಳಿದನು. ಇದಕ್ಕೆ ಶ್ರೀಕೃಷ್ಣನು ಸ್ವಲ್ಪ ಹೊತ್ತು ವಿಚಾರಮಾಡಿ ಅವ ನಿಗೆ—“ ನೀನು ಈ ಶ್ರೇಷ್ಠವಾದ ಯಜ್ಞವನ್ನು ಮಾಡಲಿಕ್ಕೆ ಎಲ್ಲ ರೀತಿಯಿಂದ ಯೋಗ್ಯನಿರುತ್ತೀ. ಆದರೆ ಈಗ ಭೋಜ ಕುಲದ ಮಗಧ ದೇಶದ ಜರಾಸಂಧನು ಬಲಿಷ್ಠನಾಗಿದ್ದು ಅವನನ್ನು ಎಲ್ಲರು ಸಮ್ರಾಟನೆಂದು ಎಣಿಸುತ್ತಾರೆ. ಚೇದಿ ದೇಶಾಧಿಪತಿಯಾದ ಶಿಶುಪಾಲನು ಅವನ ಸೇನಾಪತಿಯು ಇರುತ್ತಾನೆ. ವಿದರ್ಭ ದೇಶದ ಭೀಷ್ಮಕನು, ಪೌಂಡ್ರಕ ಪತಿಯಾದ ವಾಸುದೇವನು, ಕರುಷ ಪತಿ ಯಾದ ದಂತವಕ್ರನು ಮೊದಲಾದ ರಾಜರು ಅವನಿಗೆ ಆಜ್ಞಾಧಾರಕರಾಗಿ ನಡೆ ಯುತ್ತಾರೆ. ಪಶ್ಚಿಮ ಕಡೆಯ ಬಹುಶಃ ಎಲ್ಲ ರಾಜರು ಜರಾಸಂಧನಿಗೆ ಅನು ಕೂಲರಿರುತ್ತಾರೆ. ಮಧ್ಯದೇಶದಲ್ಲಿಯ ಕುಂತಿಭೋಜ ಪುರುಜಿತ್ತನು ಮಾತ್ರ ನಿನ್ನ ಅನುಬಂಧಿಕನು ಇರುವದರಿಂದ ಅವನು ನಿನಗೆ ಅನುಕೂಲನಿರುತ್ತಾನೆ. ಆದರೆ ಅಲ್ಲಿಯ ಇತರ ಯಾವತ್ತು ರಾಜರು ಮಧ್ಯಸ್ಥರು ಅಥವಾ ಜರಾಸಂಧ ನಿಗೆ ಅನುಕೂಲರು ಇರುತ್ತಾರೆ. ಜರಾಸಂಧನ ರಾಜ್ಯವು ಬಹಳ ಪ್ರಚಂಡವಿರು ವದರಿಂದ ನಾವು ಅವರನ್ನು ಎಷ್ಟೋ ಸಾರೆ ಪರಾಭವ ಮಾಡಿದಾಗ್ಯೂ ಅವರ ಅಂಜಿಕೆಯ ಸಲುವಾಗಿ ದ್ವಾರಕೆಯನ್ನು ಬಿಟ್ಟುಕೊಡಬೇಕಾಯಿತು. ಜರಾ ಸಂಧನ ಉಪದ್ರವವು ದುಸ್ಸಹವಾದುದರಿಂದಲೇ ನಾವು ಸಮುದ್ರದ ನೀರೊ ಳಗೆ ಆಶ್ರಯವನ್ನು ಮಾಡಿಕೊಳ್ಳಬೇಕಾಗಿರುವದು. ಜರಾಸಂಧನು ಜೀವಂತವಿ ರುವ ತನಕ ನಿನಗೆ ರಾಜಸೂಯಯಜ್ಞವನ್ನು ನೆರವೇರಿಸುವದು ಅಶಕ್ಯ ವಿರುತ್ತದೆ. ಆದುದರಿಂದ ಎಲ್ಲಕ್ಕೂ ಮುಂಚೆ ಜರಾಸಂಧನ ವಧ ಮಾಡುವದು ಅಗತ್ಯವಿರುತ್ತದೆ. ಅವನು ಅನೇಕ ಪಾಪ ಕೃತ್ಯಗಳನ್ನು ಮಾಡಹತ್ತಿರುವದರಿಂದ ಅವನ ಮೃತ್ಯುವು ಸಮೀಪಿಸಿರುತ್ತದೆ. ನೀವು ಸೈನ್ಯವನ್ನು ತೆಗೆದುಕೊಂಡು ಹೋಗಿ ಅವನಗೂಡ ರಣಾಂಗಣದಲ್ಲಿ ಯುದ್ಧಮಾಡಿ ಅವನನ್ನು ಕೊಲ್ಲು ವದು ಶಕ್ಯವಿಲ್ಲ. ದ್ವಂದ್ವ ಯುದ್ಧದಲ್ಲಿ ಅವನನ್ನು ಕೊಲ್ಲಲಿಕ್ಕೆ ಅರ್ಜುನನು ಅಥವಾ ಭೀಮಸೇನನು ಸಮರ್ಥನಿರುತ್ತಾನೆ. ಆದುದರಿಂದ ನಾನು ವಿಪ್ರನ ವೇಷದಿಂದ ಈ ಇಬ್ಬರನ್ನು ಅವನ ರಾಜಮಂದಿರಕ್ಕೆ ಕರಕೊಂಡು ಹೋಗಿ ಅವನನ್ನು ದ್ವಂದ್ವ ಯುದ್ಧಕ್ಕೆ ಆವ್ಹಾನ ಮಾಡುವೆನು. ಬಹುಶಃ ಅವನು ದ್ವಂದ್ವ ಯುದ್ಧವನ್ನು ಮಾಡಲಿಕ್ಕೆ ಒಪ್ಪಿಕೊಳ್ಳುವನು. ಆ ದ್ವಂದ್ವ ಯುದ್ಧ

ದಲ್ಲಿ ಭೀಮಸೇನನು ಅವನನ್ನು ನಿಶ್ಚಯದಿಂದ ಕೊಲ್ಲುವನೆಂದು ನನಗೆ ತೋ ರುತ್ತದೆ. ಅದುದರಿಂದ ನನಗೆ ಈ ಇಬ್ಬರನ್ನು ಕರಕೊಂಡು ಹೋಗಲಿಕ್ಕೆ ತೀವ್ರವಾಗಿ ಅಪ್ಪಣೆಯನ್ನು ಕೊಡು" ಎಂದು ಸವಿಸ್ತರವಾಗಿ ಹೇಳಿದನು. ಇದಕ್ಕೆ ಧರ್ಮರಾಜನು ಒಪ್ಪಿಗೆಯನ್ನು ಕೊಡಲು, ಶ್ರೀಕೃಷ್ಣನು ಅವರನ್ನು ಕೂಡಲೆ ಕರಕೊಂಡು ಮಗಧ ದೇಶಕ್ಕೆ ಹೊರಟು ಹೋದನು.

ಈ ಪ್ರಕಾರ ಅವರು ಮೂರು ಮಂದಿ ಹೊರಟು ಹೋದ ನಂತರ ಜರಾ ಸಂಧನ ರಾಜಧಾನಿಯು ಸಮೀಪಿಸಲಾಗಿ, ಶ್ರೀಕೃಷ್ಣನು ವಿಪ್ರನ ವೇಷವನ್ನು ಧರಿಸಿ, ಆ ವೇಷಕ್ಕೆ ಒಪ್ಪುವಂಥ ಸ್ವಚ್ಛವಾದ ಶುಭ್ರ ವಲ್ಕಲಗಳನ್ನು ಹಾಕಿ ಕೊಂಡು ತನ್ನ ಕೈಯಲ್ಲಿ ಒಂದು ಕಮಂಡಲು ಮಾತ್ರ ಹಿಡಿದನು. ಭೀಮಾರ್ಜು ನರು ಸಹ ಸ್ವಚ್ಛವಾದ ಶುಭ್ರ ವಲ್ಕಲಗಳನ್ನು ಧರಿಸಿದರು. ಆಮೇಲೆ ಅವರು ಆ ನಗರದ ಅಗಸಿಯ ಬಾಗಿಲದೊಳಗಿಂದ ಹಾದು ಹೋಗದೆ, ಜರಾಸಂಧನ ತಂದೆಯು ನಗಾರಿಗಳನ್ನು ಬಾರಿಸುವದಕ್ಕಾಗಿ ಕಟ್ಟಿಸಿದ ಮಂದಿರಕ್ಕೆ ಹೋಗಿ, ಆ ನಗಾರಿಗಳನ್ನು ಹರಿದು, ಆ ಮಂದಿರದ ಪ್ರಾಕಾರದ ಮೇಲೆ ಇಡಿಸಿದಂಥ ಊದುವ ಕೊಂಬನ್ನು ಕಿತ್ತು ಒಕ್ಕೊಟ್ಟು, ಆ ಪ್ರಾಕಾರಕ್ಕೆ ಹೊಂದಿ ಇದ್ದಂಥ ಕೋಟೆಯ ಮೇಲಿಂದ ಅರಮನೆಗೆ ಹೋದರು. ಈ ಮೂರೂ ಮಂದಿ ಸ್ವಚ್ಛವಾದ ಶುಭ್ರ ವಲ್ಕಲಗಳನ್ನು ಧರಿಸಿಕೊಂಡು ಲವಲೇಶವಾದರೂ ಭೀತಿಯಿಲ್ಲದೆ ಅರಮನೆಯೊಳಗೆ ಹೋಗುವದನ್ನು ಕಂಡು ಯಾರೂ ಅವರಿಗೆ ಒಳಗೆ ಹೋಗಲಿಕ್ಕೆ ಅಡ್ಡಿಯನ್ನು ಮಾಡಲಿಲ್ಲ. ಅವರು ಜರಾಸಂಧನಿದ್ದ ಸ್ಥಳಕ್ಕೆ ಹೋಗಿ ಮುಟ್ಟಲಾಗಿ, ಜರಾಸಂಧನು ಆದರಪೂರ್ವಕವಾಗಿ ಎದ್ದು, ಅವರನ್ನು ಪೂಜೆ ಮಾಡಬೇಕೆಂದು ಅವರ ಚರಣಗಳನ್ನು ಉದಕದಿಂದ ತೊಳೆಯುವದಕ್ಕಾ ಗಿ ಮುಂದರಿದನು. ಆದರೆ ಅವರು ಅವನ ಕಡೆಯಿಂದ ಪೂಜಾ-ಸತ್ಕಾರವನ್ನು ತೆಗೆದುಕೊಳ್ಳಲಿಲ್ಲ. ಇದನ್ನು ನೋಡಿ ಜರಾಸಂಧನು ಆಶ್ಚರ್ಯಪಟ್ಟು ಅವ ರಿಗೆ-"ನೀವು ಬ್ರಾಹ್ಮಣರಿದ್ದು ಪೂಜಾ ಸತ್ಕಾರವನ್ನು ಏಕೆ ತೆಗೆದುಕೊಳ್ಳುವ ದಿಲ್ಲ?" ಎಂದು ಕೇಳಿದನು ಅದಕ್ಕೆ ಭೀಮಾರ್ಜುನರು ಏನೂ ಉತ್ತರ ಕೊಡಲಿಲ್ಲ. ಆಗ ಕುಶಲ ಬುದ್ಧಿಯವನಾದ ಶ್ರೀಕೃಷ್ಣನು ಜರಾಸಂಧನಿಗೆ-"ಇವರು ಇಲ್ಲಿ ಮಾತಾಡುವ ಸಲುವಾಗಿ ಬಂದಿಲ್ಲ. ಮಾತಾಡಬಾರದೆಂಬುದೇ ಇವರ ವ್ರತವಿ

ರುತ್ತದೆ” ಎಂದು ಉತ್ತರವನ್ನು ಕೊಟ್ಟನು. ಇದನ್ನು ಕೇಳಿ ಜರಾಸಂಧನಿಗೆ ಆಶ್ಚರ್ಯವೆನಿಸಿತು. ಧನುಷ್ಯವನ್ನು ಎಳೆಯುವದರಿಂದ ಪುಷ್ಟವಾದಂಥ ಆ ವೀರರ ಭುಜದಂಡಗಳನ್ನೂ, ಅವರು ತಮ್ಮ ಮೋರೆಗೆ ಹಚ್ಚಿಕೊಂಡ ಗಂಧವನ್ನೂ, ಕೊರಳಲ್ಲಿ ಹಾಕಿಕೊಂಡ ಹೂಮಾಲೆಗಳನ್ನೂ ನೋಡಿ ಅವರು ಕ್ಷತ್ರಿಯರಿರಬಹುದೆಂದು ಅವನಿಗೆ ಅನುಮಾನವು ಬರಹತ್ತಿತು. ಇಷ್ಟರಲ್ಲಿ ಜರಾಸಂಧನ ಸೇವಕರು ಜರಾಸಂಧನ ಹತ್ತರ ಬಂದು ಈ ಮೂರು ಜನರು ಮಾಡಿದ ಅಪಮಾನಾಸ್ಪದ ಕೃತ್ಯಗಳನ್ನು ಅವನಿಗೆ ತಿಳುಹಿಸಿದರು. ಆಗ ಅವನು ಅವರಿಗೆ—“ನೀವು ಯಾರಿದ್ದೀರೆಂದು ಹೇಳಿರಿ. ನಿಮ್ಮ ತೇಜದ ಮೇಲಿಂದ ಕ್ಷಾತ್ರ ತೇಜವಂತೂ ಕಾಣುತ್ತದೆ. ನೀವು ಬ್ರಾಹ್ಮಣ ಸನ್ಯಾಸಿಗಳಿದ್ದರೆ ನಿಮ್ಮ ಕೊರಳಲ್ಲಿ ಈ ಹೂವಿನ ಮಾಲೆಗಳೂ, ನಿಮ್ಮ ಮೋರೆಗೆ ಈ ಗಂಧದ ಲೇಪನವೂ ಏತಕ್ಕೆ? ಹಾಗೂ ನೀವು ನನ್ನ ಮಂದಿರದ ಪ್ರಾಕಾರದ ಮೇಲಿನ ಕೊಂಬನ್ನು ಮುರಿದು ಅಡ್ಡ ದಾರಿಯಿಂದ ಏಕೆ ಬಂದಿರಿ? ಇದಲ್ಲದೆ ನೀವು ನನ್ನ ಸತ್ಕಾರವನ್ನು ತೆಗೆದುಕೊಳ್ಳದಿರುವ ಕಾರಣವೇನು?” ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು—“ಜರಾಸಂಧಾ, ನಾವು ಬ್ರಾಹ್ಮಣ ಸನ್ಯಾಸಿಗಳ ವೇಷ ಧರಿಸಿದ ಕ್ಷತ್ರಿಯರು ಇದ್ದೇವೆ. ಹೂಗಳಲ್ಲಿ ಯಾವಾಗಲು ಲಕ್ಷ್ಮಿಯು ಇರುವದರಿಂದ ನಾವು ನಮ್ಮ ಕೊರಳಲ್ಲಿ ಹೂಮಾಲೆಗಳನ್ನು ಹಾಕಿರುತ್ತೇವೆ. ಮಿತ್ರರ ಮನೆಯೊಳಗೆ ಹೋಗಬೇಕಾದರೆ ಅವರ ಮನೆಯ ಬಾಗಿಲದಿಂದ ಹೋಗಬೇಕೆಂತಲೂ, ಶತ್ರುಗಳ ಮನೆಯೊಳಗೆ ಹೋಗಬೇಕಾದರೆ ಅವರ ಮನೆಯ ಬಾಗಿಲವನ್ನು ಬಿಟ್ಟು ಎರಡನೆ ಕಡೆಯಿಂದ ಹೋಗಬೇಕೆಂತಲೂ ನೀತಿಯುಂಟು. ಆದುದರಿಂದ ನಾವು ನಿನ್ನ ಅರಮನೆಗೆ ಸರಳ ದಾರಿಯಿಂದ ಬರಲಿಲ್ಲ. ಶತ್ರುಗಳ ಕಡೆಯಿಂದ ಪೂಜೆಯನ್ನು ತೆಗೆದುಕೊಳ್ಳುವದು ಯೋಗ್ಯವಲ್ಲವಾದ್ದರಿಂದ ನಾವು ನಮ್ಮ ಕೆಲಸವು ಮುಗಿಯುವ ವರೆಗೆ ನಿನ್ನ ಕಡೆಯಿಂದ ಪೂಜೆಯನ್ನು ತೆಗೆದುಕೊಳ್ಳುವದಿಲ್ಲ” ಎಂದು ಖಂಡ ತುಂಡಾಗಿ ಉತ್ತರ ಕೊಟ್ಟನು. ಆ ಬಳಿಕ ಜರಾಸಂಧನು—“ನನ್ನದೂ ನಿಮ್ಮದೂ ವೈರತ್ವವಿರುವದು ನನ್ನ ನೆನಪಿಗೆ ಬರುವದಿಲ್ಲ. ನಾನು ಯಾವ ರೀತಿಯಿಂದಲೂ ನಿಮ್ಮ ಅಪರಾಧವನ್ನು ಮಾಡದೆ ನೀವು ನನ್ನ ಕಡೆಗೆ ನನ್ನ ಶತ್ರುಗಳೆಂದು

ಬರುವದು ಆಶ್ಚರ್ಯವಲ್ಲವೇ?" ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು—"ಜರಾಸಂಧಾ, ಒಬ್ಬ ರಾಜನು ಎರಡನೆ ರಾಜರನ್ನು ಕಾರಣವಿಲ್ಲದೆ ಗೆದ್ದು ಕಾರಾಗೃಹದಲ್ಲಿಟ್ಟು ಅವರನ್ನು ಪಶುಗಳಂತೆ ಯಜ್ಞದಲ್ಲಿ ಬಲಿಕೊಡುವದು ಮಹಾ ಪಾತಕವಿರುತ್ತದೆ. ಈ ಪಾತಕವನ್ನು ನಿವಾರಣ ಮಾಡುವ ಸಾಮರ್ಥ್ಯವು ನಮಗೆ ಇದ್ದು ನಾವು ಹಾಗೇ ಬಿಟ್ಟುಕೊಟ್ಟರೆ ನಮಗೆ ಸಹ ಅದು ತಟ್ಟುವದು. ನಾವು ಕ್ಷತ್ರಿಯ ಜಾತಿಯ ರಕ್ಷಣಾರ್ಥವಾಗಿ ಕ್ಷತ್ರಿಯ ಜಾತಿಯವರ ವಿನಂತಿಯ ಮೇರೆಗೆ ಕ್ಷತ್ರಿಯ ಜಾತಿಯ ಕ್ಷಯವನ್ನು ನಡೆಸಿರುವ ನಿನ್ನನ್ನು ಕೊಲ್ಲಲಿಕ್ಕೆ ಇಲ್ಲಿ ಬಂದಿರುತ್ತೇವೆ. ನಾನು ಹೃಷಿಕೇಶಿ ಶೌರಿಯು ಇದ್ದೇನೆ. ಈ ಇಬ್ಬರು ಪಾಂಡವರು ವೀರರಾದ ಭೀಮಾರ್ಜುನರು ಇರುತ್ತಾರೆ. ನಾವು ನಿನಗೆ ಯುದ್ಧಕ್ಕೆ ಆವ್ಹಾನ ಮಾಡುತ್ತೇವೆ. ನೀನು ನಮ್ಮಲ್ಲಿ ಬೇಕಾದವರ ಸಂಗಡ ಬೇಕಾದ ರೀತಿಯಿಂದ ಯುದ್ಧ ಮಾಡು" ಎಂದು ಹೇಳಿದನು. ಇದನ್ನು ಕೇಳಿ ಜರಾಸಂಧನು ದರ್ಪನಿಂದಲೂ ಸಿಟ್ಟಿನಿಂದಲೂ ಕೂಡಿದವನಾಗಿ—"ಹೀಗೇನು? ನೀನಂತೂ ನನ್ನ ಮುಂದೆ ನಿಲ್ಲಲಾರದೆ ಮೊದಲೇ ಓಡಿ ಹೋಗಿರುತ್ತೀ. ಅರ್ಜುನನಂತೂ ಅಶಕ್ತನಿರುತ್ತಾನೆ. ನಾನು ಭೀಮನ ಸಂಗಡ ಬಾಹುಯುದ್ಧವನ್ನು ಮಾಡುತ್ತೇನೆ. ನನ್ನ ಸಂಗಡ ಯುದ್ಧ ಮಾಡಲಿಕ್ಕೆ ಅವನೇ ಯೋಗ್ಯನಿರುತ್ತಾನೆ" ಎಂದು ಹೇಳಿ ತನ್ನ ಮೈಗೆ ಕಾಂವಿಯನ್ನು ಹಚ್ಚಿ, ತನಗೆ ಬೇಗ ದಣವು ಆಗಬಾರದೆಂದು ತನ್ನ ಹೊಟ್ಟೆಯೊಳಗೆ ಔಷಧವನ್ನು ತೆಗೆದುಕೊಂಡು, ಕೊರಳೊಳಗೆ ಹೂಮಾಲೆಯನ್ನು ಹಾಕಿಕೊಂಡು, ತನ್ನ ಪುರೋಹಿತನು ಕೊಟ್ಟ ಆಶೀರ್ವಾದವನ್ನು ಗ್ರಹಣ ಮಾಡಿ, ಗರ್ಜನೆಯನ್ನು ಮಾಡುತ್ತ, ಕುಸ್ತಿಯ ಕಣಕ್ಕೆ ಬಂದು ನಿಂತನು. ಇತ್ತಲಾ ಭೀಮನು ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ಜರಾಸಂಧನಿಗೆ ಎದುರಾಗಿ ಹೋದನು. ಆ ಬಳಿಕ ಈ ಇಬ್ಬರು ಶ್ರೇಷ್ಠ ಮಲ್ಲರು ಸೊಡ್ಡು ಹೊಡೆದು, ಒಬ್ಬರಿಗೊಬ್ಬರು ಕೈಮುಟ್ಟಿ ನಮಸ್ಕಾರ ಮಾಡಿ, ಭಯಂಕರವಾದ ಬಾಹುಯುದ್ಧವನ್ನು ಆರಂಭ ಮಾಡಿದರು. ಇದನ್ನು ನೋಡಲಿಕ್ಕೆ ಅಲ್ಲಿ ಸಾವಿರಾರು ಮಂದಿ ಪುರನಿವಾಸಿಗಳು ಬಂದು ಕೂಡಿದರು. ಈ ಯುದ್ಧವು ಕಾರ್ತೀಕ ಶುದ್ಧ ಪ್ರತಿಪದೆಯ ದಿವಸ ಆರಂಭವಾಗಿ ರಾತ್ರಿ ಹಗಲು ಹದಿನಾಲ್ಕು ದಿವಸ ನಡೆಯಿತು. ಕಡೆಗೆ ಜರಾ

ಸಂಧನು ದಣಿದನು. ಆ ಕಾಲಕ್ಕೆ ಜರಾಸಂಧನು ಎಂಬತ್ತು ವರ್ಷದವನು ಇದ್ದು ಭೀಮನು ಐವತ್ತು ವರ್ಷದವನು ಇದ್ದನು. ಜರಾಸಂಧನು ದಣಿದು ಯುದ್ಧ ಮಾಡುವದನ್ನು ಬಿಟ್ಟು ತಿರುಗಿ ಹೋಗುವದನ್ನು ಶ್ರೀಕೃಷ್ಣನು ಕಂಡು—"ಭೀಮಾ, ದಣಿದ ಶತ್ರುವು ಮೇಲಿಂದಮೇಲೆ ಸಿಗುವದಿಲ್ಲ. ಏನು ನೋಡುತ್ತೀ? ಜರಾಸಂಧನು ಮುಪ್ಪಿನಿಂದ ಜೀರ್ಣನಾಗಿದ್ದರೂ ನೀನು ಅವನನ್ನು ಸೀಳಿ ಒಗೆದ ಹೊರತಾಗಿ ಅವನು ಎಂದಿಗೂ ಜೀವ ಬಿಡುವದಿಲ್ಲ" ಎಂದು ಹೇಳಿದನು. ಇದನ್ನು ಕೇಳಿದವನೇ ಭೀಮನು ಜರಾಸಂಧನನ್ನು ಹಿಡಿದು ಜಗ್ಗಿ, ಅವನನ್ನು ಕೆಳಗೆ ಒಗೆದು, ಅವನ ಒಂದು ಕಾಲಮೇಲೆ ತನ್ನ ಕಾಲನ್ನು ಇಟ್ಟು, ಅವನ ಎರಡನೆ ಕಾಲನ್ನು ತನ್ನ ಎರಡೂ ಕೈಗಳಿಂದ ಸೀಳಿ ಒಗೆದನು. ಆ ಕಾಲಕ್ಕೆ ಆ ಇಬ್ಬರೂ ವೀರರು ಮಾಡಿದ ವೀರ ಗರ್ಜನೆಯನ್ನು ಕೇಳಿ ಬಸರು ಹೆಂಗಸರು ಹಲವಿಳಿದರೆಂದು ಹೇಳಿದರೆ ಎಂದಿಗೂ ಅತಿಶಯೋಕ್ತಿಯಾಗದು. ಈ ಪ್ರಕಾರ ಆ ಮೂರೂ ಮಂದಿ ವೀರರು ಜರಾಸಂಧನನ್ನು ಕೊಂದು ಅವನ ಪ್ರೇತವನ್ನು ಅಲ್ಲಿಯೇ ಒಕ್ಕೊಟ್ಟರು. ಆಮೇಲೆ ಶ್ರೀಕೃಷ್ಣನು ಕೂಡಲೆ ಸ್ವತಃ ಹೋಗಿ ಜರಾಸಂಧನ ರಥವನ್ನು ಹೂಡಿ ತಂದು, ಕಾರಾಗೃಹದಲ್ಲಿಟ್ಟಿದ್ದ ರಾಜರನ್ನು ಬಿಡುಗಡೆ ಮಾಡಿ, ಜರಾಸಂಧನ ರಾಜ್ಯವನ್ನು ಅವನ ಮಗನ ಸ್ವಾಧೀನಕ್ಕೆ ಒಪ್ಪಿಸಿ, ಭೀಮಾರ್ಜುನರನ್ನು ರಥದಲ್ಲಿ ಕುಳ್ಳಿರಿಸಿಕೊಂಡು, ತ್ವರಿತವಾಗಿ ಇಂದ್ರಪ್ರಸ್ಥ ನಗರಕ್ಕೆ ಬಂದು ಮುಟ್ಟಿದನು. ಈ ಪ್ರಕಾರ ಈ ಮೂರೂ ಮಂದಿ ವೀರರು ತಮ್ಮ ನಿಯಮಿತ ಕೆಲಸವನ್ನು ಮುಗಿಸಿಕೊಂಡು ಸುಖರೂಪವಾಗಿ ಬಂದದ್ದನ್ನು ಕಂಡು ಧರ್ಮರಾಜನಿಗೆ ಅತ್ಯಂತ ಆನಂದವಾಯಿತೆಂದು ಬೇರೆ ಹೇಳುವದು ಅವಶ್ಯವಿಲ್ಲ.

ಇತ್ತಲಾ ಶ್ರೀಕೃಷ್ಣನು ಭೀಮಾರ್ಜುನರನ್ನು ಕರಕೊಂಡು ಹೋಗಿ ಜರಾಸಂಧನನ್ನು ಕೊಲ್ಲಿಸಿದ ವರ್ತಮಾನವನ್ನು ಕೇಳಿ ಎಷ್ಟೋ ಜನರಿಗೆ ಸಾನಂದಾಶ್ಚರ್ಯವಾಯಿತು. ಎಷ್ಟೋ ಜನರಿಗೆ ಶ್ರೀಕೃಷ್ಣನು ಈ ಪ್ರಕಾರ ಕ್ಷತ್ರಿಯರಿಗೆ ಅನುಚಿತವಾದ ಕೆಲಸವನ್ನು ಮಾಡಿದ್ದಕ್ಕಾಗಿ ಬಹಳ ಸಿಟ್ಟು ಬಂದಿತು. ಅವರಲ್ಲಿಯೇ ಪೌಂಡ್ರಕ ವಾಸುದೇವನು ಒಬ್ಬನಾಗಿದ್ದನು. ಅವನಿಗೆ ಶ್ರೀಕೃಷ್ಣನ ಬಗ್ಗೆ ಬಹಳ ದಿವಸಗಳಿಂದ ಹೊಟ್ಟೆಕಿಚ್ಚು ಇತ್ತು. ಅವನು

ತಾನು ವಿಷ್ಣುವಿನ ಅವತಾರವಿರುತ್ತೇನೆಂದು ಅಂದುಕೊಂಡು ವನಮಾಲೆಯನ್ನೂ ಹಳದಿ ಬಣ್ಣದ ವಸ್ತ್ರಗಳನ್ನೂ ಧರಿಸುತ್ತಿದ್ದನು. ಇದಲ್ಲದೆ ಶ್ರೀಕೃಷ್ಣನಂತೆ ಚಕ್ರ, ಗದಾ, ಶೃಂಗ, ಶಂಖಗಳನ್ನು ತನ್ನ ಆಯುಧಗಳನ್ನಾಗಿ ಮಾಡಿಕೊಂಡು ಗರುಡಧ್ವಜವನ್ನು ತನ್ನ ರಥಕ್ಕೆ ಹಚ್ಚುತ್ತಿದ್ದನು. ಈಗ ಅವನಿಗೆ ಶ್ರೀಕೃಷ್ಣನು ಜರಾಸಂಧನನ್ನು ಕಪಟದಿಂದ ಕೊಲ್ಲಿಸಿದ ವರ್ತಮಾನವು ತಿಳಿದುಬರಲಾಗಿ ಅವನು ಬಹಳ ಸಿಟ್ಟಿಗೆದ್ದು ಶ್ರೀಕೃಷ್ಣನ ಕಡೆಗೆ ತನ್ನ ದೂತನನ್ನು ಕಳುಹಿಸಿ ಶ್ರೀಕೃಷ್ಣನನ್ನು ಯುದ್ಧಕ್ಕೆ ಆವ್ಹಾನ ಮಾಡಿದನು. ಈ ಆವ್ಹಾನವು ಬಂದು ಮುಟ್ಟಿದ ಕೂಡಲೆ ಶ್ರೀಕೃಷ್ಣನು ಯಾದವ ಸೈನ್ಯವನ್ನು ಕರಕೊಂಡು ಪೌಂಡ್ರಕ ವಾಸುದೇವನ ಕೂಡ ಯುದ್ಧಮಾಡಲಿಕ್ಕೆ ಹೊರಟನು. ಪೌಂಡ್ರಕ ವಾಸುದೇವನು ತನ್ನ ಸೈನ್ಯವನ್ನು ಕರಕೊಂಡು ಪುಂಡ್ರ ದೇಶದಿಂದ ಹೊರಟನು. ಈ ಇಬ್ಬರ ಸೈನ್ಯಗಳೂ ಕಾಶಿಯ ಹತ್ತರ ಎದುರಾದವು. ಅಲ್ಲಿ ಈ ಎರಡೂ ಪಕ್ಷಗಳೊಳಗೆ ಘನಘೋರ ಯುದ್ಧವು ನಡೆಯಿತು. ಶ್ರೀಕೃಷ್ಣನು ಪೌಂಡ್ರಕ ವಾಸುದೇವನನ್ನು ಪರಾಭವ ಮಾಡಿ ಅವನ ಶಿರಸ್ಸನ್ನು ತನ್ನ ಸುದರ್ಶನಚಕ್ರದಿಂದ ಹಾರಿಸಿದ್ದಲ್ಲದೆ ಕಾಶಿಯ ರಾಜನನ್ನೂ ಗೆದ್ದು ಅವನನ್ನು ತನ್ನ ಬಾಣದಿಂದ ಕೊಂದುಬಿಟ್ಟನು.

ಇತ್ತ ಆ ಧರ್ಮರಾಜನು ತನ್ನ ನಾಲ್ಕೂ ಮಂದಿ ತಮ್ಮಂದಿರಿಗೆ - 'ನೀವು ನಾಲ್ಕೂ ದಿಕ್ಕುಗಳಿಗೆ ಹೋಗಿ ದಿಗ್ವಿಜಯ ಮಾಡಿಕೊಂಡು ಬನ್ನಿರಿ' ಎಂದು ಹೇಳಿ ಅವರನ್ನು ಕಳುಹಿಸಿದನು. ಅರ್ಜುನನು ಉತ್ತರ ದಿಕ್ಕಿಗೆ, ಭೀಮನು ಪೂರ್ವದಿಕ್ಕಿಗೆ, ಸಹದೇವನು ದಕ್ಷಿಣ ದಿಕ್ಕಿಗೆ, ಮತ್ತು ನಕುಲನು ಪಶ್ಚಿಮ ದಿಕ್ಕಿಗೆ ಹೋಗಿ ಅಲ್ಲಿಯ ರಾಜರ ಕಡೆಯಿಂದ ಕರಭಾರವನ್ನೂ ಹೇರಳವಾದ ಸಂಪತ್ತನ್ನೂ ತೆಗೆದುಕೊಂಡು ಬಂದರು. ಕೆಲವರು ತಾವಾಗಿ ಸಂತೋಷದಿಂದ ಪಾಂಡವರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ತಮ್ಮ ಕರಭಾರವನ್ನು ಕೊಟ್ಟರು. ಕೆಲವರು ಅವರ ಕೂಡ ಯುದ್ಧಮಾಡಿ ಯುದ್ಧದಲ್ಲಿ ಸೋತ ಬಳಿಕ ಆ ಪ್ರಕಾರ ಮಾಡಿದರು. ಸಹದೇವನು ದಕ್ಷಿಣ ದೇಶದಲ್ಲಿಯ ರಾಜರನ್ನು ಗೆದ್ದು ದ್ವಾರಕೆಗೆ ಬಂದಾಗ ಶ್ರೀಕೃಷ್ಣ-ಬಲರಾಮರು ಪಾಂಡವರ ಸಾರ್ವಭೌಮತ್ವವನ್ನು ಶಿರಸಾವಂದ್ಯ ಮಾಡಿ ಧರ್ಮರಾಜನು ಯೋಜಿಸಿದ ರಾಜಸೂಯಯಜ್ಞ

ಕೋಟೀಶ್ವರ ರತ್ನಾದಿ ವಿಪುಲ ಸಂಪತ್ತನ್ನು ಕೊಟ್ಟರು. ಈ ಪ್ರಕಾರ ನಾಲ್ಕೂ ಮಂದಿ ತಮ್ಮಂದಿರು ದಿಗ್ವಿಜಯ ಮಾಡಿಕೊಂಡು ಇಂದ್ರಪ್ರಸ್ಥ ನಗರಕ್ಕೆ ಮರಳಿ ಬಂದ ಬಳಿಕ ಧರ್ಮರಾಜನು ರಾಜಸೂಯಯಜ್ಞ ಮಾಡುವದನ್ನು ನಿಶ್ಚಯ ಮಾಡಿ ತನ್ನ ಬಳಿಗೆ ಶ್ರೀಕೃಷ್ಣನನ್ನು ಕರೆಯಿಸಿಕೊಂಡು ಅವನ ಮುಂದೆ ಯಾವತ್ತು ಸಂಗತಿಯನ್ನು ತಿಳಿಸಿದನು. ಆಗ ಶ್ರೀಕೃಷ್ಣನು ಅವನಿಗೆ ರಾಜಸೂಯಯಜ್ಞ ಕಾರ್ಯವನ್ನು ಮಾಡಲಿಕ್ಕೆ ಒಪ್ಪಿಗೆಯನ್ನು ಕೊಟ್ಟನು. ಆಮೇಲೆ ಧರ್ಮರಾಜನು ವ್ಯಾಸಮಹರ್ಷಿಗಳ ಕಡೆಯಿಂದ ದೇಶದಲ್ಲಿಯ ಯಾವತ್ತು ವೇದಶಾಸ್ತ್ರಸಂಪನ್ನ ಬ್ರಾಹ್ಮಣರಿಗೂ ಋತ್ವಜರಿಗೂ ಯಜ್ಞಕ್ಕಾಗಿ ಹೊರಟು ಬರಲಿಕ್ಕೆ ನಿಮಂತ್ರಣವನ್ನು ಕಳಿಸಿಕೊಟ್ಟನು. ತನ್ನ ತಮ್ಮಂದಿರನ್ನೂ ದೂತರನ್ನೂ ಕಳಿಸಿ ಬೇರೆ ಬೇರೆ ರಾಜರನ್ನು ಕರೆಯಿಸಿಕೊಂಡನು. ಈ ಪ್ರಕಾರ ಎಲ್ಲರು ಕೂಡಲಾಗಿ ಸುಮುಹೂರ್ತದಲ್ಲಿ ಪುಣ್ಯಾಹವಾಚನವು ಮುಗಿದು ಯಜ್ಞಭೂಮಿಯು ಸಿದ್ಧವಾದ ಬಳಿಕ ವ್ಯಾಸಮಹರ್ಷಿಗಳೂ, ಯಜ್ಞವಲ್ಕ್ಯರೂ, ಧೌಮ್ಯಋಷಿಗಳೂ ಯಜ್ಞಕಾರ್ಯವನ್ನು ನಡೆಸಿದರು. ಧೃತರಾಷ್ಟ್ರನ ಸಂಗಡ ಹೋಗಿದ್ದ ಭೀಷ್ಮಾಚಾರ್ಯರೂ ದ್ರೋಣಾಚಾರ್ಯರೂ ಆ ಯಜ್ಞದಲ್ಲಿ ಕೃತಾಕೃತವನ್ನು ನೋಡಿದರು. ಅಶ್ವತ್ಥಾಮನು ಬ್ರಾಹ್ಮಣರ ಸತ್ಕಾರವನ್ನು ಮಾಡಿದನು. ವಿದುರನು ಆದಾಯ ವೆಚ್ಚಗಳ ಲೆಕ್ಕವನ್ನಿಟ್ಟನು. ದುರ್ಯೋಧನನು ಬೇರೆ ಬೇರೆ ದೇಶಗಳ ಅರಸರಿಂದ ಬಂದ ಕರಭಾರವನ್ನೂ ಕಪ್ಪಕಾಣಿಕೆಗಳನ್ನೂ ತೆಗೆದುಕೊಂಡನು. ದುಃಶ್ಯಾಸನನು ಎಲ್ಲರ ಭೋಜನದ ಮೇಲ್ವಿಚಾರಣೆಯನ್ನು ಮಾಡಿದನು. ಈ ಪ್ರಕಾರ ಉತ್ತಮ ವ್ಯವಸ್ಥೆಯಿಂದ ಸಾಗಿದ ಆ ಯಜ್ಞಸಮಾರಂಭವು ಒಂದು ತಿಂಗಳ ನಡೆದು, ಋಷಿಗಳು ಹವನದಿಂದಲೂ, ಬ್ರಾಹ್ಮಣರು ದಕ್ಷಿಣದಿಂದಲೂ, ರಾಜರು ಭೋಜನಾದಿ ಸತ್ಕಾರದಿಂದಲೂ ಅತ್ಯಂತ ಸಂತುಷ್ಟರಾದರು. ಈ ಪ್ರಕಾರ ಯಜ್ಞಸಮಾರಂಭವು ಸಾಂಗವಾದ ಕೊನೆಯ ದಿವಸ ಅಲ್ಲಿಗೆ ಬಂದ ರಾಜರಿಗೆ ಪೂಜಾಸತ್ಕಾರಗಳನ್ನು ಮಾಡುವ ಕೆಲಸವು ಆರಂಭವಾಯಿತು. ಆಗ ಯಾರಿಗೆ ಅಗ್ರಪೂಜೆಯ ಮಾನವನ್ನು ಕೊಡಬೇಕೆಂದು ಧರ್ಮರಾಜನು ಭೀಷ್ಮನನ್ನು ಕೇಳಿದನು. ಅವನು ಶ್ರೀಕೃಷ್ಣನೇ ಈ ಮಾನಕ್ಕೆ ಅರ್ಹನೆಂದು ಅರುಹಲಾಗಿ

ಪಾಂಡವರೆಲ್ಲರು ಅದನ್ನು ಮಾನ್ಯಮಾಡಿದರು. ಆ ಪ್ರಕಾರ ಧರ್ಮರಾಜನು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದನು. ಅವನು ಅದನ್ನು ಪ್ರೇಮ ಪೂರ್ವಕವಾಗಿ ಗ್ರಹಣ ಮಾಡಿದನು. ಇದು ಶಿಶುಪಾಲನಿಗೆ ಮಾತ್ರ ಸೇರ ಲಿಲ್ಲ. ಅವನು ಸಿಟ್ಟಿನಿಂದ ಎದ್ದು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದ ಪಾಂಡವರಿಗೂ, ಪಾಂಡವರಿಗೆ ಈ ಪ್ರಕಾರ ಮಾಡಲಿಕ್ಕೆ ಆಲೋಚನೆಯನ್ನು ಹೇಳಿದ ಭೀಷ್ಮನಿಗೂ ನಿಂದಿಸಿದ್ದಲ್ಲದೆ ಅಗ್ರಪೂಜೆಯನ್ನು ಮಾಡಿಸಿಕೊಂಡ ಶ್ರೀಕೃಷ್ಣನಿಗೂ ಬಹಳವಾಗಿ ನಿಂದಿಸಿದನು. ಇದಕ್ಕೆ ಭೀಷ್ಮನು ಉತ್ತರ ಕೊಟ್ಟು ಶ್ರೀಕೃಷ್ಣನ ಅಗ್ರಪೂಜೆಯು ಮಾನವು ನ್ಯಾಯವಾದುದೆಂದು ಒಪ್ಪಿ ಕೊಳ್ಳದೆ ಇರುವವರು ಅವನ ಸಂಗಡ ಯುದ್ಧಮಾಡತಕ್ಕದ್ದೆಂದು ಹೇಳಿ ದನು. ಆಗ ಶಿಶುಪಾಲನು ಸಿಟ್ಟಿಗೆದ್ದು ತನ್ನ ಕೈಯಲ್ಲಿಯ ಕತ್ತಿಯನ್ನು ಝಳು ಪಿಸುತ್ತ ಶ್ರೀಕೃಷ್ಣನ ಮೈಮೇಲೆ ಏರಿ ಬರಲಾಗಿ ಶ್ರೀಕೃಷ್ಣನು ಅವನ ಮೇಲೆ ತನ್ನ ಸುದರ್ಶನಚಕ್ರವನ್ನು ಒಗೆದು ಅವನ ಶಿರಚ್ಛೇದವನ್ನು ಮಾಡಿದನು. ಶ್ರೀಕೃಷ್ಣನ ಈ ಅದ್ಭುತ ಕೃತ್ಯವನ್ನು ನೋಡಿ ಎಲ್ಲರು ಆಶ್ಚರ್ಯಪಟ್ಟರು. ಯಜ್ಞಸಮಾರಂಭದಲ್ಲಿ ಕೂಡಿದ್ದ ಮಹರ್ಷಿಗಳಾದ ಬ್ರಾಹ್ಮಣರು ಬಹಿರಂಗ ವಾಗಿ ತಮ್ಮ ಆನಂದವನ್ನು ಪ್ರದರ್ಶನ ಮಾಡಿ ಶ್ರೀಕೃಷ್ಣನನ್ನು ಸ್ತುತಿ ಮಾಡಿದರು.

ಈ ಪ್ರಕಾರ ರಾಜಸೂಯಯಜ್ಞದಲ್ಲಿ ಉಂಟಾದ ವಿಘ್ನವನ್ನು ಶ್ರೀ ಕೃಷ್ಣನು ಧೈರ್ಯದಿಂದಲೂ, ಪರಾಕ್ರಮದಿಂದಲೂ, ತ್ವರೆಯಿಂದಲೂ ನಿವಾ ರಣ ಮಾಡಿದ ಬಳಿಕ ಯಜ್ಞದ ಇತರ ಯಾವತ್ತು ಕಾರ್ಯವು ಒಳ್ಳೇ ಅಟ್ಟ ಹಾಸದಿಂದ ಸಿದ್ಧಿಗೆ ಹೋಯಿತು. ಆಮೇಲೆ ಯಾವತ್ತು ರಾಜರು ಧರ್ಮ ರಾಜನ ನಿರೂಪವನ್ನು ತೆಗೆದುಕೊಂಡು ತಮ್ಮ ತಮ್ಮ ದೇಶಗಳಿಗೆ ತಿರುಗಿ ಹೋದರು. ಎಷ್ಟೋ ಮಂದಿ ರಾಜರು ತಮ್ಮ ಮನಸ್ಸಿನಲ್ಲಿ ಶ್ರೀಕೃ ಷ್ಣನ ಮೇಲೂ, ಪಾಂಡವರ ಮೇಲೂ ಬಹಳ ಸಿಟ್ಟಾದರು. ಶ್ರೀಕೃಷ್ಣನ ಶತ್ರುಗಳಲ್ಲಿ ಕಂಸ, ಕಾಲಯವನ, ಜರಾಸಂಧ, ಪೌಂಡ್ರಕ ವಾಸುದೇವ, ಮತ್ತು ಶಿಶುಪಾಲರು ಸತ್ತಮೇಲೆ ಶಾಲ್ವ ಮತ್ತು ರುಕ್ಮಿ ಈ ಇಬ್ಬರು ಮಾತ್ರ ಉಳಿದಿದ್ದರು. ರುಕ್ಮಿಯು ಶ್ರೀಕೃಷ್ಣನ ಬೀಗನಿದ್ದುದರಿಂದ ತಾನೇ ಸ್ವತಃ

ಶ್ರೀಕೃಷ್ಣನ ಮೇಲೆ ಸಾಗಿ ಹೋಗುತ್ತಿದ್ದಿಲ್ಲ. ಆದರೆ ಅವನು ಎರಡನೆಯ ವರಿಗೆ ಕೊಳ್ಳಿಯನ್ನು ಕೊಡಲಿಕ್ಕೆ ಎಂದೂ ಕಡಿಮೆ ಮಾಡಲಿಲ್ಲ. ಶಾಲ್ವನು ಶಿಶುಪಾಲನ ವಧವನ್ನು ತನ್ನ ಕಣ್ಣಾರೆ ನೋಡಿದ ದಿವಸದಿಂದ ಶ್ರೀಕೃಷ್ಣನ ಮೇಲೆ ಹೇಗೆ ಸೇಡು ತೀರಿಸಿಕೊಳ್ಳಬೇಕೆಂದು ಹಗಲಿರಳು ಆಲೋಚನೆ ಮಾಡ ಲಿಕ್ಕೆ ಹತ್ತಿ ಶ್ರೀ ಶಂಕರನ ಕೃಪೆಯನ್ನು ಸಂಪಾದಿಸುವದಕ್ಕಾಗಿ ಅವನ ಆರಾ ಧನೆಯನ್ನು ಮಾಡಲಿಕ್ಕೆ ಹತ್ತಿದನು. ಪಾಂಡವರು ಹಿಂದುಸ್ಥಾನದ ಸಮ್ರಾಟ ರಾಜರಾಗಿ ಅವರ ವೈಭವವೂ, ಕೀರ್ತಿಯೂ ಎಲ್ಲ ದೇಶಗಳಲ್ಲಿ ಬೆಳೆದದ್ದನ್ನು ಕಂಡು ದುರ್ಯೋಧನನ ಮತ್ಸರವು ಹೆಚ್ಚಾಯಿತು. ಆದುದರಿಂದ ಅವನು ಪಾಂ ಡವರ ಐಶ್ವರ್ಯವನ್ನೂ, ವೈಭವವನ್ನೂ ಹರಣ ಮಾಡುವದಕ್ಕಾಗಿ ಧರ್ಮ ರಾಜನ ಕೂಡ ದ್ಯೂತವನ್ನು ಆಡಬೇಕೆಂಬ ಯುಕ್ತಿಯನ್ನು ತೆಗೆದು ಅದನ್ನು ತನ್ನ ತಂದೆಯಾದ ಧೃತರಾಷ್ಟ್ರನಿಗೆ ತಿಳಿಸಿದನು. ಇದಕ್ಕಾಗಿ ಪಾಂಡವರ ಸಭೆ ಯಂಥ ಒಂದು ದಿವ್ಯವಾದ ಸಭೆಯನ್ನು ಕಟ್ಟಿಸಲಿಕ್ಕೆ ಧೃತರಾಷ್ಟ್ರನು ಕೂಡಲೆ ಅಪ್ಪಣೆಯನ್ನು ಕೊಟ್ಟು ಅದನ್ನು ಒಂದು ವರ್ಷದೊಳಗಾಗಿ ಕಟ್ಟಿಸಿ ಪಾಂಡ ವರಿಗೆ ದ್ರೌಪದಿ ಮೊದಲಾದ ತನ್ನ ಸೊಸಿಯರನ್ನು ಕರಕೊಂಡು ಬರಲಿಕ್ಕೆ ಹೇಳಿಕಳಿಸಿದನು. ಆ ಪ್ರಕಾರ ಅವರೆಲ್ಲರು ರಾಜಮಾತೆಯಾದ ಕುಂತಿಯನ್ನು ಕೂಡಿಕೊಂಡು ಹಸ್ತಿನಾಪುರಕ್ಕೆ ಬಂದರು. ಆಮೇಲೆ ಅವರೆಲ್ಲರು ನಾಲ್ಕಾರು ದಿವಸ ತಕ್ಕ ಔಪಚಾರವನ್ನು ಹೊಂದಿ ಆನಂದದಿಂದ ಇರುತ್ತಿರಲು ಒಂದು ದಿವಸ ಕೌರವರ ಸಭೆಯಲ್ಲಿ ಶಕುನಿಯು ಧರ್ಮರಾಜನಿಗೆ (ಯುಧಿಷ್ಠಿರನಿಗೆ)- "ಧರ್ಮಾ, ಇವತ್ತಿನ ಆನಂದದ ಸಮಯದಲ್ಲಿ ದ್ಯೂತವನ್ನು ಆಡೋಣ ಬಾ" ಎಂದು ಕರೆದನು. ಅದಕ್ಕೆ ಧರ್ಮರಾಜನು--"ದ್ಯೂತವಾಡುವದು ಪಾತಕ ವಿರುತ್ತದೆ. ಇದಲ್ಲದೆ ಇದರಿಂದ ಅನೇಕ ಅನರ್ಥಗಳು ಒದಗುವವು" ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಶಕುನಿಯು—"ಬುದ್ಧಿವಂತನು ಬುದ್ಧಿ ಹೀನನನ್ನು ಹರಣ ಮಾಡುವದೂ, ಸಶಕ್ತನು ಅಶಕ್ತನನ್ನು ಹರಣ ಮಾ ಡುವದೂ ಯಾವಾಗ್ಗೆ ಪಾತಕವಲ್ಲವೋ ಆಗ್ಗೆ ದ್ಯೂತದಲ್ಲಿ ಕುಶಲನಿರುವ ವನು ಕುಶಲನಲ್ಲದವನನ್ನು ಹರಣ ಮಾಡುವದರಲ್ಲಿ ಪಾತಕವೇನಿರುವದು? ನಿನ್ನ ತಮ್ಮಂದಿರು ರಾಜಸೂಯಯಜ್ಞದ ಕಾಲಕ್ಕೆ ದಿಗ್ವಿಜಯ ಮಾಡಿ ಅಶ

ಕ್ಷತ್ರರಾದ ರಾಜರನ್ನು ಗೆದ್ದ ವಿಷಯದಲ್ಲಿಯಾದರೂ ನ್ಯಾಯವು ಎಲ್ಲಿರುವದು? ವಿಚಾರಮಾಡು. ನಿನ್ನ ಮನಸ್ಸಿಗೆ ಬಂದರೆ ದ್ಯೂತವನ್ನು ಆಡೋಣ. ನನ್ನ ದೇನೂ ಆಗ್ರಹವಿಲ್ಲ" ಎಂದು ಮರ್ಮಭೇದವಾಗುವಂತೆ ಮಾತಾಡಿದನು. ಆಗ ಧರ್ಮರಾಜನು—"ಹಾಗಾದರೆ ಆಗಲಿ. ದೈವದಲ್ಲಿರುವದು ಆದೀತು" ಎಂದು ದ್ಯೂತವನ್ನಾಡಲಿಕ್ಕೆ ಒಪ್ಪಿಕೊಂಡನು. ಆಮೇಲೆ ಅವರಿಬ್ಬರೂ ಲೆತ್ತವನ್ನು ಚಲ್ಲಿದರು. ಈ ಆಟದಲ್ಲಿ ಧರ್ಮರಾಜನೇ ಮೊದಲಿನಿಂದ ಸೋಲಹತ್ತಿದನು. ಸಾವಿರಾರು ರುಪಾಯಿಗಳನ್ನು ಸೋತನು; ಲಕ್ಷ ರುಪಾಯಿಗಳನ್ನು ಸೋತನು; ಕೋಟಿ ರುಪಾಯಿಗಳನ್ನು ಸೋತನು; ರಥ-ಆನೆ-ಕುದುರೆಗಳನ್ನು ಸೋತನು; ಕೊನೆಗೆ ರಾಜ್ಯವನ್ನೂ ಸೋತನು! ಆಮೇಲೆ ಧರ್ಮರಾಜನು ತನ್ನ ತಮ್ಮಂದಿರನ್ನು—ಒಬ್ಬನ ತರುವಾಯ ಇನ್ನೊಬ್ಬನನ್ನು—ಪಂಥಕ್ಕೆ ಒಡ್ಡಿ ಅವರನ್ನು ಸೋತು ಸ್ವತಃ ತನ್ನನ್ನೂ ತಾನು ಸೋತನು. ಈ ಆಟವಾಡುವಾಗ ಕುರುಡ ಧೃತರಾಷ್ಟ್ರನು ಮೇಲಿಂದಮೇಲೆ—"ಏನು ಗೆದ್ದಿರಿ? ಏನು ಗೆದ್ದಿರಿ?" ಎಂದು ತನ್ನ ಕಡೆಯವರನ್ನು ಕೇಳಿಕೊಂಡು ಅವರು "ಇಂಥದು ಗೆದ್ದೆವು" ಎಂದು ಹೇಳಿದ ಕೂಡಲೆ ತನ್ನ ಮನಸ್ಸಿನಲ್ಲಿ ಬಹಳ ಹರ್ಷಪಡುತ್ತಿದ್ದನು. ಆದರೆ ಆ ಶಬ್ದಗಳಿಂದ ಇತರ ಸಭಿಕರಿಗೆ ಮಾತ್ರ ಬರ್ಚಿಯನ್ನು ಚುಚ್ಚಿದಂತೆ ಆಗುತ್ತಿತ್ತು. ಕೊನೆಗೆ ಶಕುನಿಯು ಧರ್ಮನಿಗೆ—"ಧರ್ಮಾ, ನಿನ್ನ ಹೆಂಡತಿಯನ್ನು ಪಂಥಕ್ಕೆ ಒಡ್ಡುವದೊಂದು ಉಳಿದಿದೆ. ಅದರಲ್ಲಿ ನೀನು ಗೆದ್ದರೆ ನಾನು ಈಗ ಗೆದ್ದಿರುವದನ್ನೆಲ್ಲ ನಿನಗೆ ತಿರುಗಿ ಕೊಡುತ್ತೇನೆ" ಎಂದು ಹೇಳಿದನು. ಆಗ ಸಭಿಕರು "ಧಿಕ್ಕಾರ, ಧಿಕ್ಕಾರ" ಎಂದು ಕೂಗಿದರು. ಆದರೆ ಸೋತದ್ದರಿಂದ ಮನಸ್ಸಿಗೆ ಹಚ್ಚಿಕೊಂಡು ದುಃಖದಿಂದ ಅಂಧನಾಗಿದ್ದ ಧರ್ಮರಾಜನು ದುಃಖಾವೇಶದಿಂದ ದ್ರೌಪದಿಯನ್ನು ಪಂಥಕ್ಕೆ ಒಡ್ಡಿದನು. ಅದರಲ್ಲಿಯೂ ಧರ್ಮರಾಜನು ಸೋತನು. ಆಗ ದುರ್ಯೋಧನ, ದುಶ್ಶಾಸನ, ಶಕುನಿ, ಕರ್ಣ ಈ ದುಷ್ಟ ಚತುಷ್ಟಯರು ಆನಂದದಿಂದ ಕರತಾಡನ ಮಾಡಿದರು. ಇತರ ಸಭಿಕರು ಮಾತ್ರ ತಮ್ಮ ಕಿವಿಯಲ್ಲಿ ಬೆರಳುಗಳನ್ನು ಇಟ್ಟುಕೊಂಡರು. ಆಗ ಉನ್ಮತ್ತ ದುರ್ಯೋಧನನು ಪ್ರಾತಿಕಾಮಿಯೆಂಬ ದೂತನನ್ನು ಕರೆದು—"ಪ್ರಾತಿಕಾಮಿ, ನೀನು ಈಗಲೇ ಹೋಗಿ ಈ ವೃತ್ತಾಂತವನ್ನು ದ್ರೌಪದಿಗೆ

ತಿಳುಹಿಸು. ಹಾಗೂ ಅವಳು ದುರ್ಯೋಧನನ ದಾಸಿಯಾಗಿರುವದರಿಂದ ಅವಳಿಗೆ ಸಭೆಗೆ ಬರಲಿಕ್ಕೆ ಅಪ್ಪಣೆಯಾಗಿರುತ್ತದೆಂದು ಹೇಳು" ಎಂದು ಹೇಳಿದನು. ಅದರಂತೆ ಪ್ರಾತಿಕಾಮಿಯು ದ್ರೌಪದಿಗೆ ತಿಳಿಸಲಾಗಿ ಅವಳು-"ಧರ್ಮರಾಜನು ದ್ಯೂತದಲ್ಲಿ ಮೊದಲಿಗೆ ಸೋತು ಸ್ವತಃ ದಾಸನಾದ ಬಳಿಕ ಅವನಿಗೆ ನನ್ನನ್ನು ಪಂಥಕ್ಕೆ ಹಚ್ಚುವ ಅಧಿಕಾರವು ಎಲ್ಲಿ ಉಳಿಯಿತು?" ಎಂದು ಅವನಿಗೆ ಕೇಳಿದಳು. ಇದರಂತೆ ಆ ದ್ಯೂತನು ಸಭೆಯ ಮುಂದೆ ಬಂದು ತಿಳಿಸಿದನು. ಆಗ ದುರ್ಯೋಧನನು ದುಶ್ಶಾಸನಗೆ—"ನೀನು ಹೋಗಿ ದ್ರೌಪದಿಯನ್ನು ಸಭೆಗೆ ಕರಕೊಂಡು ಬಾ" ಎಂದು ಹೇಳಿ ಕಳುಹಿಸಿದನು. ಅದರಂತೆ ದುಶ್ಶಾಸನನು ಅಂತಃಪುರಕ್ಕೆ ಹೋಗಿ ದ್ರೌಪದಿಗೆ ಸಭೆಗೆ ಬರುವದಕ್ಕಾಗಿ ಆಗ್ರಹ ಮಾಡಲಿಕ್ಕೆ ಹತ್ತಿದನು. ಅದಕ್ಕೆ ಅವಳು—"ನಾನು ಮುಟ್ಟಾಗಿರುತ್ತಿದ್ದು ಅಡ್ಡ ಹಚ್ಚಿಕೊಂಡಿರುತ್ತೇನೆ" ಎಂದು ಬೇಕಾದಷ್ಟು ಕಾರಣವನ್ನು ತೋರಿಸಿದರೂ ದುಷ್ಟ ದುಶ್ಶಾಸನನು ಕೇಳಲಿಲ್ಲ. ಅವನು ಅವಳ ಕೂದಲವನ್ನು ಹಿಡಿದು ಅವಳನ್ನು ಬಲಾತ್ಕಾರದಿಂದ ಕೌರವರ ಸಭೆಗೆ ಎಳೆದು ತಂದನು. ದ್ರೌಪದಿಯ ದುರ್ದಶೆಯನ್ನು ನೋಡಿ ಸಭೆಯ ಜನರು ತಮ್ಮ ತಲೆಯನ್ನು ಕೆಳಗೆ ಮಾಡಿದರು. ಧರ್ಮರಾಜನು ನಾಚಿಕೊಂಡು ತನ್ನ ತಲೆಯನ್ನು ಬಾಗಿಸಿದನು. ಆಗ ಭೀಮನು ಸಿಟ್ಟಿನಿಂದ ಎದ್ದು—"ನಾನು ಇವತ್ತಿನ ತನಕ ಸಾವಿರಾರು ಮಂದಿ ಜೂಜು ಆಡುವವರನ್ನು ನೋಡಿರುತ್ತೇನೆ. ಆದರೆ ಹೆಂಡತಿಯನ್ನು ಪಂಥಕ್ಕೆ ಹಚ್ಚಿ ಜೂಜು ಆಡುವವನು ಇವನೇ ಮೊದಲನೆಯವನು. ಲೆತ್ತವನ್ನು ಹಿಡಿದು ಆಡುವ ಇವನ ಕೈಗಳನ್ನು ಈಗಲೇ ಸುಟ್ಟುಬಿಡುತ್ತೇನೆ" ಎಂದು ನುಡಿದನು. ಆದರೆ ಅರ್ಜುನನು ಕಳ್ಕಳತೆಯಿಂದ ಭೀಮನಿಗೆ—"ಭೀಮಾ, ನೀನು ಅಣ್ಣನಿಗೆ ಗುರುವೆಂದು ತಿಳಿದು ಇವತ್ತಿನ ತನಕ ಎಂದೂ ಅಮರ್ಯಾದೆಯನ್ನು ಮಾಡಲಿಲ್ಲ. ಆದರೆ ನಿನ್ನ ಸತ್ವವನ್ನು ಈಗ ಏಕೆ ಹರಣ ಮಾಡಿಕೊಳ್ಳುತ್ತೀ? ಎಂದನು. ಆಗ ಭೀಮನು ಸುಮ್ಮನೆ ಕೆಳಗೆ ಕುಳಿತನು. ಇದರಿಂದ ದ್ರೌಪದಿಯು ನಿರಾಶೆಪಟ್ಟು ಸಭೆಯವರಿಗೆ—"ಮಹಾರಾಯರೇ, ನಾನು ದಾಸಿಯು ಅಹುದೋ ಎಂಬ ಪ್ರಶ್ನೆಗೆ ಮೊದಲು ಉತ್ತರ ಕೊಡಿರಿ. ರಾಜಸಭೆಯಲ್ಲಿ ಕುಳಿತು ದುಃಖಿತರ ಪ್ರಶ್ನೆಗೆ ಉತ್ತರ ಕೊಡದೆ ಇರುವವರು ಧರ್ಮಶಾ

ಸ್ತ್ರದ ಪ್ರಕಾರ ಅಧಃಪಾತಕ್ಕೆ ಒಳಗಾಗುತ್ತಾರೆ. ಆದುದರಿಂದ ನನ್ನ ಪ್ರಶ್ನೆಗೆ ಮೊದಲು ಉತ್ತರ ಕೊಡಿರಿ" ಎಂದು ಹೇಳಿದಳು. ಆಗ ಭೀಷ್ಮನು-"ಧರ್ಮ ರಾಜನು ತಾನು ಮೊದಲಿಗೆ ಸ್ವತಃ ಸೋತು ಹೋದ ನಂತರ ನಿನ್ನನ್ನು ಪಂಥ ಕ್ಕೆ ಒಡ್ಡಿದ್ದನ್ನೂ ಗಂಡನಿಗೆ ಹೆಂಡತಿಯ ಮೇಲೆ ಸ್ವಾಮಿತ್ವವಿರುವದನ್ನೂ ಕೂಡಿಯೇ ವಿಚಾರ ಮಾಡಿದರೆ ನೀನು ದಾಸಿಯಾಗಿರುತ್ತಿಯೋ ಇಲ್ಲೋ ಎಂಬುವದನ್ನು ನಿರ್ಣಯ ಮಾಡುವದು ಕಠಿಣವಿರುತ್ತದೆ" ಎಂದು ಉತ್ತರ ಕೊಟ್ಟನು. ಭೀಷ್ಮನು ಕೊಟ್ಟ ಮುಗ್ಧ ಉತ್ತರವನ್ನು ಕೇಳಿ ದುರ್ಯೋಧ ನನು ಆನಂದಪಟ್ಟು ದುಶ್ಶಾಸನಿಗೆ—"ಪಾಂಡವರೂ ದ್ರೌಪದಿಯೂ ನಮ್ಮ ದಾಸರಾಗಿರುವದರಿಂದ ಅವರ ವಸ್ತ್ರಗಳನ್ನು ಸೆಳೆದುಕೋ" ಎಂದು ಹೇಳಿ ದನು. ಆಗ ಪಾಂಡವರು ತಮ್ಮ ಮೈಮೇಲಿನ ವಸ್ತ್ರಗಳನ್ನು ತೆಗೆದು ಚಲ್ಲಿಕೊ ಟ್ಟರು. ಆದರೆ ದ್ರೌಪದಿಯು ಬೇಟೆಗಾರನ ಬಲಿಯಲ್ಲಿ ಸಿಕ್ಕ ಚಿಗರಿಯಂತೆ ಕಸಿವಿಸಿಪಟ್ಟು ದುಶ್ಶಾಸನನ ಕಡೆಗೆ ನೋಡಿದಳು. ಆದರೆ ಅವನಿಗೆ ಕಿಂಚಿತ್ತಾ ದರೂ ದಯವು ಹುಟ್ಟಲಿಲ್ಲ. ಅವನು ಅವಳ ಸೀರೆಯನ್ನು ಸೆಳೆಯುವದಕ್ಕಾಗಿ ಅವಳ ಸೀರೆಗೆ ಕೈ ಹಚ್ಚಿದನು. ಆಗ ದ್ರೌಪದಿಯು ಪಾಂಡವರ ಕಡೆಗೆ ನೋಡಿದಳು. ಆದರೆ ಅವರು ತಮ್ಮ ಮೋರೆಯನ್ನು ಕೆಳಗೆ ಮಾಡಿದರು. ಈ ಸ್ಥಿತಿಯಲ್ಲಿ ಅವಳಿಗೆ ಯಾರೂ ರಕ್ಷಕರು ಉಳಿಯಲಿಲ್ಲ. ಆದುದರಿಂದ ಅವಳು ತನ್ನ ಕೈಯಿಂದ ಕಣ್ಣುಗಳನ್ನು ಮುಚ್ಚಿಕೊಂಡು ಅಳಲಿಕ್ಕೆ ಹತ್ತಿ—"ಹೇ ಕೃಷ್ಣಾ! ಹೇ ಗೋವಿಂದಾ! ಹೇ ಗೋಪೀಜನಪ್ರಿಯಾ! ನೀನು ಸರ್ವಜ್ಞನಿ ರುತ್ತಿದ್ದು ಕೌರವರು ನನಗೆ ನಡೆಸಿರುವ ಛಲವು ನಿನಗೆ ಗೊತ್ತಾಗಲೊಲ್ಲದೋ? ಹೇ ಅನಾಥನಾಥಾ! ಹೇ ರಮಾನಾಥಾ! ಹೇ ದುಃಖನಾಶನಾ! ಹೇ ಜನಾ ರ್ದನಾ! ಕೌರವರು ಮಾಡುವ ಅನ್ಯಾಯದಿಂದ ಈ ದ್ರೌಪದಿಯನ್ನು ರಕ್ಷಿಸು" ಎಂದು ಜಗದ್ರಕ್ಷಕನಾದ ಪ್ರಭುವನ್ನು ಧ್ಯಾನ ಮಾಡಿ ಅವನಿಗೆ ಶರಣು ಹೋ ದಳು. ಈ ಪ್ರಕಾರ ದ್ರೌಪದಿಯು ಆರ್ತಸ್ವರದಿಂದ ತನ್ನ ಪ್ರಾರ್ಥನೆ ಮಾಡು ವದನ್ನು ಆ ಜಗದ್ರಕ್ಷಕನೂ, ಕೃಪಾಸಾಗರನೂ ಆದ ಪ್ರಭುವು ಕೇಳಿ ಕರು ಣಾರಸದಿಂದ ಉಕ್ಕೇರಿ ಬಂದು ದ್ರೌಪದಿಯ ಮೇಲೆ ಕೃಪೆಯನ್ನು ಮಾಡಿದನು. ಆದರಿಂದ ಅವಳು ಉಟ್ಟಿದ್ದ ಸೀರೆಯನ್ನು ದುಶ್ಶಾಸನನು ಎಷ್ಟು ಸಾರೆ ಸೆಳೆ

ಧಾಗ್ಯೂ ಅವಳ ಸೀರೆಯು ಇದ್ದ ಹಾಗೆಯೇ ಇತ್ತು! ದುಶ್ಶಾಸನನು ದ್ರೌ
ದಿಯ ಸೀರೆಯನ್ನು ಸೆಳೆದು ಸೆಳೆದು ಕಡೆಗೆ ದಣಿದು ಕುಳಿತನು. ಆಗ ಸಭಿಕರ
ಅವನಿಗೆ ಧಿಕ್ಕಾರವನ್ನು ಮಾಡಿ ದ್ರೌಪದಿಗೆ—“ಧನ್ಯ! ಧನ್ಯ! ನೀನು ಮಹಾ
ಪತಿವ್ರತೆಯು” ಎಂದು ಅವಳ ಧನ್ಯವಾದವನ್ನು ಮಾಡಿದರು. ಆದರೆ ಧೃತ
ರಾಷ್ಟ್ರನಿಗೆ ದುಶ್ಶಾಸನನು ಮಾಡಿದ ಭಯಂಕರ ಪ್ರಕಾರವು ತಿಳಿಯಲಿಲ್ಲ
ಅವನು ದ್ರೌಪದಿಗೆ ಸಭಿಕರು ಮಾಡಿದ ಧನ್ಯವಾದವನ್ನು ಕಿವಿಯಿಂದ ಕೇ
ಈ ಯಾವತ್ತು ನಡೆದ ಸಂಗತಿಯನ್ನು ವಿದುರನ ಕಡೆಯಿಂದ ಕೇಳಿಕೊಂಡ
ದ್ರೌಪದಿಗೆ—“ಎಲೈ ಮಹಾಸಾಧ್ವಿ ದ್ರೌಪದಿಯೇ! ನೀನು ನಿನ್ನ ಅಲೌಕಿ
ಧರ್ಮತತ್ಪರತೆಯ ಮೂಲಕ ನಮ್ಮ ಕುಲಕ್ಕೆ ದೊಡ್ಡ ಭೂಷಣಪ್ರಾಯಳ
ಇರುತ್ತೀ. ನಾನು ಈ ಸಮಯಕ್ಕೆ ನಿನ್ನ ಮೇಲೆ ಪ್ರಸನ್ನನಾಗಿರುತ್ತೇನೆ
ಬೇಕಾದ ವರವನ್ನು ಕೇಳಿಕೋ” ಎಂದು ಹೇಳಿದನು. ಅದಕ್ಕೆ ದ್ರೌಪದಿ
ಯು—“ನನ್ನ ಪತಿಗಳು ದಾಸ್ಯತ್ವದಿಂದ ಮುಕ್ತರಾಗಿ ಅವರು ನನಗೆ ದೊರೆ
ಯಬೇಕು” ಎಂದು ಕೇಳಿಕೊಳ್ಳಲು ಧೃತರಾಷ್ಟ್ರನು ಅದಕ್ಕೆ ಒಡಂಬಟ್ಟು—
“ಇನ್ನೂ ಏನಾದರೂ ವರವನ್ನು ಬೇಡಿಕೊಳ್ಳುವದಿದ್ದರೆ ಬೇಡಿಕೋ” ಎಂದು
ದ್ರೌಪದಿಗೆ ಹೇಳಿದನು. ಆಗ ದ್ರೌಪದಿಯು—“ನನ್ನ ಪತಿಗಳ ರಾಜ್ಯವು ಅವ
ರಿಗೆ ತಿರುಗಿ ದೊರೆಯಬೇಕು” ಎಂದು ಕೇಳಿದಳು. ಅದಕ್ಕೂ ಧೃತರಾಷ್ಟ್ರನು
ಒಡಂಬಟ್ಟು ಧರ್ಮರಾಯನಿಗೆ—“ಧರ್ಮಾ, ನೀನು ನಿನ್ನ ಪತಿವ್ರತಾ ಭಾ
ರ್ಯೆಯನ್ನೂ ನಿನ್ನ ತಮ್ಮಂದಿರನ್ನೂ ಕೂಡಿಕೊಂಡು ನಿನ್ನ ರಾಜಧಾನಿಗೆ
ಹೋಗಿ ನಿನ್ನ ರಾಜ್ಯವನ್ನು ಕಾಪಾಡು. ಹಾಗೂ ನನ್ನ ಕಡೆಗೆ ದೃಷ್ಟಿಯನ್ನಿ
ಟ್ಟು ದುರ್ಯೋಧನನ ದುರ್ಗುಣವನ್ನು ಮರೆತು ಅವನ ಸದ್ಗುಣದ ಕಡೆಗೆ
ಮಾತ್ರ ಲಕ್ಷ್ಯಕೊಡು ಮತ್ತು ಅವನನ್ನು ಕ್ಷಮಿಸು” ಎಂದು ಹೇಳಿದನು.
ಇದನ್ನು ಕೇಳಿ ಧರ್ಮರಾಜನು ತನ್ನ ತಮ್ಮಂದಿರನ್ನೂ ದ್ರೌಪದಿಯನ್ನೂ ಕೂ
ಡಿಕೊಂಡು ಆ ಸಭೆಯಿಂದ ಹೊರಟು ಕುಂತಿಯ ಕಡೆಗೆ ಹೋಗಿ ಅವಳನ್ನೂ,
ಇತರ ಸ್ತ್ರೀಯರನ್ನೂ ಕರಕೊಂಡು ತನ್ನ ಇಂದ್ರಪ್ರಸ್ಥ ರಾಜಧಾನಿಗೆ ಹೋ
ಗಲಿಕ್ಕೆ ಹೊರಟನು. ಇತ್ತ ಆ ದುರ್ಯೋಧನ, ದುಶ್ಶಾಸನ, ಕರ್ಣ ಮತ್ತು
ಶಕುನಿ ಈ ಚಾಂಡಾಲ ಚೌಕಡಿಯು ಅಂಧ ಧೃತರಾಷ್ಟ್ರನಿಗೆ ಪುನಃ ಗಂಟು

ಬಿದ್ದು ಅವನಿಗೆ—"ಹಾವಿನ ಬಾಲದ ಮೇಲೆ ಕಾಲು ಇಟ್ಟ ಬಳಿಕ ಅದನ್ನು ಕೊಲ್ಲದೆ ಹಾಗೇ ಹೋಗಗೊಡುವದು ಉಚಿತವೇ? ಇದರಿಂದ ನಮಗೆ ಸರ್ವಸ್ವ ನಾಶವಾಗುವದು. ಅರ್ಜುನನು ಗಾಂಡೀವ ಧನುಷ್ಯದ ಹುರಿಯನ್ನು ಜಗ್ಗಿ ಠಣತ್ಕಾರ ಮಾಡುತ್ತ ರಥದಲ್ಲಿ ಕುಳಿತುಕೊಂಡನೆಂದು ಹೇಳುತ್ತಾರೆ. ಭೀಮನಂತೂ ಕ್ರೋಧಸಂತಪ್ತನಾಗಿ ತನ್ನ ಗದೆಯನ್ನು ತನ್ನ ತಲೆಯ ಸುತ್ತಲು ತಿರವುತ್ತಾನೆ. ಆದುದರಿಂದ ಮುಂದೆ ನಮ್ಮ ಮೇಲೆ ಒದಗುವ ಭಯಂಕರ ಆಪತ್ತನ್ನು ತಪ್ಪಿಸಬೇಕೆಂದು ನಿನ್ನ ಮನಸ್ಸಿನಲ್ಲಿದ್ದರೆ ಧರ್ಮನಿಗೆ ಪುನಃ ದ್ಯೂತವನ್ನಾಡಲಿಕ್ಕೆ ಕರೆಯಿಸು. ನಾವು ಇನ್ನೊಂದೇ ಪಂಥವನ್ನು ಹಚ್ಚುತ್ತೇವೆ. ಅವರು ಗೆದ್ದರೆ ನಾವು ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಅನುಭೋಗಿಸುವೆವು. ಅವರು ಸೋತರೆ ಅವರು ಅದರಂತೆ ವನವಾಸಕ್ಕೆ ಹೋಗಬೇಕು. ದಯಮಾಡಿ ಧರ್ಮನನ್ನು ತಿರುಗಿ ಕರೆಸಿರಿ" ಎಂದು ಬಹಳ ಆಗ್ರಹ ಮಾಡಲಾಗಿ ಆ ಮುದುಕ ಧೃತರಾಷ್ಟ್ರನು ತನ್ನ ಹುಡುಗರ ಮೇಲಿನ ಕಕ್ಕುಲತೆಯಿಂದ ಧರ್ಮರಾಜನನ್ನು ತಿರುಗಿ ಕರೆಯಿಸಿದನು. ಧರ್ಮರಾಜನು ತನ್ನ ರಾಜಧಾನಿಗೆ ಹೋಗುವದಕ್ಕಾಗಿ ತನ್ನ ರಥದಲ್ಲಿ ಕಾಲಿಡುತ್ತಿರುವಷ್ಟರಲ್ಲಿಯೇ ಧೃತರಾಷ್ಟ್ರನಿಂದ ತಿರುಗಿ ಸಂದೇಶವು ಬಂದುದರಿಂದ ಅವನು ತಿರುಗಿ ಬಂದು, ತಿರುಗಿ ದ್ಯೂತವನ್ನಾಡಿ ತಿರುಗಿ ಸೋತನು. ಕೊನೆಗೆ ಧರ್ಮರಾಜನೂ, ಅವನ ನಾಲ್ಕು ಮಂದಿ ತಮ್ಮಂದಿರೂ ವಲ್ಕಲಗಳನ್ನು ಉಟ್ಟುಕೊಂಡು ವನವಾಸಕ್ಕೆ ಹೊರಟರು! ಸತೀ ದ್ರೌಪದಿಯು ತಾನೂ ವಲ್ಕಲವನ್ನು ಉಟ್ಟುಕೊಂಡು ಅವರ ಸಂಗಡ ಹೊರಟಳು! ವೃದ್ಧಳಾದ ಕುಂತಿಯು ನಿರುಪಾಯದಿಂದ ವಿದುರನ ಮನೆಯಲ್ಲಿ ನಿಂತುಕೊಂಡಳು. ಪಾಂಡವರ ಇತರ ಸ್ತ್ರೀಯರು ಸುಭದ್ರೆಯನ್ನು ಕರಕೊಂಡು ಶೋಕ ಮಾಡುತ್ತ ತಮ್ಮ ತಮ್ಮ ತವರುಮನೆಗಳಿಗೆ ಹೊರಟು ಹೋದರು.

ಈ ಪ್ರಕಾರ ಪಾಂಡವರಿಗೆ ಘನಘೋರವಾದ ಸಂಕಟವು ಒದಗಿದಾಗ್ಗೆ ಶ್ರೀಕೃಷ್ಣನು ಶಿಶುಪಾಲನ ಮಿತ್ರನಾದ ಶಾಲ್ವನನ್ನು ಮರ್ದನ ಮಾಡುವಲ್ಲಿ ತೊಡಗಿದ್ದನು. ಶಾಲ್ವನು ಯಾದವ ವಂಶವನ್ನು ಪೂರ್ಣವಾಗಿ ಸಂಹಾರ

ಮಾಡಬೇಕೆಂಬ ಅಪೇಕ್ಷೆಯಿಂದ ಶ್ರೀಶಂಕರನ ಆರಾಧನೆ ಮಾಡಿ "ಸೌಭ" ಎಂಬ ಪ್ರಚಂಡವಾದ ಒಂದು ವಿಮಾನವನ್ನು ಪಡೆದುಕೊಂಡಿದ್ದನು. ಅದು ಒಂದು ಕ್ಷಣದಲ್ಲಿ ಒಂದೇ ಇದ್ದಂತೆ ಕಾಣುತ್ತಿತ್ತು; ಇನ್ನೊಂದು ಕ್ಷಣದಲ್ಲಿ ಅನೇಕ ಇದ್ದಂತೆ ಕಾಣುತ್ತಿತ್ತು. ಒಂದು ಕ್ಷಣದಲ್ಲಿ ಕಣ್ಣಿಗೆ ಕಾಣುತ್ತಿತ್ತು. ಇನ್ನೊಂದು ಕ್ಷಣದಲ್ಲಿ ಅದೃಶ್ಯವಾಗುತ್ತಿತ್ತು. ಅದು ಒಮ್ಮೊಮ್ಮೆ ಭೂಮಿಯ ಮೇಲೆ ಇದ್ದಂತೆ ಕಾಣುತ್ತಿತ್ತು; ಒಮ್ಮೊಮ್ಮೆ ಆಕಾಶದಲ್ಲಿ ತಿರುಗಾಡುವಂತೆ ಕಾಣುತ್ತಿತ್ತು. ಒಮ್ಮೊಮ್ಮೆ ಪರ್ವತ ಶಿಖರಗಳ ಮೇಲೆ ಕಾಣುತ್ತಿತ್ತು; ಒಮ್ಮೊಮ್ಮೆ ನದಿ ಮೊದಲಾದ್ದರ ನೀರೊಳಗೆ ಇದ್ದಂತೆ ಕಾಣುತ್ತಿತ್ತು. ಇಂಥ ಪ್ರಚಂಡವಾದ ವಿಮಾನದಲ್ಲಿ ಶಾಲ್ವನು ಕುಳಿತು ತನ್ನ ಸೈನ್ಯದವರಿಂದ ದ್ವಾರಕೆಗೆ ಮುತ್ತಿಗೆ ಹಾಕಿಸಿ, ತನ್ನ ವಿಮಾನದೊಳಗಿಂದ ದ್ವಾರಕೆಯ ಜನರ ಮೇಲೆ ಕಲ್ಲು, ಗಿಡ, ಹಾವು, ಕತ್ತಿ ಮುಂತಾದ ಅನೇಕ ಶಸ್ತ್ರಾಸ್ತ್ರಗಳನ್ನು ಒಗೆದು ವಿಶೇಷ ಅರ್ಥಹಾನಿಯನ್ನೂ ಪ್ರಾಣಹಾನಿಯನ್ನೂ ಮಾಡಿದನು. ಪ್ರದ್ಯುಮ್ನನು ಇತರ ಯಾದವ ವೀರರನ್ನು ಕೂಡಿಕೊಂಡು ಬಹಳ ಪರಾಕ್ರಮದಿಂದ ಶತ್ರುಗಳ ಮುತ್ತಿಗೆಯನ್ನು ಪ್ರತೀಕಾರ ಮಾಡಿದನು. ಈ ಯುದ್ಧವು ಇಪ್ಪತ್ತೇಳು ದಿವಸ ನಡೆಯಿತು. ಒಮ್ಮೆ ಪ್ರದ್ಯುಮ್ನನು ಮೂರ್ಛಿತನಾಗಿ, ಸಮರಾಂಗಣದಿಂದ ಹೊರಟು ಹೋಗಿ, ಪುನಃ ಎಚ್ಚತ್ತು, ಪುನಃ ಸಮರಾಂಗಣಕ್ಕೆ ಬಂದು, ಶಾಲ್ವನ ಅಮಾತ್ಯನಾದ ದ್ಯುಮಾನನನ್ನು ಸಂಹಾರ ಮಾಡಿದನು. ಸಾಂಬ, ಸಾತ್ಯಕಿ ಮೊದಲಾದ ಯಾದವ ವೀರರು ಸೌಭ ವಿಮಾನದೊಳಗೆ ಕುಳಿತಿದ್ದ ಸೈನಿಕರ ಮೇಲೆ ತಮ್ಮ ಬಾಣಗಳನ್ನು ಪ್ರಯೋಗ ಮಾಡಿ ಅವರ ತಲೆಗಳನ್ನು ಕಡಿದು ಅವು ಸಮುದ್ರದಲ್ಲಿ ಪಟಪಟನೆ ಬೀಳುವಂತೆ ಮಾಡಿದರು. ಇತ್ತ ಶ್ರೀಕೃಷ್ಣನು ಇಂದ್ರಪ್ರಸ್ಥದಲ್ಲಿರುವಾಗ ದುಶ್ಚಿನ್ಹಗಳಾದುದರಿಂದ ಅವನು ಅಲ್ಲಿಂದ ಹೊರಟು ಬಂದು ಶಾಲ್ವನ ವಿಮಾನವನ್ನು ಮುರಿದು ಹಾಕಿ ಶಾಲ್ವನನ್ನು ಕೊಂದನು. ಆ ಮೇಲೆ ಶ್ರೀಕೃಷ್ಣನಿಗೆ ಪಾಂಡವರು ದ್ಯೂತದಲ್ಲಿ ಸೋತು ಅರಣ್ಯಕ್ಕೆ ಹೋದ ವರ್ತಮಾನವು ತಿಳಿಯಿತು. ಇದೇ ಹೊತ್ತಿಗೆ ಸುಭದ್ರೆಯು ತನ್ನ ಮೂರು ವರ್ಷದ ಮಗನಾದ ಅಭಿಮನ್ಯುವಿನನ್ನು ಕರಕೊಂಡು ತವರುಮನೆಗೆ ಬಂದಳು. ಅವಳ ಬಾಯಿಂದ ಈ ಯಾವತ್ತು ವರ್ತಮಾನವನ್ನು–ವಿಶೇಷವಾಗಿ ದ್ರೌಪದಿಗೆ

ದುರ್ಯೋಧನ ದುಶ್ಶಾಸನಾದಿಗಳು ಮಾಡಿದ ವಿಟಂಬನೆಯನ್ನು ಶ್ರೀಕೃಷ್ಣನು ಕೇಳಿ ಬಹಳ ವ್ಯಸನಪಟ್ಟನು. ಆದುದರಿಂದ ಅವನು ಅರಣ್ಯದಲ್ಲಿ ವಾಸವಾಡುತ್ತಿದ್ದ ಪಾಂಡವರಿಗೆ ಸಮಾಧಾನ ಹೇಳುವದಕ್ಕಾಗಿ ತತ್ಕಾಲವೇ ಅವರಿದ್ದಲ್ಲಿಗೆ ಹೊರಟು ಹೋದನು. ಅವನ ಸಂಗಡ ವಸುದೇವ, ಬಲರಾಮ ಮೊದಲಾದವರು ಇದ್ದರು. ಅವರೆಲ್ಲರು ಅರಣ್ಯದಲ್ಲಿ ಪಾಂಡವರನ್ನು ಕಂಡ ಬಳಿಕ ದುಃಖ ಮಾಡುತ್ತ ಧರ್ಮರಾಜನ ಸುತ್ತಲು ಕುಳಿತುಕೊಂಡಾಗ ದ್ರೌಪದಿಯು ಶ್ರೀಕೃಷ್ಣನಿಗೆ ಶರಣು ಹೋಗಿ ಅಂದದ್ದೇನಂದರೆ:—“ಕೃಷ್ಣಾ, ನೀನು ಪ್ರತ್ಯಕ್ಷ ವಿಷ್ಣುವಿನ ಅವತಾರವಿರುತ್ತೀ. ನೀನು ಈ ಸ್ಥಾವರ ಜಂಗಮಾತ್ಮಕ ವಿಶ್ವವನ್ನು ಉತ್ಪನ್ನ ಮಾಡಿರುತ್ತೀ. ನೀನೇ ಸಕಲ ಪ್ರಾಣಿಗಳ ರಕ್ಷಕನು ಇರುತ್ತೀ. ನೀನೇ ಯಾವತ್ತು ಮನುಷ್ಯರಿಗೆ ಮರ್ತ್ಯತ್ವವನ್ನೂ, ದೇವತೆಗಳಿಗೆ ಅಮರತ್ವವನ್ನೂ ಉಂಟು ಮಾಡಿರುತ್ತೀ. ನಾನು ಪಾಂಡವರ ಧರ್ಮಪತ್ನಿಯೂ, ನಿನ್ನ ತಂಗಿಯೂ ಇದ್ದು ದುಶ್ಶಾಸನನು ನನ್ನ ಕೂದಲುಗಳನ್ನು ಹಿಡಿದುಕೊಂಡು ನನ್ನನ್ನು ಸಭೆಗೆ ಎಳೆದೊಯ್ಯಬೇಕೇ? ನಾನು ರಜಸ್ವಲೆಯಾಗಿ ಏಕವಸ್ತ್ರವನ್ನು ಧರಿಸಿದಾಗ್ಯೂ ಆ ನೀಚನು ನನ್ನನ್ನು ಈ ಪ್ರಕಾರ ಎಳೆದದ್ದು ನ್ಯಾಯವೇ? ಸಭೆಯಲ್ಲಿ ನನಗಾದ ಅವಮಾನವನ್ನು ಕಂಡು ಧೃತರಾಷ್ಟ್ರನ ಮಕ್ಕಳು ಗಹಗಹಿಸಿ ನಕ್ಕರು. ಪಾಂಡವರೂ, ಪಾಂಚಾಲರೂ, ವೃಷ್ಣಿಗಳೂ ಜೀವಂತರಿದ್ದು ದುರ್ಯೋಧನನು ನನ್ನ ಕಡೆಯಿಂದ ದಾಸೀ ಭಾವದಿಂದ ಸೇವೆಯನ್ನು ಮಾಡಿಸಿಕೊಳ್ಳಬೇಕೆಂದು ದುಷ್ಟ ಅಪೇಕ್ಷೆಯನ್ನು ಮಾಡಿದನು. ನನ್ನ ಪತಿಗಳು ಜೀವಂತರಿದ್ದು ಅವರು ತಮ್ಮ ಕಣ್ಣಮುಂದೆ ನಡೆದ ವಿಟಂಬನೆಯನ್ನು ನೋಡಿ ಸುಮ್ಮನಾಗಬೇಕೇ? ಪತಿಯು ಎಂಥ ಬಡವನು ಅಥವಾ ಅಶಕ್ತನು ಇದ್ದಾಗ್ಯೂ ಅವನು ತನ್ನ ಸತಿಯನ್ನು ರಕ್ಷಣ ಮಾಡುತ್ತಾನೆ. ಆದರೆ ನನ್ನ ಪತಿಗಳು ಸಮರ್ಥರಿದ್ದು ಅವರು ನನ್ನ ಉಪೇಕ್ಷೆಯನ್ನು ಮಾಡಿದರು. ನನ್ನ ಕಡೆಗೆ ಕಣ್ಣು ತೆರೆದು ಸಹ ನೋಡಲಿಲ್ಲ. ದುಷ್ಟ ದುರ್ಯೋಧನನು ಇನ್ನೂ ಜೀವಂತ ಉಳಿದಿರುತ್ತಾನೆ. ಆದುದರಿಂದ ಭೀಮಾರ್ಜುನರ ಸಾಮರ್ಥ್ಯಕ್ಕೂ ಪೌರುಷಕ್ಕೂ ಧಿಕ್ಕಾರವಿರಲಿ. ನಾನು ಪಾಂಡವರ ಪ್ರಿಯಪತ್ನಿಯು! ದ್ರುಪದರಾಜನ ಮಗಳು! ಪಾಂಡುರಾಜನ ಸೊಸೆಯು! ರಾಜಸೂಯ ಯಜ್ಞದಲ್ಲಿ ಪವಿತ್ರ ಜಲದಿಂದ

ಅಭಿಷೇಕ ಮಾಡಲ್ಪಟ್ಟ ಈ ನನ್ನ ಕೂದಲುಗಳನ್ನು ದುಶ್ಶಾಸನನು ಹಿಡಿದು ದರ ದರ ಎಳೆಯುತ್ತ ಸಭೆಗೆ ಒಯ್ದನು" ಎಂದು ಹೇಳಿ ತನ್ನ ಮೋರೆ ಮುಚ್ಚಿಕೊಂಡು ದೀರ್ಘ ಶ್ವಾಸ ತೆಗೆದು ಅಳಹತ್ತಿದಳು. ಈ ಪ್ರಕಾರ ಅವಳು ಹೆಚ್ಚೆಚ್ಚು ಅಳುತ್ತ—"ನನ್ನ ಪಾಲಿಗೆ ಗಂಡಂದಿರು ಇಲ್ಲ, ಮಕ್ಕಳಿಲ್ಲ, ಅಣ್ಣ ತಮ್ಮಂದಿರಿಲ್ಲ, ತಂದೆ ಇಲ್ಲ. ಯಾರೂ ಇಲ್ಲ! ಕೃಷ್ಣಾ, ನನ್ನ ಪಾಲಿಗೆ ನೀನೂ ಇಲ್ಲ! ಆ ಕ್ಷುದ್ರರು ಈ ಪ್ರಕಾರ ನನ್ನ ದುರ್ದಶೆ ಮಾಡಿದ್ದನ್ನು ನೀವೆಲ್ಲರು ನೋಡಿ ತಣ್ಣಗೆ ಕೂತಿರಿ. ಅಂದಮೇಲೆ ನಾನಿನ್ನೇನು ಹೇಳಲಿ?" ಎಂದು ಮುಕ್ತ ಕಂಠದಿಂದ ಅಳಲಿಕ್ಕೆ ಹತ್ತಿದಳು! ಆಗ ಶ್ರೀಕೃಷ್ಣನು ದ್ರೌಪದಿಗೆ—"ತಂಗೀ! ನೀನು ಯಾರ ಅನ್ಯಾಯವಾದ ಕೃತ್ಯದ ಸಲುವಾಗಿ ಇಷ್ಟು ಸಿಟ್ಟು ಆಗಿರುವಿಯೋ ಅವರು ತೀವ್ರವಾಗಿ ಅರ್ಜುನನ ಬಾಣಗಳಿಂದ ಸಮರಾಂಗಣದೊಳಗೆ ಗತಪ್ರಾಣರಾಗಿ ಅವರವರ ಹೆಂಡಂದಿರು ಇದೇ ಪ್ರಕಾರ ಅಳುವ ಪ್ರಸಂಗವು ಬಾರದೆ ಇರಲಾರದೆಂದು ನೀನು ನಿಶ್ಚಯವಾಗಿ ತಿಳಿದುಕೋ. ಇದು ನನ್ನ ಸತ್ಯ ಪ್ರತಿಜ್ಞೆಯೆಂದು ನಂಬು. ಆಕಾಶವು ಕೆಳಗೆ ಕಡಕೊಂಡು ಬಿದ್ದರೂ ಬಿದ್ದೀತು! ಹಿಮಾಲಯ ಪರ್ವತವು ಉರುಳಿಕೊಂಡು ಬಿದ್ದರೂ ಬಿದ್ದೀತು! ಭೂಮಿಯು ಚಕ್ಕಳಿಯಾಗಿ ಬಿದ್ದರೂ ಬಿದ್ದೀತು! ಸಮುದ್ರವು ಒಣಗಿದರೂ ಒಣಗೀತು! ಆದರೆ ನನ್ನ ಪ್ರತಿಜ್ಞೆಯು ಎಂದೂ ಸುಳ್ಳಾಗಲಾರದು" ಎಂದು ಸಮಾಧಾನ ಹೇಳಿದನು. ಇದನ್ನು ಕೇಳಿ ದ್ರೌಪದಿಯು ಅರ್ಜುನನ ಕಡೆಗೆ ಓರೆ ನೋಟದಿಂದ ನೋಡಲಾಗಿ ಅವನು—"ಶುಭದರ್ಶನಿಯಾದ ದ್ರೌಪದಿಯೇ, ಅಳಬೇಡ. ಮಧುಸೂದನನು ಹೇಳಿದಂತೆಯೇ ಆಗುವದು. ಅದು ಎಂದೂ ಹುಸಿಯಾಗಲಾರದು" ಎಂದು ಹೇಳಿದನು. ಕೊನೆಗೆ ಶ್ರೀಕೃಷ್ಣನು ದ್ರೌಪದಿಗೆ—"ನಾನು ದ್ವಾರಕೆಯಲ್ಲಿದ್ದರೆ ಈ ನಿಂದ್ಯವಾದ ದ್ಯೂತವನ್ನು ಮಾಡಗೊಡುತ್ತಿದ್ದಿಲ್ಲ. ನಾನು ಶಾಲ್ವನ ಮೇಲೆ ಸಾಗಿ ಹೋಗುವದಕ್ಕಾಗಿ ದ್ವಾರಕೆಯನ್ನು ಬಿಟ್ಟು ದೂರ ಹೋಗಿದ್ದೆನು. ನನಗೆ ಈ ದ್ಯೂತದ ವರ್ತಮಾನವು ಗೊತ್ತಾಗಿದ್ದರೆ ಆಗಿಂದಾಗಲೇ ಹಸ್ತಿನಾಪುರಕ್ಕೆ ಬಂದು ಭೀಷ್ಮ, ದ್ರೋಣ, ಧೃತರಾಷ್ಟ್ರರಿಗೆ ತಿಳಿಸಿ ಹೇಳುತ್ತಿದ್ದೆನು. ರಾಜರಿಗೆ ಸ್ತ್ರೀಯರು, ಜೂಜಾಡುವದು, ಬೇಟೆಯಾಡುವದು ಮತ್ತು ಮದ್ಯ ಕುಡಿಯು

ವದು ಈ ನಾಲ್ಕು ವ್ಯಸನಗಳು ಭಯಂಕರ ಶತ್ರುಗಳಿರುತ್ತವೆ. ಶಾಸ್ತ್ರಜ್ಞರು ಈ ನಾಲ್ಕು ವ್ಯಸನಗಳ ಬಗ್ಗೆ—ವಿಶೇಷವಾಗಿ ಜೂಜಾಡುವದರ ಬಗ್ಗೆ—ರಾಜರಿಗೆ ಅವಶ್ಯವಾಗಿ ಉಪದೇಶ ಮಾಡತಕ್ಕದ್ದು. ಯಾಕಂದರೆ—ಈ ಜೂಜಾಡುವ ವ್ಯಸನದಿಂದ ವರ್ಷಾನುವರ್ಷ ಸಂಪಾದಿಸಿದ ಸಂಪತ್ತು ಒಂದೇ ದಿವಸದಲ್ಲಿ ಹೊರಟು ಹೋಗುತ್ತದೆ. ಇದಲ್ಲದೆ ಪರಸ್ಪರರನ್ನು ಬೈಯ್ಯುವದು, ನಿಂದಿಸುವದು, ಜಗಳಾಡುವದು ಈ ಜೂಜಿನ ಪರಿಣಾಮಗಳಿರುತ್ತವೆ. ಇದನ್ನು ನಾನು ಕೌರವರಿಗೆ ಹೇಳಿ ದುರ್ಯೋಧನನಿಗೆ ದ್ಯೂತ ಆಡುವದನ್ನು ಬಿಡಿಸುತ್ತಿದ್ದೆನು. ಒಂದು ವೇಳೆ ಅವನು ನನ್ನ ಮಾತು ಕೇಳದಿದ್ದರೆ ಅವನನ್ನು ನಾನು ಹಿಡಿದು ಕಟ್ಟುತ್ತಿದ್ದೆನು. ಈ ನಿಮ್ಮ ದುರ್ದಶೆಯನ್ನು ನೋಡಿ ಒಬ್ಬ ಪಾಷಾಣ ಹೃದಯನಿಗೆ ಸಹ ದಯವು ಹುಟ್ಟದೆ ಇರಲಾರದು. ನೀವು ಹದಿಮೂರು ವರ್ಷ ಹೇಗೆ ದುಃಖವನ್ನು ಸಹನ ಮಾಡಿಕೊಳ್ಳುವಿರೋ ತಿಳಿಯದು. ಧರ್ಮರಾಜನು ತನ್ನ ಧರ್ಮಪರಾಯಣತೆಯಿಂದ ನಿಮ್ಮೆಲ್ಲರಿಗೂ ಈ ಸಂಕಟದಿಂದ ಪಾರಮಾಡುವನು. ಬಹುಶಃ ನೀವು ಹದಿಮೂರು ವರ್ಷ ಈ ಸಂಕಟವನ್ನು ಅನುಭೋಗಿಸಿ ಬಂದ ನಂತರ ಈ ದುಷ್ಟರು ನಿಮಗೆ ನಿಮ್ಮ ರಾಜ್ಯವನ್ನು ಕೊಡಲಿಕ್ಕಿಲ್ಲ. ಆಗ್ಗೆ ನಾನು ನನ್ನ ಎಲ್ಲ ಸಾಮರ್ಥ್ಯವನ್ನು ಪ್ರಕಟಮಾಡಿ, ನಿಮ್ಮ ಕೈಯಿಂದಲೇ ಆ ದುಷ್ಟರ ನಾಶವನ್ನು ಮಾಡಿಸುವೆನು" ಎಂದು ಪಾಂಡವರಿಗೆ ಮತ್ತು ದ್ರೌಪದಿಗೆ ಸಮಾಧಾನ ಹೇಳಿದನು. ಆ ಬಳಿಕ ಶ್ರೀಕೃಷ್ಣನು ಇತರ ಯಾದವರನ್ನು ಕೂಡಿಕೊಂಡು ದ್ವಾರಕೆಗೆ ಮರಳಿ ಹೋದನು.

ಆ ಮೇಲೆ ಪಾಂಡವರು (೧೨) ವರ್ಷಗಳನ್ನು ಅರಣ್ಯವಾಸದಲ್ಲಿಯೂ (೧) ವರ್ಷವನ್ನು ಅಜ್ಞಾತವಾಸದಲ್ಲಿಯೂ ದುಃಖದಿಂದ ಕಳೆದ ಮೇರೆಗೆ ಶ್ರೀಕೃಷ್ಣನಾದರೂ ಆ ಹದಿಮೂರು ವರ್ಷಗಳನ್ನು ದುಃಖದಿಂದ ಕಳೆದನು. ಶ್ರೀಕೃಷ್ಣನ ವಯಸ್ಸು ಪಾಂಡವರ ರಾಜಸೂಯಯಜ್ಞದ ಕಾಲಕ್ಕೆ (೬೯) ಇದ್ದು, ಕೌರವರ ದ್ಯೂತದ ಕಾಲಕ್ಕೆ (೭೦) ಇತ್ತು. ಈ ಇಳಿತರದ ವಯಸ್ಸಿನಲ್ಲಿ ಮನುಷ್ಯನು ತನ್ನ ಮನಸ್ಸನ್ನು ಗೃಹಸ್ಥಾಶ್ರಮದಿಂದ ತೆಗೆದು ಉಪನಿಷತ್ತುಗಳನ್ನು ಗ್ರಹಿಸುವದರ ಕಡೆಗೆ ತಿರುಗಿಸಬೇಕೆಂತಲೂ, ಧರ್ಮ-ಅರ್ಥ-ಕಾಮಗಳ

ನ್ನು ಬಿಟ್ಟು ಮೋಕ್ಷದ ಕಡೆಗೆ ಹಚ್ಚಬೇಕೆಂತಲೂ ಧರ್ಮಶಾಸ್ತ್ರವಿರುತ್ತದೆ. ಮಗನಿಗೆ ಮಗನು ಹುಟ್ಟಿದರೆ ಮನುಷ್ಯನು ಅರಣ್ಯದ ಆಶ್ರಯವನ್ನು ಮಾಡಬೇಕೆಂದು ಮನುವಿನ ವಚನವಿರುತ್ತದೆ. ಇದೇ ಪ್ರಕಾರ ಶ್ರೀಕೃಷ್ಣನು ಮಾಡಿದನು. ಅವನು ಬಾಲ್ಯದಲ್ಲಿ ಮಲ್ಲಶ್ರೇಷ್ಠನೂ, ತಾರುಣ್ಯದಲ್ಲಿ ಧನುರ್ಧರ ಶ್ರೇಷ್ಠನೂ ಆಗಿ, ಇಳಿತರದ ವಯಸ್ಸಿನಲ್ಲಿ ಯೋಗಿಶ್ರೇಷ್ಠನು ಆದನು. ಶ್ರೀಕೃಷ್ಣನು ಇನ್ನೂ ಜಗತ್ತಿಗೆ ಮೋಕ್ಷಮಾರ್ಗವನ್ನು ಉತ್ತಮ ರೀತಿಯಿಂದ ತಿಳಿಸಿಕೊಟ್ಟು ಧರ್ಮಸಂಸ್ಥಾಪವನ್ನು ಮಾಡುವದಿತ್ತು. ಆದುದರಿಂದ ಅವನು ಈ ಹದಿಮೂರು ವರ್ಷಗಳನ್ನು ದ್ವಾರಕೆಯಲ್ಲಿ ತಪಶ್ಚರಣದಲ್ಲಿಯೂ, ವೈರಾಗ್ಯದಲ್ಲಿಯೂ ಕಳೆದನು. ಪಾಂಡವರು ಹನ್ನೆರಡು ವರ್ಷ ವನವಾಸದಲ್ಲಿ ಕಳೆದ ನಂತರ ವಿರಾಟನ ರಾಜ್ಯದಲ್ಲಿ ಒಂದು ವರ್ಷ ಅಜ್ಞಾತವಾಸವನ್ನು ಅನುಭೋಗಿಸುತ್ತಿರುವಾಗ್ಗೆ ಕೌರವರು ವಿರಾಟರಾಜ್ಯದ ಮೇಲೆ ಸಾಗಿ ಬಂದರು. ಆ ಕಾಲಕ್ಕೆ ಪಾಂಡವರು ಪ್ರಕಟರಾಗಿ ಕೌರವರ ಮುತ್ತಿಗೆಯನ್ನು ಪ್ರತೀಕಾರ ಮಾಡಿದರು. ಆಗ ವಿರಾಟರಾಜನು ಸಂತುಷ್ಟನಾಗಿ ತನ್ನ ಸುಂದರ ಕನ್ಯೆಯಾದ ಉತ್ತರೆಯನ್ನು ಅರ್ಜುನನಿಗೆ ಮದುವೆ ಮಾಡಿಕೊಡುತ್ತೇನೆಂದು ಹೇಳಿದನು. ಆದರೆ ಅರ್ಜುನನು ಉತ್ತರೆಯು ತನ್ನ ಶಿಷ್ಯಳಿದ್ದು ಮಗಳಂತೆ ಇರುವದರಿಂದ ತಾನು ಅವಳನ್ನು ಸ್ವೀಕಾರ ಮಾಡುವದಿಲ್ಲೆಂತಲೂ, ತನ್ನ ಮಗನಾದ ಅಭಿಮನ್ಯುವಿಗೆ ಅವಳನ್ನು ಮದುವೆ ಮಾಡಿಕೊಡಬೇಕೆಂತಲೂ ವಿರಾಟರಾಜನಿಗೆ ತಿಳಿಸಿದನು. ಅದಕ್ಕೆ ವಿರಾಟರಾಜನು ಒಪ್ಪಿಕೊಳ್ಳಲಾಗಿ ಶ್ರೀಕೃಷ್ಣನು ಆನಂದದಿಂದ ಅಭಿಮನ್ಯುವಿನನ್ನೂ ಅವನ ತಾಯಿಯಾದ ಸುಭದ್ರೆಯನ್ನೂ ಯಾದವರನ್ನೂ ಕರಕೊಂಡು ವಿರಾಟರಾಜ್ಯಕ್ಕೆ ಬಂದು ಸಡಗರದಿಂದ ಲಗ್ನಸಮಾರಂಭವನ್ನು ನೆರವೇರಿಸಿದನು. ಆ ಕಾಲಕ್ಕೆ ಅಭಿಮನ್ಯುವು ಹದಿನಾರು ವರ್ಷದವನಿದ್ದನು. ಅಭಿಮನ್ಯುವಿಗೆ ಶ್ರೀಕೃಷ್ಣನು ಸ್ವತಃ ಧನುರ್ವಿದ್ಯೆಯನ್ನು ಕಲಿಸಿದ್ದನು. ಆದುದರಿಂದ ಶ್ರೀಕೃಷ್ಣನ ಶಿಷ್ಯನೂ, ಅರ್ಜುನನ ಪುತ್ರನೂ ಆದ ಅಭಿಮನ್ಯುವು ಮಹಾಧನುರ್ಧರನಾಗಿದ್ದನೆಂಬದರಲ್ಲಿ ಆಶ್ಚರ್ಯವೇನು? ವಿರಾಟರಾಜ್ಯದಲ್ಲಿ ಅಭಿಮನ್ಯುವಿನ ಲಗ್ನವಾದ ನಂತರ ಪಾಂಡವರು ದುರ್ಯೋಧನನ ಕಡೆಗೆ ತಮ್ಮ ರಾಜ್ಯವನ್ನು ತಿರುಗಿ ಬೇಡುವದಕ್ಕಾಗಿ ಒಬ್ಬ ದೂತನನ್ನು ಕಳಿಸಿದರು. ಅವರೆ

ದುರ್ಯೋಧನನು ಅವರಿಗೆ—"ನೀವು ಹದಿಮೂರು ವರ್ಷ ಮುಗಿಯುವ ಗರೊಳಗಾಗಿ ಪ್ರಕಟರಾದಿರಿ. ಅದುದರಿಂದ ನೀವು ಪುನಃ ಹನ್ನೆರಡು ವರ್ಷ ವನವಾಸವನ್ನೂ, ಒಂದು ವರ್ಷ ಅಜ್ಞಾತವಾಸವನ್ನೂ ಅನುಭೋಗಿಸಬೇಕು" ಎಂದು ಭೀಷ್ಮನ ಅಭಿಪ್ರಾಯದ ವಿರುದ್ಧವಾಗಿ ಉತ್ತರವನ್ನು ಹೇಳಿಕಳಿಸಿದನು. ಆದುದರಿಂದ ಶ್ರೀಕೃಷ್ಣನು ಮೊದಲೇ ಹೇಳಿದಂತೆ ಪಾಂಡವ ಕೌರವರ ನಡುವೆ ಯುದ್ಧವು ಆರಂಭವಾಗುವ ಪ್ರಸಂಗವು ಬರಲು, ಪಾಂಡವರು ದ್ರುಪದನ ಮತ್ತು ವಿರಾಟನ ಸೈನ್ಯವನ್ನು ತೆಗೆದುಕೊಂಡು ಉಪಲವ್ಯವೆಂಬ ಕೌರವರ ರಾಜ್ಯದ ಸೀಮೆಯ ಹತ್ತರ ಬಂದು ಇಳಿದುಕೊಂಡರು. ಹಾಗೂ ಎಲ್ಲ ರಾಜರ ಕಡೆಗೆ ತಮಗೆ ಸಹಾಯ ಮಾಡುವದಕ್ಕಾಗಿ ನಿರೂಪವನ್ನು ಕಳಿಸಿದರು. ದುರ್ಯೋಧನನಾದರೂ ತಮ್ಮ ದೂತರನ್ನು ಎಲ್ಲ ರಾಜರ ಕಡೆಗೆ ಕಳಿಸಿ ತನಗೆ ಯಾರು ಯಾರು ಸಹಾಯ ಮಾಡುತ್ತಾರೆಂಬುದನ್ನು ಕೇಳಿಕೊಂಡು ಅವರವರ ಸಹಾಯವನ್ನು ತೆಗೆದುಕೊಳ್ಳುವ ಪ್ರಯತ್ನವನ್ನು ನಡೆಸಿದನು. ಈ ಸಾಮ್ರಾಜ್ಯದ ಜಗಳವು ಹಿಂದುಸ್ಥಾನದ ತುಂಬೆಲ್ಲ ವ್ಯಾಪಿಸಿ ಎಲ್ಲ ರಾಜರು ತಮ್ಮ ಮನಸ್ಸಿನ ಒಲವಿನ ಪ್ರಕಾರ ಪಾಂಡವರ ಅಥವಾ ಕೌರವರ ಪಕ್ಷಕ್ಕೆ ಕೂಡಿಕೊಂಡು ಯುದ್ಧ ಮಾಡುವದಕ್ಕೆ ಸಿದ್ಧರಾದರು. ಶ್ರೀಕೃಷ್ಣನ ಸಹಾಯವನ್ನು ಕೇಳುವದಕ್ಕಾಗಿ ಅರ್ಜುನನು ದ್ವಾರಕೆಗೆ ಸ್ವತಃ ಹೋದನು. ಈ ವರ್ತಮಾನವು ಗೊತ್ತಾದ ಕೂಡಲೆ ದುರ್ಯೋಧನನು ಸಹ ಶ್ರೀಕೃಷ್ಣನ ಕಡೆಗೆ ಹೋದನು. ಈ ಇಬ್ಬರೂ ಒಂದೇ ಕಾಲಕ್ಕೆ ಶ್ರೀಕೃಷ್ಣನನ್ನು ಕಾಣಲಿಕ್ಕೆ ಹೋದರು. ಆ ಕಾಲಕ್ಕೆ ಶ್ರೀಕೃಷ್ಣನು ಮಲಗಿಕೊಂಡದ್ದರಿಂದ ದುರ್ಯೋಧನನು ಹೋದವನೇ ಅಹಂಭಾವದಿಂದ ಅವನ ತಲೆಯ ಹತ್ತರ ಹೋಗಿ ಕುಳಿತನು. ಅರ್ಜುನನು ಶ್ರೀಕೃಷ್ಣನ ಶಿಷ್ಯನಿದ್ದುದರಿಂದ ಅವನು ಸ್ವಾಭಾವಿಕವಾಗಿ ಶ್ರೀಕೃಷ್ಣನ ಪಾದದ ಹತ್ತರ ಕುಳಿತನು. ಸ್ವಲ್ಪ ಹೊತ್ತಿನ ನಂತರ ಶ್ರೀಕೃಷ್ಣನು ತನ್ನ ಹಾಸಿಗೆಯ ಮೇಲೆ ಎದ್ದು ಕೂಡ್ರಲಾಗಿ ಅವನು ಅರ್ಜುನನ್ನು ಮೊದಲಿಗೆ ಕಂಡನು. ಆಗ ಅರ್ಜುನನು ಶ್ರೀಕೃಷ್ಣನಿಗೆ ಕೈಮುಗಿದು ತಾನು ಬಂದ ಉದ್ದೇಶವನ್ನು ಅವನಿಗೆ ತಿಳಿಸಿದನು. ಆ ನಂತರ ಅವನು ದುರ್ಯೋಧನನನ್ನು ನೋಡಿದ್ದರಿಂದ ಅವನ ಕಡೆಯಿಂದಲೂ ಯಾವತ್ತು ಸಂಗತಿಯನ್ನು ಕೇಳಿಕೊಂ

ಡನು. ಆ ಮೇಲೆ ಶ್ರೀಕೃಷ್ಣನು ಅವರನ್ನುದ್ದೇಶಿಸಿ—"ನೀವಿಬ್ಬರೂ ನನಗೆ ಸಮಾನರಾದ ಅನುಬಂಧುಗಳು ಇದ್ದು ಸಮಾನರಾಗಿಯೇ ಮಾನ್ಯರಿರುತ್ತೀರಿ. ಈಗ ನಾನು ವೃದ್ಧಾವಸ್ಥೆಯಲ್ಲಿರುವದರಿಂದ ನನ್ನಿಂದ ಯುದ್ಧ ಮಾಡುವದು ಆಗುವದಿಲ್ಲ. ಬೇಕಾದರೆ ಯುದ್ಧದಲ್ಲಿ ಆಲೋಚನೆಯನ್ನು ಹೇಳುತ್ತ ಕೂಡ್ರುವೆನು. ಇದಕ್ಕಿಂತ ಹೆಚ್ಚಿನ ಕೆಲಸವೇನೂ ನನ್ನಿಂದ ಆಗುವಂತಿಲ್ಲ. ನಿಮ್ಮಲ್ಲಿ ಬೇಕಾದವರು ನನ್ನೊಬ್ಬನನ್ನು ಆರಿಸಿಕೊಳ್ಳಬೇಕು. ಇನ್ನೊಬ್ಬರು ನಮ್ಮ ಯಾದವ ಸೈನ್ಯವನ್ನು ತೆಗೆದುಕೊಳ್ಳಬೇಕು. ಅರ್ಜುನನು ಚಿಕ್ಕವನಿದ್ದಾನೆ. ಆದುದರಿಂದ ಮೊದಲಿಗೆ ಬೇಡಿಕೊಳ್ಳುವ ಅಧಿಕಾರವು ಅವನದಿರುವದು. ಅರ್ಜುನಾ, ಮಾತಾಡು. ನಿನಗೆ ಯಾರು ಬೇಕು ಹೇಳು" ಎಂದು ಕೇಳಿದನು. ತತ್ಕಾಲವೇ ಅರ್ಜುನನು—"ನನಗೆ ನೀನೊಬ್ಬನೇ ಇದ್ದರೆ ಸಾಕು" ಎಂದು ಉತ್ತರ ಕೊಟ್ಟನು. ದುರ್ಯೋಧನನಿಗೆ ಶ್ರೀಕೃಷ್ಣನು ಬೇಡಾಗಿದ್ದನು. ಆದುದರಿಂದ ಅವನು ತನಗೆ ಯಾದವ ಸೈನ್ಯವು ಸಿಕ್ಕದ್ದರಿಂದ ಸಂತೋಷಪಟ್ಟನು. ಈ ಪ್ರಕಾರ ಉಭಯತರೂ ಸಂತೋಷಪಟ್ಟರು. ಆ ಮೇಲೆ ದುರ್ಯೋಧನನು ಬಲರಾಮನ ಕಡೆಗೆ ಹೋದನು. ಶ್ರೀಕೃಷ್ಣನು ಅರ್ಜುನನ ಕಡೆಗೆ ಹೋದ ಸಂಗತಿಯನ್ನು ಕೇಳಿಕೊಂಡು ತನ್ನ ಮನಸ್ಸು ದುರ್ಯೋಧನನ ಕಡೆಗೆ ಹೋಗುವದು ಇದ್ದಾಗ್ಯೂ ಅದನ್ನು ಬಿಟ್ಟುಕೊಟ್ಟು—"ನಾನು ಯಾರ ಕಡೆಗೂ ಬರುವದಿಲ್ಲ. ನನಗೆ ತೀರ್ಥಯಾತ್ರೆಗೆ ಹೋಗತಕ್ಕದ್ದದೆ" ಎಂದು ಹೇಳಿದನು. ಉಳಿದ ಯಾದವ ವೀರರಲ್ಲಿ ಸಾತ್ಯಕಿಯು ಅರ್ಜುನನ ಶಿಷ್ಯನಿದ್ದುದರಿಂದ ಪಾಂಡವರನ್ನು ಕೂಡಿಕೊಂಡನು. ಕೃತವರ್ಮನು ಮೊದಲಿನಿಂದಲೂ ಶ್ರೀಕೃಷ್ಣನ ವಿರುದ್ಧವಾಗಿ ಇದ್ದು ಅವನು ಭೋಜ, ಅಂಧಕ, ಕುಕುರ ಇತ್ಯಾದಿ ಸೈನ್ಯವನ್ನು ತೆಗೆದುಕೊಂಡು ದುರ್ಯೋಧನನ ಕಡೆಗೆ ಹೋದನು. ಈ ಪ್ರಕಾರ ಉಳಿದ ರಾಜರಾದರೂ ಕೆಲವರು ಒಬ್ಬರ ಕಡೆಗೆ, ಕೆಲವರು ಇನ್ನೊಬ್ಬರ ಕಡೆಗೆ, ಕೂಡಿದರು. ಪಾಂಡವರ ಕಡೆಗೆ ಏಳು ಅಕ್ಷೌಹಿಣಿ ಸೈನ್ಯವು ಕೂಡಿತು. ಹಾಗೂ ದುರ್ಯೋಧನನ ಕಡೆಗೆ ಹನ್ನೊಂದು ಅಕ್ಷೌಹಿಣಿ ಸೈನ್ಯವು ಕೂಡಿತು. ಒಂದೊಂದು ಅಕ್ಷೌಹಿಣಿ ಸೈನ್ಯದೊಳಗೆ ೧೦೯೩೫೦ ಕಾಲದಳವು, ೬೫೬೧೦ ಕುದುರೆಗಳು, ೨೧೮೭೦ ರಥಗಳು ಮತ್ತು ೨೧೮೭೦ ಆನೆಗಳು ಇದ್ದವು.

# ೫. ಸಾಮಪರ್ವ.



ಪಾಂಡವ ಕೌರವರೊಳಗೆ ಯುದ್ಧವು ಆರಂಭವಾಗುವ ಮುಂಚೆ ದಯಾಶೀಲನೂ ಧರ್ಮಪ್ರಿಯನೂ ಆದ ಧರ್ಮರಾಜನು ಈ ದಾಯಾದಿತನದ ಜಗಳವನ್ನು ಸಾಮೋಪಚಾರದಿಂದ ತೀರಿಸಿಕೊಳ್ಳಲಿಕ್ಕೆ ಅನೇಕ ಸಾರೆ ಪ್ರಯತ್ನ ಮಾಡಿದನು. ಆದರೆ ಅವನ ಪ್ರಯತ್ನವು ಕಡೆತನಕ ಸಿದ್ಧಿಗೆ ಹೋಗಲಿಲ್ಲ. ಧೃತರಾಷ್ಟ್ರನು ಕಪಟಭಾವದಿಂದ ಧರ್ಮರಾಯನ ಕಡೆಗೆ--"ಧರ್ಮಶೀಲನಾದ ನೀನು ಯುದ್ಧದಲ್ಲಿ ತೊಡಗಿಕೊಂಡು ಅಸಂಖ್ಯ ಜನರ ಪ್ರಾಣಹಾನಿ ಮಾಡಿದ ದೋಷಕ್ಕೆ ಏಕೆ ಗುರಿಯಾಗುತ್ತೀ?" ಎಂಬ ನಿರೂಪವನ್ನು ಸಂಜಯನ ಕಡೆಯಿಂದ ಕಳುಹಿಸಿದನು. ಅದಕ್ಕೆ ಧರ್ಮರಾಯನು ಧೃತರಾಷ್ಟ್ರನಿಗೆ--"ನಾವು ಸಂಪೂರ್ಣವಾಗಿ ನಿನ್ನ ಕೈಯೊಳಗಿರುತ್ತೇವೆ. ನೀನು ನಮ್ಮೆಲ್ಲರ ಪಿತನೂ ಸ್ವಾಮಿಯೂ ಇರುತ್ತೀ. ದುರ್ಯೋಧನನು ಮತ್ತು ದುಶ್ಶಾಸನನು ನಮಗೆ ಮಾಡಿದ ಯಾವತ್ತು ನಿಂದ್ಯಕರ್ಮಗಳನ್ನು ನಾವು ಮರೆತು ಬಿಟ್ಟಿದ್ದೇವೆ. ನೀನೇ ನಮಗೆ ರಾಜ್ಯವನ್ನು ಪಾಲುಮಾಡಿ ಕೊಟ್ಟೆ. ಹಾಗೂ ಈಗ ನೀನೇ ನಮಗೆ ರಾಜ್ಯವನ್ನು ತಿರುಗಿ ಕೊಡಿಸಲಿಕ್ಕೆ ಸಮರ್ಥನಿರುತ್ತೀ. ಚಿಕ್ಕಪ್ಪನೇ, ನೀನು ನಮ್ಮನಮ್ಮೊಳಗೆ ಒಡಂಬಡಿಕೆಯಾಗಬೇಕೆಂದು ನಮ್ಮ ಐದೂ ಮಂದಿಗೆ ಕುಶಸ್ಥಲ, ವೃಕಸ್ಥಲ, ಮಾಕಂದಿ, ವಾರಣಾವತ ಮತ್ತು ಇನ್ನೊಂದು ಯಾವದಾದರೂ ಒಂದು ಗ್ರಾಮ ಈ ಪ್ರಕಾರ ಐದು ಗ್ರಾಮಗಳನ್ನು ಕೊಟ್ಟುಬಿಡು. ಅವುಗಳನ್ನು ನಾವು ತೆಗೆದುಕೊಂಡು ಸಂತೋಷದಿಂದ ಜೀವಿಸುವೆವು. ಇದಕ್ಕಿಂತ ಹೆಚ್ಚಿಗೆ ಏನು ಹೇಳಲಿ? ನನ್ನ ಮಾತಿನಲ್ಲಿ ಅನ್ಯಾಯವಿದ್ದರೆ ಧರ್ಮಶ್ರೇಷ್ಠನಾದ ವಾಸುದೇವನು ಹೇಳಲಿ" ಎಂದು ಸಂಜಯನ ಕಡೆಯಿಂದಲೇ ತಿರುಗಿ ಉತ್ತರವನ್ನು ಕಳಿಸಿದನು. ಆ ಬಳಿಕ ಶ್ರೀಕೃಷ್ಣನು ಸಂಜಯನಿಗೆ--"ನಾನು ಈ ಬಗ್ಗೆ ಧೃತರಾಷ್ಟ್ರನಿಗೂ ದುರ್ಯೋಧನನಿಗೂ ಸ್ವತಃ ತಿಳಿಸುವದಕ್ಕಾಗಿ ಬರುತ್ತೇನೆ" ಎಂದು ಹೇಳಿ ಹಸ್ತಿನಾಪುರಕ್ಕೆ ಹೊರಟು ಹೋದನು. ದುಷ್ಟ

ರಿಗೆ ತಿಳಿಹೇಳುವದು ಕಠಿಣವೆಂದು ಶ್ರೀಕೃಷ್ಣನಿಗೆ ಗೊತ್ತಿತ್ತು. ಆದರೂ **"ಮೃತ್ಯುವು ತಾನಾಗಿ ಮನುಷ್ಯನನ್ನು ಕೊಲ್ಲದೆ ಯಾವದಾದರೂ ರೋಗವನ್ನು ಮುಂದೆ ಚಾಚಿ ಅದರ ದ್ವಾರ ಕೊಲ್ಲುವದು"** ಎಂಬಂತೆ ದುಷ್ಟರ ಸಂಹಾರವನ್ನು ಮಾಡುವ ಮುಂಚೆ ಅವರ ಅಪರಾಧವನ್ನು ಅವರ ಉಡಿಯಲ್ಲಿ ಹಾಕುವದಕ್ಕಾಗಿ ಶ್ರೀಕೃಷ್ಣನು ಸ್ವತಃ ಅವರ ಕಡೆಗೆ ಹೋದನು. ಅವನು ಹೋಗುವಾಗ ದ್ವಾರಕೆಯಿಂದ ತನ್ನ ಅಂಗರಕ್ಷಕರಾದ ಕೆಲವು ಯಾದವರನ್ನು ಕರಕೊಂಡು ಹಾಗೂ ತನ್ನ ರಥದಲ್ಲಿ ಸಾತ್ಯಕಿಯನ್ನು ಕೂಡಿಸಿಕೊಂಡು, ಬೆಳಿಗ್ಗೆ ದ್ವಾರಕೆಯನ್ನು ಬಿಟ್ಟು, ಉಪಲವ್ಯದ ಮಾರ್ಗದಿಂದ ಮಧ್ಯಾಹ್ನಕ್ಕೆ ಶಾಲಿಭವನಕ್ಕೆ ಮುಟ್ಟಿ, ಅಲ್ಲಿ ಇಳಿದುಕೊಳ್ಳದೆ ಸಾಯಂಕಾಲಕ್ಕೆ ವೃಕಸ್ಥಲಕ್ಕೆ ಬಂದು ಇಳಿದುಕೊಂಡನು. ಆ ಮೇಲೆ ಅವನು ತಿರುಗಿ ಮರುದಿವಸ ಹೊರಟು ಸಾಯಂಕಾಲದೊಳಗಾಗಿ ಹಸ್ತಿನಾಪುರಕ್ಕೆ ಬಂದು ಮುಟ್ಟಿದನು. ಶ್ರೀಕೃಷ್ಣನ ದರ್ಶನಕ್ಕಾಗಿ ಹಸ್ತಿನಾಪುರದ ಹೊರಗೆ ಪ್ರಚಂಡ ಜನಸಮುದಾಯವು ಬಂದು ನಿಂತಿತ್ತು. ಭೀಷ್ಮ ದ್ರೋಣಾದಿ ಕೌರವರ ಕಡೆಯ ಅಧಿಕಾರಿಗಳೂ, ದುರ್ಯೋಧನನ ಹೊರತಾಗಿ ಧೃತರಾಷ್ಟ್ರನ ಯಾವತ್ತು ಮಕ್ಕಳೂ ಶ್ರೀಕೃಷ್ಣನ ಸ್ವಾಗತವನ್ನು ಮಾಡಲಿಕ್ಕೆ ಬಂದಿದ್ದರು. ಅಲ್ಲಿ ಶ್ರೀಕೃಷ್ಣನು ಭೀಷ್ಮನ ಸಂಗಡ ಸ್ವಲ್ಪ ಹೊತ್ತು ಮಾತಾಡಿದ ನಂತರ ಯಾವತ್ತು ಜನರು ರಾಜಧಾನಿಯೊಳಗೆ ಹೋಗಲಿಕ್ಕೆ ಹೊರಟರು. ಧೃತರಾಷ್ಟ್ರನ ಅಪ್ಪಣೆಯ ಮೇರೆಗೆ ಯಾವತ್ತು ನಗರವು ಅಲಂಕೃತವಾಗಿತ್ತು. ಮಾರ್ಗದೊಳಗೆ ಅಲ್ಲಲ್ಲಿ ರತ್ನಾದಿಕಗಳಿಂದ ಉತ್ತಮ ಶೃಂಗಾರವು ಮಾಡಲ್ಪಟ್ಟಿತ್ತು. ರಾಜಬೀದಿಯೊಳಗಿನ ಎರಡೂ ಮಗ್ಗಲದ ಮನೆಗಳಲ್ಲಿ ಶ್ರೀಕೃಷ್ಣನನ್ನು ನೋಡಲಿಕ್ಕೆ ಅಸಂಖ್ಯ ಸ್ತ್ರೀಯರು ಬಂದು ಕುಳಿತಿದ್ದರಿಂದ ಆ ಮನೆಗಳು ಅವರ ಭಾರವನ್ನು ಸಹಿಲಾರದೆ ಮುರಕೊಂಡು ಬೀಳುತ್ತವೋ ಏನೋ ಎಂದು ಅನ್ನುವಂತೆ ಕಾಣಿಸುತ್ತಿದ್ದವು. ಈ ಪ್ರಕಾರ ಶ್ರೀಕೃಷ್ಣನು ನಗರದ ಶೋಭೆಯನ್ನೂ, ಪುರನಿವಾಸಿಗಳಾದ ಸ್ತ್ರೀಪುರುಷರ ಉತ್ಸಾಹವನ್ನೂ ನೋಡುತ್ತ ಧೃತರಾಷ್ಟ್ರನ ಅರಮನೆಗೆ ಬಂದು ಮುಟ್ಟಿ ರಥದಿಂದ ಕೆಳಗೆ ಇಳಿದು ಅರಮನೆಯೊಳಗೆ ಹೋಗಿ ಧೃತರಾಷ್ಟ್ರನು ಕುಳಿತಲ್ಲಿಗೆ ಬಂದನು. ಅಲ್ಲಿ

ಧೃತರಾಷ್ಟ್ರನೂ ಭೀಷ್ಮದ್ರೋಣರೂ ಎದ್ದು ನಿಂತು ಶ್ರೀಕೃಷ್ಣನನ್ನು ಸತ್ಕಾರ ಮಾಡಿ ಅವನನ್ನು ಒಂದು ಸುವರ್ಣದ ಆಸನದ ಮೇಲೆ ಸನ್ಮಾನಪೂರ್ವಕ ವಾಗಿ ಕುಳ್ಳಿರಿಸಿದರು. ಆ ಮೇಲೆ ಪುರೋಹಿತರು ಮಧುಪರ್ಕದಿಂದ ಶ್ರೀಕೃ ಷ್ಣನನ್ನು ಪೂಜಿಸಲಾಗಿ ಅವನು ಅದನ್ನು ಆದರಿಂದ ಸ್ವೀಕಾರ ಮಾಡಿದನು. ಆ ಮೇಲೆ ಕೆಲವು ಹೊತ್ತಿನ ತನಕ ಅವರವರೊಳಗೆ ಕ್ಷೇಮಕುಶಲದ ಪ್ರಶ್ನೋ ತ್ತರಗಳೂ, ಜೀಗತನದ ಸಾಂಪ್ರದಾಯದಂತೆ ವಿನೋದದ ಮಾತುಕಥೆಗಳೂ ನಡೆದ ಬಳಿಕ ಶ್ರೀಕೃಷ್ಣನು ಧೃತರಾಷ್ಟ್ರನ ನಿರೂಪವನ್ನು ತೆಗೆದುಕೊಂಡು ವಿದುರನ ಮನೆಗೆ ಹೋಗಲಿಕ್ಕೆ ಹೊರಟನು. ಆಗ ದುರ್ಯೋಧನನು ಶ್ರೀಕೃ ಷ್ಣನಿಗೆ ತನ್ನಲ್ಲಿ ಬಂದು ಇಳಿದುಕೊಳ್ಳಬೇಕೆಂದು ಬಹಳ ಆಗ್ರಹ ಮಾಡಿ ದನು. ಆದರೆ ಶ್ರೀಕೃಷ್ಣನು ಅದನ್ನು ಮಾನ್ಯ ಮಾಡದೆ ವಿದುರನ ಮನೆಗೆ ಹೋಗಿ ಅಲ್ಲಿ ಅವನು ಅತ್ಯಂತ ಪ್ರೇಮಭಾವದಿಂದ ಮಾಡಿದ ಆತಿಥ್ಯವನ್ನು ಸ್ವೀಕಾರ ಮಾಡಿ ಅವನೊಡನೆ ಆ ರಾತ್ರಿಯೆಲ್ಲ ಪಾಂಡವರ ಸಂಬಂಧವಾಗಿ ಭಾಷಣ ಮಾಡಿದನು.

ಮರುದಿವಸ ಬೆಳಿಗ್ಗೆ ಶ್ರೀಕೃಷ್ಣನು ಎದ್ದು ವಾಡಿಕೆಯಂತೆ ತನ್ನ ಸ್ನಾನ ಸಂಧ್ಯಾದಿಗಳನ್ನು ತೀರಿಸಿಕೊಂಡು ರಾಜಸಭೆಗೆ ಹೋಗಲಿಕ್ಕೆ ಸಿದ್ಧನಾಗಿರಲು ಅವನನ್ನು ಕಾಣಲಿಕ್ಕೆ ದುರ್ಯೋಧನ ಮತ್ತು ಶಕುನಿ ಈ ಇಬ್ಬರೂ ಬಂದು ಧೃತರಾಷ್ಟ್ರನು ರಾಜಸಭೆಗೆ ಬಂದು ಕುಳಿತಿದ್ದಾನೆಂದು ಅವನಿಗೆ ತಿಳಿಸಿದರು. ಆಗ ಅವನು ತನ್ನ ನಿತ್ಯ ಸಾಂಪ್ರದಾಯಕ್ಕನುಸರಿಸಿ ಬ್ರಾಹ್ಮಣರಿಗೆ ಹಿರ ಣ್ಯ, ವಸ್ತ್ರ ಮತ್ತು ಆಕಳುಗಳನ್ನು ದಾನ ಕೊಟ್ಟು, ಅಗ್ನಿಗೆ ಪ್ರದಕ್ಷಿಣವನ್ನು ಹಾಕಿ, ಬ್ರಾಹ್ಮಣರಿಗೆ ನಮಸ್ಕಾರ ಮಾಡಿ, ವಿದುರನನ್ನು ತನ್ನ ರಥದಲ್ಲಿ ಕುಳ್ಳಿ ರಿಸಿಕೊಂಡು ಕೌರವರ ರಾಜಸಭೆಗೆ ಹೋದನು. ಅವನು ಸಭೆಯನ್ನು ಪ್ರವೇಶ ಮಾಡಿದ ಕೂಡಲೆ ಧೃತರಾಷ್ಟ್ರನೂ ಭೀಷ್ಮದ್ರೋಣರೂ ಎದ್ದು ನಿಂತರು. ಅವ ರ ಸಂಗಡ ಆ ಸಭೆಯೊಳಗಿನ ಶಸ್ತ್ರಪಾಣಿಗಳಾದ ನೂರಾರು ಮಂದಿ ರಾಜರು ಎದ್ದಕಾರಣ ಅವರ ಶಸ್ತ್ರಗಳ ಖಡಖಡ ಸಪ್ಪಳದಿಂದ ಸಭೆಯು ತುಂಬಿ ಹೋ ಯಿತು. ಶ್ರೀಕೃಷ್ಣನು ತನ್ನಗೋಸ್ಕರ ಧೃತರಾಷ್ಟ್ರನ ಸಮೀಪದಲ್ಲಿ ಇರಿಸಿದ್ದ ರತ್ನಖಚಿತವಾದ ಸುವರ್ಣಮಂಚದ ಮೇಲೆ ವಿದುರನನ್ನು ಕರಕೊಂಡು ಕುಳ

ತನು. ದುಶ್ಶಾಸನನು ಸಾತ್ಯಕಿಗೆ ತನ್ನ ಆಸನದ ಮೇಲೆ ಸ್ಥಳವನ್ನು ಕೊಟ್ಟು ಅವನನ್ನು ಕೂಡ್ರಿಸಿಕೊಂಡನು. ದುರ್ಯೋಧನ ಮತ್ತು ಕರ್ಣ ಇವರಿಬ್ಬರೂ ಶ್ರೀಕೃಷ್ಣನಿಂದ ಸ್ವಲ್ಪ ಅಂತರದ ಮೇಲೆ ಒಂದೇ ಆಸನದ ಮೇಲೆ ಕುಳಿತುಕೊಂಡರು. ಈ ಪ್ರಕಾರ ಎಲ್ಲರು ತಮ್ಮ ತಮ್ಮ ಸ್ಥಳಗಳ ಮೇಲೆ ಕುಳಿತುಕೊಂಡ ತರುವಾಯ ಶ್ರೀಕೃಷ್ಣನು ಧೃತರಾಷ್ಟ್ರನ ಕಡೆಗೆ ಮೋರೆ ತಿರುವಿ--“ಧೃತರಾಷ್ಟ್ರ, ನಾನು ಕೌರವ ಪಾಂಡವರೊಳಗೆ ಸ್ನೇಹವನ್ನು ಮಾಡಬೇಕೆಂತಲೂ ಲಕ್ಷಾವಧಿ ವೀರರ ಪ್ರಾಣನಾಶವಾಗಬಾರದೆಂತಲೂ ಪ್ರಯತ್ನ ಮಾಡುವ ಸಲುವಾಗಿ ಇಲ್ಲಿಗೆ ಒಂದಿರುತ್ತೇನೆ. ಕೌರವಕುಲವು ಎಲ್ಲ ರಾಜಕುಲಗಳಲ್ಲಿ ಶ್ರೇಷ್ಠವಿರುತ್ತದೆ. ಇವರೊಳಗೆ ನೀನು ಜೀವಂತವಿರುವ ಕಾಲದಲ್ಲಿ ಭಯಂಕರವಾದ ಯುದ್ಧದ ಪ್ರಸಂಗವು ಒದಗುವದು ಬಹಳ ಶೋಚನೀಯವಾದದ್ದು. ಈ ಯುದ್ಧಾಗ್ನಿಯು ಒಮ್ಮೆ ಪ್ರಜ್ವಲಿಸಿದರೆ ಅದು ಬರೀ ಕೌರವ ಕುಲವನ್ನು ಅಲ್ಲ, ಇಡೀ ಪೃಥ್ವಿಯನ್ನು ಸುಟ್ಟು ನಾಶ ಮಾಡುವದು. ಆದುದರಿಂದ ನೀನು ಪಾಂಡವರ ಕೂಡ ಮುಂಚಿನಂತೆಯೇ ಪುತ್ರವಾತ್ಸಲ್ಯದಿಂದ ನಡೆದು ಪೃಥ್ವಿಯ ಸಾಮ್ರಾಜ್ಯವನ್ನು ಉಪಭೋಗ ಮಾಡು. ಒಮ್ಮೆ ಯುದ್ಧವು ಆರಂಭವಾದ ಮೇಲೆ ಸಮರಾಂಗಣದಲ್ಲಿ ಕೌರವರು ಮಡೆದರೇನು? ಪಾಂಡವರು ಮಡೆದರೇನು? ಯಾರು ಮಡೆದರೂ ನಿನಗೆ ಸರಿಯಾಗಿ ದುಃಖವಾಗಲಿಕ್ಕೇ ಬೇಕು. ನೀನು ಪಾಂಡವರ ಮೇಲೆ ಮುಂಚಿನಂತೆ ಅಂತಃಕರಣವಿಟ್ಟು ಕೌರವ ಪಾಂಡವರ ನಡುವೆ ಒಡಂಬಡಿಕೆಯನ್ನು ಮಾಡು. ಪಾಂಡವರಿಗೆ ನೀನು ಚಿಕ್ಕಪ್ಪನಿರುವದರಿಂದ ನಿನ್ನ ಅಪ್ಪಣೆಯ ಮೇರೆಗೆ ಅವರು ತಮ್ಮ ಎಲ್ಲ ಕಷ್ಟಗಳನ್ನು ಅನುಭೋಗಿಸಿದರು. ಹಾಗೂ ತಮ್ಮ ಅರಣ್ಯವಾಸವನ್ನು ಮುಗಿಸಿಕೊಂಡು ಬಂದ ಬಳಿಕ ನೀನು ನಿನ್ನ ವಚನದ ಪ್ರಕಾರ ಅವರ ರಾಜ್ಯವನ್ನು ಅವರಿಗೆ ಕೊಡುತ್ತೀ ಎಂದು ನಿನ್ನ ಮೇಲೆ ವಿಶ್ವಾಸವಿಟ್ಟು ನಡೆದಿರುತ್ತಾರೆ. ಆದುದರಿಂದ ಅವರು ಈಗ ಬೇಡುತ್ತಿರುವ ಪ್ರಕಾರ ನೀನು ಅವರ ಪಾಲಿನ ಅರ್ಧ ರಾಜ್ಯವನ್ನು ಅವರಿಗೆ ಕೊಟ್ಟು ಪುಣ್ಯವನ್ನು ಸಂಪಾದಿಸು. ನಾನು ಬರೀ ಪಾಂಡವರ ಹಿತಚಿಂತಕನೆಂದು ಇಲ್ಲಿ ಬಂದಿಲ್ಲ, ಆದರೆ ನಿಮ್ಮೆಲ್ಲರ ಹಿತಚಿಂತಕನೆಂದು ನಿಮಗೆ ಉಪದೇಶ ಮಾಡಲಿಕ್ಕೆ ಬಂದಿರುತ್ತೇನೆ. ಅತ್ಯಾಶೆಗೆ ಒಳಪಟ್ಟಿರುವ ನಿನ್ನ ಮಕ್ಕಳನ್ನು ನಿಗ್ರಹ ಮಾಡು. ನೀನು ಹೇಳಿದಂತೆ ಕೇಳಲಿಕ್ಕೆ ಪಾಂಡವರು ಸಿದ್ಧರಿರುತ್ತಾರೆ. ನೀನು



ಶ್ರೀಕೃಷ್ಣನು ದುರ್ಯೋಧನನಿಗೆ ಸಾಮೋಪಚಾರ
ವನ್ನು ಉಪದೇಶಿಸಿದ್ದು. ( ಪುಟ ೧೦೯ )

ಒಂದು ವೇಳೆ ಪಾಂಡವರಿಗೆ ಯುದ್ಧವನ್ನು ಮಾಡಲಿಕ್ಕೆ ಹೇಳಿದರೆ ಅವರು ಅದಕ್ಕೂ ಸಿದ್ಧರಿರುತ್ತಾರೆ. ನೀನು ಯುಕ್ತಾಯುಕ್ತವನ್ನು ತಿಳಿದುಕೊಂಡು ಹೇಳೆಂದು ನಾನು ನಿನಗೆ ಬಹು ಕಕ್ಕುಲತೆಯಿಂದ ಹೇಳುತ್ತೇನೆ" ಎಂದು ನುಡಿದನು. ಅದಕ್ಕೆ ಧೃತರಾಷ್ಟ್ರನು ಶ್ರೀಕೃಷ್ಣನಿಗೆ-"ಹೇ ಜನಾರ್ದನಾ, ನೀನು ಧರ್ಮಕ್ಕೂ ನ್ಯಾಯಕ್ಕೂ ಅನುಸರಿಸಿ ಎಲ್ಲರಿಗೂ ಕಲ್ಯಾಣವಾಗುವಂಥ ಮಾರ್ಗವನ್ನು ಹೇಳಿದೆ. ಈ ಮೂರ್ಖ ದುರ್ಯೋಧನನು ಮಾಡುವದನ್ನು ನಾನು ಸರ್ವಥಾ ಒಪ್ಪುವದಿಲ್ಲ. ಅವನು ನಾನು ಹೇಳುವದನ್ನು ಕೇಳುವದೇ ಇಲ್ಲ. ನೀನೇ ಅವನಿಗೆ ಚೆನ್ನಾಗಿ ಬುದ್ಧಿಯನ್ನು ಹೇಳು" ಎಂದು ಉತ್ತರ ಕೊಟ್ಟನು. ಆ ಬಳಿಕ ಶ್ರೀಕೃಷ್ಣನು ದುರ್ಯೋಧನನ ಕಡೆಗೆ ಮೋರೆ ತಿರುವಿ-"ಅಪ್ಪಾ, ದುರ್ಯೋಧನಾ! ನೀನು ನಿನ್ನ ಬಂಧುಗಳಾದ ಪಾಂಡವರ ಕೂಡ ಒಡಂಬಡಿಕೆಯನ್ನು ಮಾಡಿಕೊಂಡು ಸುಖದಿಂದ ಇರು. ನಾನು ಹೇಳುವ ಉಪದೇಶದ ಕಡೆಗೆ ಸ್ವಲ್ಪ ಲಕ್ಷ್ಯಕೊಡು. ನೀನು ಒಡಂಬಡಿಕೆಯನ್ನು ಮಾಡಿಕೊಂಡು ಇರುವದು ನಿನಗೂ ನಿನ್ನ ಮಿತ್ರರಿಗೂ ಮಾತ್ರವಲ್ಲದೆ ಇಡೀ ಜಗತ್ತಿಗೆ ಕಲ್ಯಾಣಕರವಾಗುವದು. ನೀನು ಪಾಂಡವರ ಸಂಗಡ ನಿಷ್ಕಾರಣದಿಂದ ದ್ವೇಷ ಮಾಡುತ್ತೀ. ಅವರು ನಿನ್ನ ಕೂಡ ಸರ್ವಥಾ ದ್ವೇಷ ಮಾಡುವದಿಲ್ಲ. ಬುದ್ಧಿವಂತರು ಧರ್ಮ, ಅರ್ಥ, ಕಾಮ ಈ ಮೂರುಗಳ ಕಡೆಗೂ ಲಕ್ಷ್ಯ ಕೊಡಬೇಕು. ಒಂದು ವೇಳೆ ಈ ಮೂರೂ ಒಂದೇ ಕಾಲಕ್ಕೆ ಸಾಧಿಸದಿದ್ದರೆ ಧರ್ಮ ಮತ್ತು ಅರ್ಥಗಳ ಕಡೆಗೆ ಲಕ್ಷ್ಯ ಕೊಡಬೇಕು. ಧರ್ಮಕ್ಕೂ ಅರ್ಥಕ್ಕೂ ವಿರೋಧವು ಬರುತ್ತಿದ್ದರೆ ಅರ್ಥವನ್ನು ಬಿಟ್ಟುಕೊಟ್ಟು ಧರ್ಮದ ಕಡೆಗೆ ಲಕ್ಷ್ಯ ಕೊಡಬೇಕು. ಧರ್ಮಕ್ಕೆ ಅನುಸರಿಸಿ ನಡೆದರೆ ಅರ್ಥ ಕಾಮಗಳು ತಾವೇ ಸಾಧ್ಯವಾಗುವವು. ಆದುದರಿಂದ ನೀನು ಧರ್ಮದ ಆಶ್ರಯದಿಂದ ಪಾಂಡವರ ಕೂಡ ಒಡಂಬಡಿಕೆಯನ್ನು ಮಾಡಿಕೋ. ದುಶ್ಶಾಸನ, ಶಕುನ, ಕರ್ಣ, ಮತ್ತು ಭೀಷ್ಮದ್ರೋಣರು ಸಹ ಅರ್ಜುನನನ್ನು ಸರಿಗಟ್ಟಲಾರರು. ನನ್ನ ಸಹಾಯವಿದ್ದ ಮೇಲೆ ದೇವೇಂದ್ರನು ಸಹ ಅರ್ಜುನನ ಸಂಗಡ ಯುದ್ಧ ಮಾಡಲಿಕ್ಕೆ ಸಮರ್ಥನಾಗಲಾರನು. ನೀನು ನಿನ್ನ ಹಟದ ಸಲುವಾಗಿ ನಿನ್ನ ಬಂಧುಮಿತ್ರರನ್ನೂ ಸಾವಿರಾರು ಮಂದಿ ರಾಜರನ್ನೂ ಕೊಲ್ಲಿಸಬೇಡ. ಒಂದು ವೇಳೆ ಯುದ್ಧವು ನಡೆದರೆ ನಿನ್ನ ಕುಲದ ನಾಶವು ಆಗಿ ನಿನಗೆ ಕುಲನಾಶಕ

ನೆಂಬ ಅಪಕೀರ್ತಿಯು ಬರುವದು. ಅದನ್ನು ನೀನು ತಂದುಕೊಳ್ಳಬೇಡ" ಎಂದು ಹೇಳಿದನು. ಈ ಪ್ರಕಾರ ಶ್ರೀಕೃಷ್ಣನು ಹೇಳಿದ ಬಳಿಕ ಧೃತರಾಷ್ಟ್ರನು-"ಬಾಳಾ, ದುರ್ಯೋಧನಾ, ಮಹಾತ್ಮನಾದ ಶೌರಿಯು ಹೇಳುವದನ್ನು ಲಕ್ಷ್ಯದಲ್ಲಿ ತೆಗೆದುಕೊಂಡು ಅವನು ಹೇಳಿದಂತೆ ನಡೆ. ಅದರಿಂದ ನಿನ್ನ ಕಲ್ಯಾಣವಾಗುವದು. ವಾಸುದೇವನು ಎಲ್ಲರಿಗಿಂತಲೂ ಸಮರ್ಥನಿರುತ್ತಾನೆ. ಅವನಗೂಡ ನೀನು ವೈರತ್ವವನ್ನು ಮಾಡಬೇಡ. ಅವನ ಮಾತನ್ನು ನೀನು ಮೀರುವದು ನನಗೆ ಸರಿಯಾಗಿ ಕಾಣುವದಿಲ್ಲ" ಎಂದು ನುಡಿದನು ಇದನ್ನೇ ಭೀಷ್ಮದ್ರೋಣರು ಸಮರ್ಥನ ಮಾಡಿದರು. ಅರ್ಜುನ ಕೃಷ್ಣರು ಟೊಂಕ ಕಟ್ಟಿಕೊಂಡು ಯುದ್ಧಕ್ಕೆ ಸಜ್ಜರಾಗಿ ನಿಂತುಕೊಳ್ಳುವ ಮುಂಚೆ ಹಾಗೂ ಭೀಮಸೇನನು ತನ್ನ ಗದೆಯನ್ನು ಹಿಡಕೊಂಡು ಸೈನ್ಯದ ಶಿರೋಭಾಗದಲ್ಲಿ ನಿಲ್ಲುವ ಮುಂಚೆ ನೀನು ಈ ಯುದ್ಧವನ್ನು ನಿಲ್ಲಿಸಿಬಿಟ್ಟು ನಿನ್ನ ತಮ್ಮಂದಿರ ಸಂಗಡ ಸಂಧಿಯನ್ನು ಮಾಡಿಕೋ" ಎಂದು ಹೇಳಿದರು. ಈ ಪ್ರಕಾರ ಬೇರೆ ಬೇರೆ ಜನರು ತನ್ನ ವಿರುದ್ಧವಾಗಿ ಭಾಷಣ ಮಾಡುವದನ್ನು ಕೇಳಿ ದುರ್ಯೋಧನನು ಸಿಟ್ಟಿಗೆದ್ದು ಕಣ್ಣು ಕೆಂಪಗೆ ಮಾಡಿ-"ರಾಜಾ, ವಿದುರಾ, ಭೀಷ್ಮಾ, ಕೃಷ್ಣಾ, ನೀವೆಲ್ಲರು ನನಗೇ ದೋಷ ಕೊಡುವದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ಪಾಂಡವರು ದ್ಯೂತವನ್ನು ಆಡಿ ದ್ಯೂತದಲ್ಲಿ ಸೋತದ್ದರಲ್ಲಿ ನನ್ನದೇನು ದೋಷವುಂಟು? ನಾವು ಯಾವ ಅಘಾತವನ್ನು ಅಥವಾ ಅತಿರೇಕವನ್ನು ಮಾಡಿದ್ದಕ್ಕಾಗಿ ಪಾಂಡವರು ಮತ್ತು ಸಂಜಯನು ನಮ್ಮ ಮೇಲೆ ಈ ರೀತಿ ಸಾಗಿ ಬಂದಿರುವರು? ಭೀಷ್ಮ, ದ್ರೋಣ, ಕರ್ಣರನ್ನು ದೇವಾಧಿದೇವತೆಗಳು ಸಹ ಜಯಿಸಲಾರರು. ಅಂದಮೇಲೆ ಈ ಪಾಂಡವರ ಪಾಡೇನು? ನಾವು ಧರ್ಮದಿಂದ ಯುದ್ಧ ಮಾಡುವಾಗ ನಮಗೆ ಮರಣವು ಪ್ರಾಪ್ತವಾದರೆ ಅದು ನಮಗೆ ಶ್ರೇಯಸ್ಕರವೇ ಇರುತ್ತದೆ. ಯಾವಾಗಲೂ ಕರ್ತವ್ಯ ಮಾಡಬೇಕು. ಎರಡನೆಯವರ ಕೂಡ ನಮ್ರಭಾವದಿಂದ ನಡೆಯಬಾರದು. ಕಬ್ಬು ಗಣಿಯಿದ್ದಲ್ಲಿ ಮುರಿಯುತ್ತದೇ ಹೊರ್ತು ನಡುವೆ ಹೇಗೆ ಮಣಿಯುವದಿಲ್ಲವೋ ಹಾಗೆ ನಾವು ಕ್ಷತ್ರಿಯರು ಯುದ್ಧ ಮಾಡುತ್ತ ಮರಣ ಹೊಂದಬೇಕಲ್ಲದೆ ಎರಡನೆಯವರಿಗೆ ಎಂದಿಗೂ ಶರಣು ಹೋಗಬಾರದೆಂದು ಎಲ್ಲ ವೀರಕ್ಷತ್ರಿಯರಂತೆ

ನನ್ನ ಅಭಿಪ್ರಾಯವಿರುತ್ತದೆ. ನನ್ನ ತಂದೆಯು ಮೊದಲಿಗೆ ತನ್ನ ತಪ್ಪಿನಿಂದ ಪಾಂಡವರಿಗೆ ನಮ್ಮ ರಾಜ್ಯದೊಳಗೆ ಪಾಲನ್ನು ಕೊಟ್ಟನು. ಅದು ನಾನು ಜೀವಂತವಿರುವವರೆಗೂ ಪಾಂಡವರಿಗೆ ಸಿಗಲಾರದು. ಪಾಂಡವರು ತಮಗೆ ಐದಾರು ಹಳ್ಳಿಗಳು ಸಿಕ್ಕರೂ ಸಮಾಧಾನವಾಗಬಹುದು. ಆದರೆ ಅವರಿಗೆ ಒಂದು ಸೂಜಿಯ ತುದಿಯ ಮುಚ್ಚುವಷ್ಟು ಮಣ್ಣನ್ನು ಸಹ ನಾನು ಕೊಡಲಿಕ್ಕೆ ಸಿದ್ಧನಿರುವದಿಲ್ಲ" ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಶ್ರೀಕೃಷ್ಣನು ಸಿಟ್ಟಿಗೆದ್ದು—"ಒಳ್ಳೇದು. ನಿನ್ನ ಅಪೇಕ್ಷೆಯಂತೆಯೇ ಆದೀತು. ಇನ್ನುಮೇಲೆ ಘನಘೋರ ಸಂಗ್ರಾಮವು ನಡೆದು ನೀನು ಬೇಡಿದ ಪ್ರಕಾರ ನಿನಗೆ ವೀರಶಯನವು ದೊರಕೀತು. ನೀನು ಪಾಂಡವರಿಗೆ ಏನೂ ಅಪರಾಧವನ್ನು ಮಾಡಿಲ್ಲವೆಂದು ಅನ್ನುತ್ತೀ. ಆದರೆ ಆ ಅಪರಾಧಗಳನ್ನು ವಿವರಿಸುತ್ತೇನೆ ಕೇಳು. (೧) ನೀನು ಪಾಂಡವರ ಸಂಪತ್ತನ್ನು ಹರಣ ಮಾಡುವದಕ್ಕಾಗಿ ಅವರ ಕೂಡ ದ್ಯೂತವನ್ನಾಡುವ ಯುಕ್ತಿಯನ್ನು ಯೋಜಿಸಿದಿ. (೨) ನೀನು ನಿನ್ನ ತಮ್ಮಂದಿರ ಹೆಂಡತಿಯಾದ ದ್ರೌಪದಿಯನ್ನು ಸಭೆಗೆ ಎಳೆದು ತರಿಸಿ ಅವಳಿಗೆ ಅವಮಾನವಾಗುವಂಥ ಭಾಷಣವನ್ನು ಮಾಡಿ ಅವಳಿಗೆ ನೀಚತನದ ಕೃತಿಯನ್ನು ಮಾಡಿದಿ. (೩) ವಾರಣಾವತದಲ್ಲಿ ಪಾಂಡವರನ್ನು ಕುಂತಿ ಸಹಿತವಾಗಿ ಸುಡಿಸಲಿಕ್ಕೆ ಪ್ರಯತ್ನ ಮಾಡಿದಿ. (೪) ಪಾಂಡವರು ನ್ಯಾಯತಃ ತಮ್ಮ ಪಾಲಿನ ರಾಜ್ಯವನ್ನು ಬೇಡಿದರೆ ಅವರಿಗೆ ಅದನ್ನು ಕೊಡಲಿಕ್ಕೆ ಅಡ್ಡಿಯನ್ನು ಮಾಡುತ್ತೀ. (೫) ಮೇಲಾಗಿ ನೀನು ನಿನ್ನ ಹಿರಿಯರ ಮತ್ತು ಹಿತಚಿಂತಕರ ಉಪದೇಶವನ್ನು ಕೇಳದೆ ಇದೆಲ್ಲ ಅನರ್ಥವನ್ನು ನಡೆಸಿರುವೆ" ಎಂದು ಹೇಳಿದನು. ಈ ಪ್ರಕಾರ ಶ್ರೀಕೃಷ್ಣನು ಮಾತಾಡುತ್ತಿರುವಾಗ ದುಶ್ಶಾಸನನು ಕುತ್ಸಿತ ಬುದ್ಧಿಯಿಂದ ನಡುವೆ ಬಾಯಿ ಹಾಕಿ ದುರ್ಯೋಧನನಿಗೆ—"ಅಣ್ಣಾ, ಕೃಷ್ಣನು ಹೇಳುವದನ್ನು ಕೇಳು; ಇಲ್ಲದಿದ್ದರೆ ಈ ಕೇಶವನು ನಿನ್ನನ್ನು ಮುಸಿಕೆ ಬಿಗಿದು ಪಾಂಡವರ ಸ್ವಾಧೀನಕ್ಕೆ ಒಪ್ಪಿಸುವಂತೆ ಮಾಡುತ್ತಾನೆ. ಭೀಷ್ಮ, ದ್ರೋಣ, ಧೃತರಾಷ್ಟ್ರರು ನಿನಗೂ, ನನಗೂ, ಕರ್ಣನಿಗೂ ಕಟ್ಟಿ ಹಾಕಿ ಪಾಂಡವರ ಕಡೆಗೆ ಕೊಡಲಿಕ್ಕೆ ಎಂದೂ ತಪ್ಪಲಿಕ್ಕಿಲ್ಲ. ಬಹಳ ಎಚ್ಚರಿಕೆಯಿಂದಿರು" ಎಂದು ಮಾತಾಡಿದನು. ಅದನ್ನು ಕೇಳಿ

ದುರ್ಯೋಧನನು ಸಿಟ್ಟಿನಿಂದ ಎದ್ದು ತನ್ನ ತಂದೆಯ ಅಪ್ಪಣೆಯನ್ನು ತೆಗೆದುಕೊಳ್ಳದೆ ಭೀಷ್ಮ, ದ್ರೋಣ, ಕೃಪ, ಶಲ್ಯ ಮೊದಲಾದವರ ಅನಾದರ ಮಾಡಿ ರಾಜಸಭೆಯಿಂದ ಹೊರಟು ಹೋದನು. ಆ ಬಳಿಕ ಶ್ರೀಕೃಷ್ಣನು—"ನೀವು ಮಂದಬುದ್ಧಿಯ ದುರ್ಯೋಧನನನ್ನು ನಿಶ್ಚಯವಾಗಿ ಕಾರಾಗೃಹದಲ್ಲಿಟ್ಟು ಎಲ್ಲರ ಕಲ್ಯಾಣಕ್ಕಾಗಿ ಪಾಂಡವರ ಕೂಡ ಸ್ನೇಹವನ್ನು ಮಾಡಿರಿ. ದುರ್ಯೋಧನ, ಶಕುನಿ ಮತ್ತು ಕರ್ಣರನ್ನು ಕಾರಾಗೃಹದಲ್ಲಿಡುವ ಕಲ್ಪನೆಯು ಕೆಟ್ಟದಲ್ಲ. ಒಂದು ಕುಟುಂಬದ ಕಲ್ಯಾಣಕ್ಕಾಗಿ ಒಬ್ಬ ಮನುಷ್ಯನನ್ನು ಬಿಟ್ಟುಬಿಡಬೇಕು; ಒಂದು ಊರಿನ ಕಲ್ಯಾಣಕ್ಕಾಗಿ ಒಂದು ಮನೆಯವರನ್ನು ಬಿಟ್ಟುಬಿಡಬೇಕು; ಒಂದು ದೇಶದ ಕಲ್ಯಾಣಕ್ಕಾಗಿ ಒಂದು ಊರವರನ್ನು ಬಿಟ್ಟುಬಿಡಬೇಕು ಎಂದು ಧರ್ಮಶಾಸ್ತ್ರವು ಹೇಳುತ್ತದೆ" ಎಂದು ಹೇಳಿದನು. ಇತ್ತಲಾ ದುರ್ಯೋಧನನೂ ಶಕುನಿಯೂ ಹೊರಗೆ ಹೊರಟು ಹೋಗಿ—"ನಮ್ಮನ್ನು ಕಾರಾಗೃಹದಲ್ಲಿಡಬೇಕೆಂದು ಯೋಚಿಸುವ ಕೃಷ್ಣನನ್ನು ನಾವೇ ಮುಂಚೆ ಕಾರಾಗೃಹದಲ್ಲಿಡಬೇಕು. ಅಂದರೆ ಪಾಂಡವರು ಕೈಸಾಗದವರಂತೆ ಸುಮ್ಮನೆ ಕೂಡ್ರುವರು" ಎಂದು ತಮ್ಮೊಳಗೆ ಆಲೋಚನೆ ಮಾಡಿದರು. ಈ ವರ್ತಮಾನವು ಶ್ರೀಕೃಷ್ಣನಿಗೆ ಗೊತ್ತಾಗಲಾಗಿ ಅವನು ಧೃತರಾಷ್ಟ್ರನಿಗೆ—"ನನಗೆ ದುರ್ಯೋಧನನನ್ನು ಕಾರಾಗೃಹದಲ್ಲಿಡಲಿಕ್ಕೆ ಅಪ್ಪಣೆಯನ್ನು ಕೊಡು. ನಿನ್ನ ಅಪ್ಪಣೆಯನ್ನು ತೆಗೆದುಕೊಳ್ಳದೆ ನಾನು ಯಾವದೂ ಕೆಲಸವನ್ನು ಮಾಡುವದಿಲ್ಲ. ನನ್ನನ್ನು ದುರ್ಯೋಧನನು ಕಾರಾಗೃಹದಲ್ಲಿಡುತ್ತಾನೋ, ದುರ್ಯೋಧನನನ್ನು ನಾನು ಕಾರಾಗೃಹದಲ್ಲಿಡುತ್ತೇನೋ ಎಂಬುದು ನಿನಗೆ ತಿಳಿದು, ಭಾವೀ ಯುದ್ಧದ ಪರಿಣಾಮವು ಇಲ್ಲಿಯೇ ನಿರ್ಣಯವಾದೀತು" ಎಂದು ಹೇಳಿದನು. ಆಗ ಧೃತರಾಷ್ಟ್ರನು ವಿದುರನ ಕಡೆಯಿಂದ ದುರ್ಯೋಧನನನ್ನು ಕರೆಸಿಕೊಂಡು ಅವನಿಗೆ—"ದುಷ್ಟಾ, ನೀನು ಪಾಪಿಷ್ಠರ ಆಲೋಚನೆಯನ್ನು ಕೇಳಿಕೊಂಡು ಪಾಪಕರ್ಮವನ್ನು ಮಾಡಲಿಚ್ಛಿಸುವೆಯಾ? ಈ ಕೇಶವನು ದೇವತೆಗಳಿಗೂ, ಮನುಷ್ಯರಿಗೂ, ಗಂಧರ್ವರಿಗೂ, ಅಸುರರಿಗೂ ಅಜಿಂಕ್ಯನಿರುವದು ನಿನಗೆ ಗೊತ್ತಿಲ್ಲವೇ? ಮನುಷ್ಯನು ಯಾವ ಪ್ರಕಾರ ಚಂದ್ರನನ್ನು ಮುಟ್ಟಲಿಕ್ಕೆ ಅಥವಾ ಗಾಳಿಯನ್ನು ಹಿಡಿಯಲಿಕ್ಕೆ ಶಕ್ಯನಿರುವದಿಲ್ಲವೋ ಆ ಪ್ರಕಾರ ಈ ಕೇಶವನನ್ನು

ಯಾವನೂ ಹಿಡಿಯಲು ಶಕ್ಯನಿರುವದಿಲ್ಲ" ಎಂದು ಮಾತಾಡುತ್ತಿರುವಷ್ಟರಲ್ಲಿ ಶ್ರೀಕೃಷ್ಣನು ಸಾತ್ಯಕಿಯ ಕೈ ಹಿಡಿದುಕೊಂಡು ಎದ್ದು, ಯಾವತ್ತು ಋಷಿಗಳ ಮತ್ತು ರಾಜರ ಅಪ್ಪಣೆಯನ್ನು ಪಡೆದು, ಆ ಸಭೆಯನ್ನು ಬಿಟ್ಟು, ಹೊರಗೆ ಬಂದನು. ಅವನ ಹಿಂದೆ ಭೀಷ್ಮ ದ್ರೋಣರು ಸಹಿತನಾದ ಧೃತರಾಷ್ಟ್ರನೂ, ಯಾವತ್ತು ರಾಜರೂ ಲಗಬಗೆಯಿಂದ ಹೊರಟು ಬಂದರು. ಇಷ್ಟರಲ್ಲಿ ಶ್ರೀಕೃಷ್ಣನ ಸಾರಥಿಯಾದ ದಾರುಕನು ರಥವನ್ನು ತಂದು ನಿಲ್ಲಿಸಿದನು. ಆಗ ಧೃತರಾಷ್ಟ್ರನು ಪುನಃ ಶ್ರೀಕೃಷ್ಣನಿಗೆ-"ಕೃಷ್ಣಾ, ನನ್ನ ಮಗನ ಮೇಲೆ ನನ್ನ ದರ್ಪ ಎಷ್ಟು ಇರುತ್ತದೆಂಬುದನ್ನು ನೀನು ಕಣ್ಣಾರೆ ನೋಡಿದೆ. ಈ ಒಡಂಬಡಿಕೆಯನ್ನು ಮಾಡಬೇಕೆಂದು ನನ್ನ ಅಪೇಕ್ಷೆಯು ಬಹಳ ಇರುತ್ತದೆ. ಆದರೆ ನನ್ನ ಯತ್ನವು ಏನೂ ನಡೆಯಲೊಲ್ಲದು. ಪಾಂಡವರ ಬಗ್ಗೆ ನನಗೆ ದುಷ್ಟ ಅಭಿಪ್ರಾಯವು ಎಷ್ಟು ಮಾತ್ರಕ್ಕೂ ಇರುವದಿಲ್ಲ. ಇದಕ್ಕೆ ಯಾವತ್ತು ಕೌರವರು ಮತ್ತು ಈ ಯಾವತ್ತು ರಾಜರು ಸಾಕ್ಷಿಯಾಗಿರುತ್ತಾರೆ" ಎಂದು ಹೇಳಿದನು. ಆಗ ಶ್ರೀಕೃಷ್ಣನು ಸಾತ್ಯಕಿಯನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ವಿದುರನ ಮನೆಗೆ ಬಂದು ಅಲ್ಲಿ ಕುಂತಿಗೆ ಸಭೆಯಲ್ಲಿ ನಡೆದ ಯಾವತ್ತು ವೃತ್ತಾಂತವನ್ನು ತಿಳಿಸಿ ಹಸ್ತಿನಾಪುರದಿಂದ ತೀವ್ರವಾಗಿ ಹೊರಟು ಉಪಲವ್ಯಕ್ಕೆ ಬಂದು ತಾನು ಒಡಂಬಡಿಕೆಯನ್ನು ಕುರಿತು ನಡೆಸಿದ ಪ್ರಯತ್ನವು ವ್ಯರ್ಥವಾಗಿ ಯುದ್ಧದ ಪ್ರಸಂಗವು ಬಂದಿತೆಂದು ಯುಧಿಷ್ಠಿರನಿಗೆ ತಿಳಿಸಿದನು. ಇದನ್ನು ಕೇಳಿ ಅವನಿಗೆ ಬಹಳ ವ್ಯಸನವಾಯಿತು. ಆದರೂ ಅವನು ತಮ್ಮೆಲ್ಲರಿಗೆ ದುರ್ದೈವದಿಂದ ಬಂದು ಒದಗಿದಂಥ ಈ ಪ್ರಸಂಗಕ್ಕೆ ಧೈರ್ಯದಿಂದ ತಲೆಕೊಡಬೇಕೆಂದು ನಿಶ್ಚಯಿಸಿ, ಯುದ್ಧದ ಸಿದ್ಧತೆಗಾಗಿ ತನ್ನ ಸೈನ್ಯದಲ್ಲಿ ಏಳು ಭಾಗಗಳನ್ನು ಮಾಡಿ, ಆ ಏಳು ಭಾಗಗಳಿಗೆ ಏಳು ಮಂದಿ ಸೇನಾಧಿಪತಿಗಳನ್ನು ನೇಮಿಸಿ, ಧೃಷ್ಟದ್ಯುಮ್ನನು ಮುಖ್ಯ ಸೇನಾಧಿಪತಿಯಾಗಬೇಕೆಂತಲೂ, ಆ ಎಲ್ಲರಿಗೆ ಅರ್ಜುನನು ಸಹಾಯ ಮಾಡಬೇಕೆಂತಲೂ, ಶ್ರೀಕೃಷ್ಣನು ಯುದ್ಧದ ವಿಷಯದಲ್ಲಿ ಆಲೋಚನೆಯನ್ನು ಹೇಳಬೇಕೆಂತಲೂ ಗೊತ್ತು ಮಾಡಿದನು. ಶ್ರೀಕೃಷ್ಣನು ತಾನು ಕೈಯಲ್ಲಿ ಶಸ್ತ್ರವನ್ನು ಹಿಡಿದು ಯುದ್ಧವನ್ನು ಮಾಡುವದಿಲ್ಲೆಂದು ಮೊದಲೇ ಹೇಳಿದ್ದನು. ಆದುದರಿಂದ ಅವನು ಅರ್ಜುನನ ಸಾರಥ್ಯ

ವನ್ನು ಸ್ವೀಕರಿಸಿ ಅವನ ಕುದುರೆಗಳ ಕಡಿವಾಣವನ್ನು ಕೈಯಲ್ಲಿ ಹಿಡಿದುಕೊಂಡನು. ಈ ಪ್ರಕಾರ ಪಾಂಡವ ಸೈನ್ಯದ ವ್ಯವಸ್ಥೆಯಾದ ನಂತರ ಪಾಂಡವ ಸೈನ್ಯವು ಕುರುಕ್ಷೇತ್ರಕ್ಕೆ ಬಂದು ನಿಂತುಕೊಂಡಿತು. ದುರ್ಯೋಧನನಾದರೂ ತನ್ನ ಸೈನ್ಯವನ್ನು ಕುರುಕ್ಷೇತ್ರಕ್ಕೆ ತೆಗೆದುಕೊಂಡು ಬಂದು ಪಾಂಡವರಿಂದ ಐದು ಯೋಜನ ಉದ್ದವೂ, ಐದು ಯೋಜನ ಅಗಲವೂ ಇದ್ದ ರಣಭೂಮಿಯನ್ನು ಬಿಟ್ಟು ತನ್ನ ಠಾಣ್ಯವನ್ನು ಊರಿದನು.

---

# ೬. ಗೀತಾಪರ್ವ.

ಈ ಪ್ರಕಾರ ಪಾಂಡವ ಕೌರವರು ಪರಸ್ಪರರೊಳಗೆ ಯುದ್ಧವನ್ನು ಮಾಡಲು ಸಜ್ಜರಾಗಿ ತಮ್ಮ ತಮ್ಮ ಪ್ರಚಂಡ ಸೈನ್ಯಗಳೊಂದಿಗೆ ಒಂದು ದಿನ ಪ್ರಾತಃಕಾಲದಲ್ಲಿ ತಮ್ಮ ರಣಕಹಾಳೆಗಳನ್ನು ಊದಿಸುತ್ತ ಯುದ್ಧರಂಗಕ್ಕೆ ಬಂದು ಒಬ್ಬರಿಗೊಬ್ಬರ ಎದುರಾಗಿ ನಿಂತುಕೊಂಡರು. ಉಭಯ ಪಕ್ಷಗಳ ಸೇನಾಪತಿಗಳು ತಮ್ಮ ತಮ್ಮ ಕಲ್ಪನಾಚಾತುರ್ಯದ ಮೇರೆಗೆ ತಮ್ಮ ಸೈನ್ಯಗಳ ವ್ಯೂಹರಚನೆಯನ್ನು ಮಾಡಲಾರಂಭಿಸಿದರು. ಆ ಕಾಲಕ್ಕೆ ಶ್ರೀಕೃಷ್ಣನು ಸ್ವತಃ ತನ್ನ ಕೈಯಲ್ಲಿ ಕಡಿವಾಣವನ್ನು ಹಿಡಿದುಕೊಂಡು ಬಿಳಿಯ ಕುದುರೆಗಳನ್ನು ಹೂಡಿದಂಥ ಅರ್ಜುನನ ರಥವನ್ನು ಪಾಂಡವರ ಸೈನ್ಯದ ಮುಂದೆ ತಂದು ನಿಲ್ಲಿಸಿದನು. ಆ ಕೂಡಲೆ ಪಾಂಡವ ಸೈನಿಕರು ಪ್ರಚಂಡವಾದ ಜಯಘೋಷವನ್ನು ಮಾಡಿ ಅವನಿಗೆ ಸನ್ಮಾನವನ್ನು ಮಾಡಿದರು. ಇತ್ತಲಾ ಬಿಳಿಯ ಕೂದಲುಗಳಾದವನೂ, ಬಿಳಿಯ ಮುಕುಟವನ್ನು ಧರಿಸಿದವನೂ, ಸೈನ್ಯಾಧಿಪತ್ಯದ ಬಿಳಿಯ ಛತ್ರವನ್ನು ತಲೆಯ ಮೇಲೆ ಹಿಡಿದವನೂ, ಬಿಳಿಯ ಕುದುರೆಗಳನ್ನು ಹೂಡಿದ ರಥದಲ್ಲಿ ಕುಳಿತವನೂ ಹಾಗೂ ರಥದ ಮೇಲೆ ಬಿಳಿಯ ನಿಶಾನೆಯನ್ನು ಹಚ್ಚಿದವನೂ ಆದ ಕುರುಕುಲಪಿತಾಮಹನಾದ ಭೀಷ್ಮನು ಕೌರವ ಸೈನ್ಯದ ಅಗ್ರಭಾಗದಲ್ಲಿ ಬಂದು ನಿಂತನು. ಆ ಕಾಲಕ್ಕೆ ಕೌರವ ಸೈನಿ



ಶ್ರೀಕೃಷ್ಣನು ಅರ್ಜುನನ ಸಾರಥಿಯಾಗಿ ಅರ್ಜುನನನ್ನು
ಯುದ್ಧರಂಗಕ್ಕೆ ಕರೆದು ತಂದದ್ದು. (ಪುಟ ೧೪)

ಕರು ತಮ್ಮ ಜಯಶ್ರೀಯ ಪ್ರಚಂಡ ಗರ್ಜನೆಗಳಿಂದ ಅವನ ಸ್ವಾಗತವನ್ನು ಮಾಡಿದರು. ಈ ಮೇರೆಗೆ ಲಕ್ಷಾವಧಿ ಜನರ ವೀರಗರ್ಜನೆಗಳಿಂದ ಕ್ಷಾತ್ರ ವೀರರ ಹೃದಯಕಮಲದಲ್ಲಿ ವೀರಶ್ರೀಯು ಅರಳುತ್ತಿರುವ ಸಮಯದಲ್ಲಿ ಅರ್ಜುನನು ಶತ್ರುಪಕ್ಷದ ಕಡೆಗೆ ಯಾವ ಯಾವ ವೀರರು ತಮ್ಮೊಡನೆ ಯುದ್ಧ ಮಾಡುವದಕ್ಕೆ ಬಂದಿರುತ್ತಾರೆಂದು ನೋಡಲು ಅಭಿಲಾಷಿಸಿ ಶ್ರೀಕೃಷ್ಣನಿಗೆ ತನ್ನ ರಥವನ್ನು ಕೌರವ ಸೈನ್ಯದ ಎದುರಿಗೆ ಯುದ್ಧರಂಗದ ಮಧ್ಯಭಾಗದಲ್ಲಿ ನಿಲ್ಲಿಸಲು ಹೇಳಿದನು. ಆದರಂತೆ ಶ್ರೀಕೃಷ್ಣನು ಅರ್ಜುನನ ರಥವನ್ನು ಯುದ್ಧರಂಗದ ಮಧ್ಯಭಾಗದಲ್ಲಿ ಒಯ್ದು ನಿಲ್ಲಿಸಿದನು. ಆ ಬಳಿಕ ಅರ್ಜುನನು ಎರಡೂ ಪಕ್ಷಗಳ ಸೈನ್ಯದ ಕಡೆಗೆ ದೃಷ್ಟಿಸಿ ನೋಡಲಾಗಿ ಎರಡೂ ಪಕ್ಷಗಳಲ್ಲಿ ಲಕ್ಷಾವಧಿ ವೀರರು ತಮ್ಮ ತಮ್ಮ ಜೀವದ ಹಂಗು ತೊರೆದು ಯುದ್ಧಕ್ಕೆ ಅಣಿಯಾಗಿ ನಿಂತದ್ದನ್ನು ಕಂಡನು. ಇತ್ತ ಕೌರವರ ಕಡೆಗೆ ಭೀಷ್ಮ, ದ್ರೋಣ, ಶಲ್ಯ ಇತ್ಯಾದಿ ಮಹಾನ್ ಮಹಾನ್ ಮಹಾರಥಿಗಳು ಮತ್ತು ಕೌರವಪುತ್ರರಾದ ಲಕ್ಷ್ಮಣಾದಿ ಪ್ರಭೃತಿಗಳು ತಮ್ಮ ತಮ್ಮ ರಥಗಳಲ್ಲಿ ಕುಳಿತು ಒತ್ತಟ್ಟಿಗೆ ಮಿಳಿತರಾದ್ದನ್ನು ನೋಡಿದನು. ಹಾಗೂ ತಮ್ಮ ಕಡೆಗೆ ಧೃಷ್ಟದ್ಯುಮ್ನ, ಭೀಮ, ವಿರಾಟ, ಚೇಕಿತಾನ, ಪಾಂಡ್ಯ ಮೊದಲಾದ ಮಹಾರಥಿಗಳು, ಪಾಂಡವಪುತ್ರರಾದ ಅಭಿಮನ್ಯು ಪ್ರಭೃತಿಗಳು ಮತ್ತು ವಿರಾಟದ್ರುಪದರ ಪೌತ್ರರು ಇತ್ಯಾದಿ ಬಾಲವೀರರು ಯುದ್ಧೋತ್ಸಾಹದಿಂದ ನಿಂತಿರುವದನ್ನು ಕಂಡನು. ಆಗ ಅರ್ಜುನನ ಮನಸಿನೊಳಗೆ ಈ ಲಕ್ಷಾವಧಿ ವೀರರು, ಹಾಗೂ ತನಗೆ ಪೂಜ್ಯರೂ ಪ್ರಿಯರೂ ಆದ ಅಜ್ಜಂದಿರು, ಗುರುಗಳು, ಬೀಗರು, ಬಿಜ್ಜರು, ಮಕ್ಕಳು, ಮೊಮ್ಮಕ್ಕಳು, ಅಣ್ಣತಮ್ಮಂದಿರು, ಆಪ್ತರು, ಮಿತ್ರರು, ಒಬ್ಬರಿಗೊಬ್ಬರು ಹೋರಾಡಿ ಹತರಾದ ತರುವಾಯ ತಾನು ಬದುಕಿ ಉಳಿದರೆ ತನಗೆ ಹಸ್ತಿನಾಪುರದ ರಾಜ್ಯಸಿಂಹಾಸನವು ಪ್ರಾಪ್ತಿಯಾಗುವದೆಂಬ ಸಂಗತಿಯು ಒಮ್ಮಿಂದೊಮ್ಮೆ ಬರಲಾಗಿ ಅವನು ಅವರೆಲ್ಲರ ಜೀವದ ಕರುಣೆಯಿಂದಲೂ, ತನ್ನ ಆಪ್ತಜನರ ಪ್ರೇಮದಿಂದಲೂ ಬಹಳ ಶೋಕಾಕುಲನಾದನು. ಆದುದರಿಂದ ಅವನ ಧೈರ್ಯವೂ, ಉತ್ಸಾಹವೂ ಕುಗ್ಗಿ ಹೋದವು. ಅವನ ಕೈಕಾಲುಗಳಲ್ಲಿಯ ಶಕ್ತಿಯು ನಿಂತು ಹೋಯಿತು. ಅವನ ಕಣ್ಣೊಳಗಿಂದ

ದುಃಖಾಶ್ರುಗಳು ಹರಿಯಹತ್ತಿದವು. ಈ ಪ್ರಕಾರ ಅರ್ಜುನನು ಶೋಕದಿಂದ ದುರ್ಬಲಚಿತ್ತನಾಗಿ ಪರಮದೈನ್ಯದೊಡನೆ ಶ್ರೀಕೃಷ್ಣನಿಗೆ—"ಗೋವಿಂದಾ! ಈ ಲಕ್ಷಾವಧಿ ವೀರರನ್ನೂ ಪೂಜ್ಯರಾದ ಗುರುಗಳನ್ನೂ ಪ್ರಿಯರಾದ ಬಂಧುಗಳನ್ನೂ ಕೊಂದ ಬಳಿಕ ನನಗೆ ರಾಜ್ಯಸುಖಭೋಗವು ಏತಕ್ಕೆ ಬೇಕು? ಜನಾರ್ದನಾ! ನಾನು ಯಾರಿಗೋಸ್ಕರ ರಾಜ್ಯಸುಖಭೋಗಗಳನ್ನು ಬಯಸತಕ್ಕದ್ದೋ ಅಂಥ ನನ್ನ ಗುರುಗಳು, ಬಂಧುಗಳು, ಬೀಗರು, ಬಿಜ್ಜರು ತಮ್ಮ ತಮ್ಮ ಜೀವದ ಹೆದರಿಕೆಯನ್ನು ಲವಲೇಶವಾದರೂ ತಾಳದೆ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿ ನನ್ನ ಕೂಡ ಯುದ್ಧ ಮಾಡಲಿಕ್ಕೆ ಬಂದು ನಿಂತಿರುತ್ತಾರೆ. ನಾನು ಇವರೆಲ್ಲರನ್ನು ಕೊಂದಬಳಿಕ ನನಗೆ ತ್ರೈಲೋಕ್ಯಾಧಿಪತ್ಯವು ದೊರಕಿದರೂ ಬೇಡ. ಅಂದಮೇಲೆ ನಾನು ಒಂದು ಸಣ್ಣ ಕುರುರಾಜ್ಯದ ಲೋಭಕ್ಕಾಗಿ ಇವರ ಮೇಲೆ ಹೇಗೆ ಶಸ್ತ್ರಗಳನ್ನು ಪ್ರಯೋಗಿಸಲಿ? ಈ ಕುಲಕ್ಷಯದಿಂದ ನಮಗೆ ಯಾವ ಸುಖವು ಲಭಿಸೀತು? ಒಂದು ವೇಳೆ ಇವರು ರಾಜ್ಯಲೋಭದ ದೆಸೆಯಿಂದ ಕುಲಕ್ಷಯವನ್ನು ಮಾಡಲಿಕ್ಕೆ ಸಿದ್ಧರಾದರೂ ಧರ್ಮಶೀಲರಾದ ನಾವು ಈ ಪಾತಕವನ್ನು ಹೇಗೆ ಮಾಡತಕ್ಕದ್ದು? ಕುಲಕ್ಷಯದಿಂದ ಕುಲಧರ್ಮಗಳ ನಾಶವು, ಕುಲಧರ್ಮಗಳ ನಾಶದಿಂದ ದುಷ್ಟ ಸ್ತ್ರೀಯರ ಪ್ರಾಬಲ್ಯವು, ದುಷ್ಟ ಸ್ತ್ರೀಯರ ಪ್ರಾಬಲ್ಯದಿಂದ ವರ್ಣ ಸಂಕರವು ಮತ್ತು ವರ್ಣ ಸಂಕರದಿಂದ ನರಕ ಪ್ರಾಪ್ತಿಯು ಉಂಟಾಗುವವೆಂದು ನಮಗೆ ತಿಳಿಯುತ್ತಿದ್ದು ನಾವು ಇಂಥ ಪಾಪಕರ್ಮ ಮಾಡುವದಕ್ಕಾಗಿ ಯುದ್ಧ ಮಾಡಬೇಕೇ? ಅಯ್ಯೋ! ನಾವು ಶಸ್ತ್ರವನ್ನು ಕೈಯಲ್ಲಿ ಹಿಡಿದು ಇಂಥ ಪಾಪ ಕರ್ಮವನ್ನು ಮಾಡುವದಕ್ಕಿಂತ ದುರ್ಯೋಧನಾದಿಗಳು ತಾವೇ ಶಸ್ತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು ನಮ್ಮನ್ನು ಕೊಂದರೆ ಹೆಚ್ಚು ಕ್ಷೇಮವಾದೀತು" ಎಂದು ನುಡಿದು ತನ್ನ ಗಾಂಡೀವ ಧನುಷ್ಯವನ್ನು ಕೆಳಗೆ ಚೆಲ್ಲಿ ಕೊಟ್ಟು ರಥದಲ್ಲಿ ಸುಮ್ಮನೆ ಕುಳಿತುಕೊಂಡನು. ಅರ್ಜುನನ ಈ ವಿಲಕ್ಷಣವಾದ ಸ್ಥಿತಿಯನ್ನು ನೋಡಿ ಶ್ರೀಕೃಷ್ಣನಿಗೆ ಬಹಳ ಆಶ್ಚರ್ಯವಾಯಿತು. ಕಡೆಗೆ ಅವನು ಅರ್ಜುನನಿಗೆ- "ಪಾರ್ಥಾ, ನಿನ್ನ ಪೂರ್ವಜರಾದ ಆರ್ಯರಿಗೆ ಎಂದೂ ಗೊತ್ತಿಲ್ಲದಂಥ ಹಾಗೂ ನಿನ್ನ ಕೀರ್ತಿಗೆ ಕಲಂಕವನ್ನು ಹಚ್ಚಿ, ಅಂತ್ಯದಲ್ಲಿ ನಿನಗೆ ನಿನ್ನ ಅಧರ್ಮದ

ಮೂಲಕ ನರಕ ಪ್ರಾಪ್ತಿಯನ್ನು ಮಾಡುವಂಥ ಈ ನೀಚವಾದ ಮನೋವೃತ್ತಿಯು ನಿನಗೆ ಹೇಗೆ ಉಂಟಾಯಿತು? ನೀನು ಈ ಪ್ರಕಾರ ನಪುಂಸಕನಾಗಬೇಡ. ಈ ನಪುಂಸಕತ್ವವು ನಿನಗೆ ಎಂದಿಗೂ ಶೋಭಿಸುವದಿಲ್ಲ. ಈ ನಿನ್ನ ಮನಸಿನ ದೌರ್ಬಲ್ಯವನ್ನು ಬಿಟ್ಟುಕೊಟ್ಟು ಯುದ್ಧಕ್ಕೆ ಸನ್ನಿದ್ಧನಾಗು" ಎಂದು ಹೇಳಿದನು. ಶ್ರೀಕೃಷ್ಣನ ಈ ತೀಕ್ಷ್ಣವಾದ ನುಡಿಗಳನ್ನು ಕೇಳಿ ಅರ್ಜುನನು ಶ್ರೀಕೃಷ್ಣನಿಗೆ—"ಜನಾರ್ದನಾ, ನಾನು ಸಣ್ಣವನಿದ್ದಾಗ ಯಾವ ಅಜ್ಜಂದಿರ ತೊಡೆಯ ಮೇಲೆ ಉರುಳಾಡುತ್ತ ಆನಂದದಿಂದ ಬಾಲಕ್ರೀಡೆಯನ್ನು ಮಾಡಿದೆನೋ ಆ ಅಜ್ಜಂದಿರ ಕೂಡ ನಾನು ಈಗ ಯುದ್ಧ ಮಾಡಿ ಅವರ ಎದೆಗಳಿಗೆ ನನ್ನ ಶಸ್ತ್ರಗಳಿಂದ ವೇದನೆಯನ್ನು ಮಾಡಬೇಕೋ? ಯಾವ ದ್ರೋಣ ಗುರುಗಳು ನನಗೆ ತಮ್ಮ ಹೊಟ್ಟೆಯ ಮಗನಕಿಂತಲು ಹೆಚ್ಚಾಗಿ ತಿಳಿದುಕೊಂಡು ನನಗೆ ಶಸ್ತ್ರವಿದ್ಯೆಯನ್ನು ಕಲಿಸಿ ನನ್ನನ್ನು ಶಸ್ತ್ರವಿದ್ಯಾನಿಪುಣನಾಗಿ ಮಾಡಿದರೋ ಆ ಗುರುಗಳ ಮೇಲೆಯೇ ನಾನು ನನ್ನ ಶಸ್ತ್ರವಿದ್ಯೆಯನ್ನು ಉಪಯೋಗಿಸಬೇಕೋ? ಎಲೈ ಗೋವಿಂದನೇ! ಈ ಅತ್ಯಂತ ಪೂಜ್ಯ ಮತ್ತು ಪ್ರಿಯ ಭೀಷ್ಮ ದ್ರೋಣರ ಮೇಲೆ ನಾನು ಹೇಗೆ ಬಾಣಗಳನ್ನು ಬಿಡಬೇಕು? ಇದಕ್ಕಿಂತಲು ಭಿಕ್ಷಾವೃತ್ತಿಯನುನ್ನು ಮಾಡಿ ಹೊಟ್ಟೆಹೊರಕೊಳ್ಳುವದು ಅಥವಾ ಅರಣ್ಯದಲ್ಲಿ ಬೇಟೆಯಾಡಿಕೊಂಡು ಮೃಗಗಳನ್ನು ಕೊಂದು ಅವುಗಳ ಮೇಲಿಂದ ಉಪಜೀವಿಸುವದು ನೂರುಪಾಲಿಗೆ ನೆಟ್ಟಗಲ್ಲನೇ? ಜನಾರ್ದನನೇ! ಈ ಆಪ್ತ ಜನರ ಮೋಹದಿಂದ ನಿಜವಾಗಿ ನನ್ನ ಬುದ್ಧಿಗೆ ದೌರ್ಬಲ್ಯವು ಬಂದಿರುತ್ತದೆ. ನೀನು ಎಲ್ಲ ಯುಕ್ತಾಯುಕ್ತವನ್ನು ಬಲ್ಲವನಿರುತ್ತೀ. ನೀನು ಪ್ರತ್ಯಕ್ಷ ಶ್ರೀವಿಷ್ಣುವು ಇರುತ್ತೀ. ನಾನು ನಿನಗೆ ಮನಃಪೂರ್ವಕವಾಗಿ ಶರಣುಬಂದಿರುತ್ತೇನೆ. ಈ ಪ್ರಸಂಗದಲ್ಲಿ ನಾನು ಏನು ಮಾಡುವದು ನ್ಯಾಯವು ಮತ್ತು ಶ್ರೇಯಸ್ಕರವು ಎಂಬುದನ್ನು ನನಗೆ ದಯಮಾಡಿ ಹೇಳು" ಎಂದು ಬೇಡಿಕೊಂಡನು. **ಆ ಕಾಲಕ್ಕೆ ಶ್ರೀಕೃಷ್ಣನು ಹೇಳಿದ ದಿವ್ಯ ಮತ್ತು ಮನೋಹರವಾದ ಉಪದೇಶವು ಸಂಸಾರದಲ್ಲಿ ಮನುಷ್ಯ ಮಾತ್ರರಿಗೆ ಅನೇಕ ದುಃಖಗಳು ಮತ್ತು ಸಂಕಟಗಳು ಒದಗಿದಾಗ್ಗೆ ತಮ್ಮ ಯೋಗ್ಯ ಕರ್ತವ್ಯವೇನೆಂಬುದನ್ನು ತಿಳಿದುಕೊಳ್ಳಲಿಕ್ಕೆ**

**ಬಹಳ ಉಪಯುಕ್ತವಿರುತ್ತದೆ.** ಅದನ್ನು **ಮಹರ್ಷಿವ್ಯಾಸರು** ಭಾರತದೊಳಗೆ **ಭಗವದ್ಗೀತೆಯಲ್ಲಿ** ತಮ್ಮ ಅಧಿಕಾರಯುಕ್ತವಾದ ಅಮೃತವಾಣಿಯಿಂದ ಹೇಳಿರುತ್ತಾರೆ. ಅದನ್ನೇ ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇವೆ:—

## ( ಗೀತೋಪದೇಶ. )

ಶ್ರೀಕೃಷ್ಣನು ತನಗೆ ಅರ್ಜುನನು ಕೇಳಿದ ಪ್ರಶ್ನೆಗೆ ಉತ್ತರಕೊಟ್ಟದ್ದೇನಂದರೆ:—“ಅರ್ಜುನಾ, ನೀನು ಯಾವ ಜನರ ಸಲುವಾಗಿ ಶೋಕ ಮಾಡುವದು ಯೋಗ್ಯವಲ್ಲವೋ ಆ ಜನರ ಸಲುವಾಗಿ ಶೋಕ ಮಾಡುತ್ತೀ. ಹಾಗೂ ಇತ್ತ ಕಡೆಗೆ ತತ್ವಜ್ಞಾನದ ಮಾತುಗಳನ್ನು ಹೇಳುತ್ತೀ. ಇದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ ಅಪ್ಪಾ, ಜೀವಂತವಿರುವಂಥ ಅಥವಾ ಸತ್ತಂಥ ಮನುಷ್ಯರ ಸಲುವಾಗಿ ಶೋಕ ಮಾಡುವದು ಬುದ್ಧಿವಂತಿಕೆಯಲ್ಲ. ನೀನು, ನಾನು ಮತ್ತು ಈ ಎಲ್ಲ ರಾಜರು ಈ ಮುಂಚಿತವಾಗಿ ಇದ್ದಿಲ್ಲವೆಂದು ಅಥವಾ ಇನ್ನು ಮುಂದೆ ಇರುವದಿಲ್ಲವೆಂದು ತಿಳಿಯಬೇಡ. ಯಾವ ಪ್ರಕಾರ ದೇಹಕ್ಕೆ ಬಾಲ್ಯವು, ತಾರುಣ್ಯವು, ವೃದ್ಧಾಪ್ಯವು ಈ ಪ್ರಕಾರ ಬೇರೆ ಬೇರೆ ಅವಸ್ಥೆಗಳು ಇರುತ್ತವೋ ಅದರಂತೆ ಆತ್ಮಕ್ಕೆ ಈ ದೇಹದ ತರುವಾಯ ಮುಂದಿನ ದೇಹವು ಪ್ರಾಪ್ತವಾಗುವದು ನಿಶ್ಚಯವೇ. ಅದುದರಿಂದ ಧೀರ ಪುರುಷರು ಮರಣದ ಸಲುವಾಗಿ ಶೋಕ ಮಾಡುವದಿಲ್ಲ. ಯಾವದು ಅಸತ್ ಅಂದರೆ ಎಂದೂ ಇದ್ದಿಲ್ಲವೋ ಅದು ಹೇಗೆ ಉತ್ಪನ್ನವಾಗಬೇಕು? ಮತ್ತು ಸತ್ ಅಂದರೆ ಇರುತ್ತದೆಯೋ ಅದು ಹೇಗೆ ಇಲ್ಲದಂತೆ ಆಗಬೇಕು? ತತ್ವಜ್ಞಾನಿಗಳಿಗೆ ಸತ್ ಮತ್ತು ಅಸತ್ ಈ ಎರಡರ ಪೂರ್ಣ ನಿಶ್ಚಯವು ಆಗಿಯೇ ಇರುತ್ತದೆ. ಸತ್ ಮತ್ತು ಅಸತ್ ಇವೆರಡನ್ನೂ ದಾಟಿ ಇರತಕ್ಕ ಅವಿನಾಶೀ ತತ್ವದಿಂದ ಈ ಇಡೀ ಜಗತ್ತು ವ್ಯಾಪಿಸಿರುವದು. ಅದರ ಅಂಶವೇ ಆತ್ಮವು ಇರುವದರಿಂದ ಅದು ಅವಿನಾಶಿ ಇರುವದು. ಈ ಅವ್ಯಯ ಆತ್ಮದ ನಾಶವನ್ನು ಯಾರೂ ಮಾಡಲಿಕ್ಕೆ ಸಮರ್ಥರಲ್ಲ. ಆತ್ಮದ ಈ ದೇಹವು ಒಂದುವೇಳೆ ವಿಸರ್ಜನವನ್ನು ಹೊಂದಿದಾಗ್ಯೂ ದೇಹದ ಅಧಿಷ್ಠಾನವಾಗಿರುವ ಆತ್ಮವು ಎಂದೂ ವಿಸರ್ಜನ ಹೊಂದುವದಿಲ್ಲ. ಆದುದರಿಂದ ಅರ್ಜುನಾ, ನೀನು ಸಂಶಯವನ್ನು ಬಿಟ್ಟು ಯುದ್ಧಮಾಡು. ಈ ಆತ್ಮವು ಕೊಲ್ಲುವದೆಂತಾಗಲಿ, ಅಥವಾ

ಸಾಯುವದೆಂತಾಗಲಿ ತಿಳಿಯುವದು ತಪ್ಪು ಇರುತ್ತದೆ. ಇದು ಕೊಲ್ಲುವದೂ ಇಲ್ಲ; ಸಾಯುವದೂ ಇಲ್ಲ. ಈ ಆತ್ಮವು ನಿತ್ಯವೂ, ಶಾಶ್ವತವೂ ಇರುತ್ತದೆ. ಇದಕ್ಕೆ ಮುಪ್ಪು ಇಲ್ಲ, ಮರಣವೂ ಇಲ್ಲ. ಶರೀರವು ನಾಶವಾದಾಗ್ಯೂ ಆತ್ಮವು ನಾಶವಾಗುವದಿಲ್ಲ. ನಾವು ಜೀರ್ಣವಾದ ಅರಿವೆಗಳನ್ನು ಬಿಟ್ಟುಕೊಟ್ಟು ಹೊಸ ಅರಿವೆಗಳನ್ನು ಹೇಗೆ ಧರಿಸುತ್ತೇವೋ ಹಾಗೆ ಈ ದೇಹದ ಅಧಿಷ್ಠಾನವಾದ ಆತ್ಮವು ಜೀರ್ಣವಾದ ಶರೀರವನ್ನು ಬಿಟ್ಟು ತಿರುತಿರುಗಿ ಹೊಸ ಶರೀರವನ್ನು ಧಾರಣ ಮಾಡುತ್ತದೆ. ಈ ಆತ್ಮವನ್ನು ಕತ್ತಿಯಿಂದ ಕಡಿಯಲಿಕ್ಕೆ ಆಗುವದಿಲ್ಲ; ಅಥವಾ ಅದನ್ನು ಬೆಂಕಿಯಿಂದ ಸುಡಲಿಕ್ಕೆ ಆಗುವದಿಲ್ಲ. ಇದು ನೀರಿನಿಂದ ತೊಯ್ಯುವಂಥಾದ್ದು ಅಲ್ಲ; ಅಥವಾ ಗಾಳಿಯಿಂದ ಒಣಗುವಂಥಾದ್ದು ಅಲ್ಲ. ಇದು ಸತ್ಯವು, ಸರ್ವವ್ಯಾಪಿಯು, ಅಚಲವು, ಸನಾತನವು ಅವ್ಯಕ್ತವು, ಅಚಿಂತ್ಯವು ಮತ್ತು ವಿಕಾರರಹಿತವು ಇರುತ್ತದೆ. ಈ ಆತ್ಮದ ಸ್ವರೂಪವನ್ನು ನೀನು ಪೂರ್ಣವಾಗಿ ತಿಳಕೊಂಡರೆ ನಿನಗೆ ಶೋಕ ಮಾಡಲಿಕ್ಕೆ ಕಾರಣವು ಉಳಿಯಲಾರದು. ಒಂದು ವೇಳೆ ನೀನು ಈ ಆತ್ಮಕ್ಕೆ ಜನ್ಮ ಮರಣಗಳು ಇರುತ್ತವೆಂದು ತಿಳಿದುಕೊಂಡರೂ ನಿನಗೆ ಶೋಕ ಮಾಡುವ ಕಾರಣವಿಲ್ಲ. ನಿನ್ನ ತಿಳುವಳಿಕೆಯ ಪ್ರಕಾರ ಯಾವ ಆತ್ಮವು ಜನ್ಮಕ್ಕೆ ಬಂದಿರುವದೋ ಅದು ಮರಣವನ್ನು ಹೊಂದಲಿಕ್ಕೇಬೇಕು. ಮತ್ತು ಯಾವದು ಸಾಯುವದೋ ಅದು ಪುನರ್ಜನ್ಮವನ್ನು ಹೊಂದಲಿಕ್ಕೇಬೇಕು. ಅಂದಮೇಲೆ ಜನ್ಮ ಮರಣಗಳು ಅಪರಿಹಾರ್ಯವಿರುವದರಿಂದ ಮರಣದ ಬಗ್ಗೆ ಶೋಕ ಮಾಡುವದು ಯೋಗ್ಯವಲ್ಲ. ಕೇವಲ ಪ್ರತ್ಯಕ್ಷ ಕಂಡದ್ದನ್ನು ಸತ್ಯವೆಂದು ನೀನು ಎಣಿಸಿದಾಗ್ಯೂ ಪ್ರಾಣಿಮಾತ್ರರು ಜೀವಂತವಿರುವತನಕ ವ್ಯಕ್ತರಿರುತ್ತಾರೆ; ಅಂದರೆ ಕಣ್ಣಿಗೆ ಕಾಣಿಸುತ್ತಾರೆ. ಅವರು ಎಲ್ಲಿಂದ ಬಂದರು ಹಾಗೂ ಎಲ್ಲಿ ಹೋಗುತ್ತಾರೆ ಎಂಬುದು ಅವ್ಯಕ್ತ ಇರುವವು; ಅಂದರೆ ಕಣ್ಣಿಗೆ ಕಾಣಿಸುವದಿಲ್ಲ. ಅಂದಮೇಲೆ ನೀನು ಸತ್ಯವೆಂದು ಎಣಿಸದೆ ಇರುವ ಮಾತಿಗೆ ಏಕೆ ಶೋಕ ಮಾಡಬೇಕು? ಮನುಷ್ಯನು ಜನ್ಮಕ್ಕೆ ಒಂದುದಕ್ಕಾಗಿ ನೀನು ಯಾವಾಗ್ಗೆ ಶೋಕ ಮಾಡುವದಿಲ್ಲವೋ ಆಗ ನೀನು ಅವನು ಮರಣಪಟ್ಟದ್ದಕ್ಕಾಗಿ ಏಕೆ ಶೋಕವನ್ನು ಮಾಡುತ್ತೀ? ಅರ್ಜುನಾ, ಆತ್ಮದ ನಿಜಸ್ವರೂಪವನ್ನು ತಿಳಕೊ

ಳ್ಳುವದು ಬಹಳ ಕಠಿಣವಾದದ್ದು. ಅದರ ಪ್ರತ್ಯಕ್ಷ ಸ್ವರೂಪವನ್ನು ನೋಡು ವವರು ಬಹಳ ವಿರಳ. ಅದರ ಯಥಾರ್ಥ ಸ್ವರೂಪವನ್ನು ವರ್ಣನ ಮಾಡುವ ವರೂ ವಿರಳ. ಆತ್ಮದ ಯಥಾರ್ಥ ಸ್ವರೂಪವನ್ನು ಕೇಳಲಿಕ್ಕೆ ಸಿಗುವದು ದುರ್ಲಭವು. ಅದನ್ನು ಕೇಳಿಕೊಂಡ ನಂತರ ಅದರ ಯಥಾರ್ಥ ಜ್ಞಾನವನ್ನು ಮಾಡಿಕೊಳ್ಳುವದು ಅದರಕಿಂತಲು ದುರ್ಲಭವು. ಅದರೂ ಎಲ್ಲರ ದೇಹದಲ್ಲಿ ಇರುವ ಆತ್ಮವನ್ನು ನಿಶ್ಚಯವಾಗಿ ವಧ ಮಾಡಲಿಕ್ಕೆ ಬರುವದಿಲ್ಲ. ಅದುದ ರಿಂದ ಯಾವ ಮನುಷ್ಯನ ಸಲುವಾಗಿಯೂ ನೀನು ಶೋಕ ಮಾಡುವದು ಯೋಗ್ಯವಲ್ಲ. ಈ ಪ್ರಕಾರ ಇದ್ದ ಬಳಿಕ ನೀನು ಸ್ವಧರ್ಮದ ಕಡೆಗೆ ಲಕ್ಷ್ಯ ಕೊಟ್ಟು ಯುದ್ಧ ಮಾಡಲಿಕ್ಕೆ ಹಿಂದು ಮುಂದೆ ನೋಡುವ ಕಾರಣವೇನು? ನಿನ್ನಂಥ ಕ್ಷತ್ರಿಯನಿಗೆ ಧರ್ಮದಿಂದ ಪ್ರಾಪ್ತವಾದ ಯುದ್ಧ ಮಾಡುವದಕ್ಕಿಂ ತಲು ಹೆಚ್ಚಿನ ಶ್ರೇಯಸ್ಕರ ಮಾರ್ಗವು ಯಾವದು? ಸತ್ಯವು ನಿನ್ನ ಪಕ್ಷಕ್ಕೆ ಇರುತ್ತದೆ. ಹಾಗೂ ಯುದ್ಧಕ್ಕೆ ನಿಂತುಕೊಳ್ಳುವ ಮುಂಚೆ ನೀನು ಒಡಂಬಡಿ ಕೆಯನ್ನು ಮಾಡಲಿಕ್ಕೆ ಶಕ್ಯವಿದ್ದಷ್ಟು ಪ್ರಯತ್ನವನ್ನು ಮಾಡಿದಿ. ಇಂಥ ಸ್ಥಿತಿ ಯಲ್ಲಿ ನಾವು ಧರ್ಮಕ್ಕೆ ಅನುಸರಿಸಿ ನಡೆಸಿರುವ ಯುದ್ಧದಿಂದ ನಮ್ಮ ಮುಂದೆ ಅಕಸ್ಮಾತ್ತಾಗಿ ಸ್ವರ್ಗದ ಬಾಗಿಲವು ತೆರೆದು ಇಟ್ಟಂತಾಗುತ್ತದೆಂದು ತಿಳಿದುಕೋ. ಯಾವ ಕ್ಷತ್ರಿಯನು ಪುಣ್ಯಶಾಲಿಯು ಇರುವನೋ ಅವನಿಗೇ ಇಂಥ ಯುದ್ಧ ವನ್ನು ಮಾಡುವ ಯೋಗವು ಪ್ರಾಪ್ತವಾಗುತ್ತದೆ. ಒಂದು ವೇಳೆ ನೀನು ಇಂಥ ಧರ್ಮ ಯುದ್ಧವನ್ನು ಮಾಡದೆ ಹಿಂದಿರುಗಿದರೆ ನಿನಗೆ ಧರ್ಮ ಪ್ರಾಪ್ತಿಯಾಗು ವದು ತಪ್ಪುವದಿಷ್ಟೇ ಅಲ್ಲ, ನಿನಗೆ ಅಪಕೀರ್ತಿಯುಂಟಾಗಿ ಪಾಪವು ಸಹ ತಟ್ಟು ವದು. ನೀನು ಭೀಷ್ಮದ್ರೋಣರ ಮೇಲಿನ ಪ್ರೀತಿಯು ಸಲುವಾಗಿ ಸಮರಾಂಗ ಣದಿಂದ ಹಿಂದಿರುಗಿದರೂ ನಿನ್ನ ಶತ್ರುಗಳು—"ನೀನು ಭೀಷ್ಮದ್ರೋಣರಿಗೆ ಹೆದರಿಕೊಂಡು ತಿರುಗಿ ಹೋದಿ" ಎಂದು ಹೇಳಿ ನಿನ್ನ ಪರಾಕ್ರಮವನ್ನು ಕುರಿ ತು ಪರಿಪರಿಯಿಂದ ನಿಂದಿಸುವರು. ಮಾನವಂತರಿಗೆ ಅಪಕೀರ್ತಿಯು ಮರಣದ ಕಿಂತಲು ಹೆಚ್ಚು ದುಃಖಕರವಾದ್ದು. ಇದಲ್ಲದೆ ಯಾರ ಅಪಕೀರ್ತಿಯಾದರೂ ಪಾತಕವೇಸರಿ. ಅರ್ಜುನಾ, ಈ ಧರ್ಮಯುದ್ಧದಲ್ಲಿ ನೀನು ಹಿಂದಿರುಗದೆ ಮುಂ ದಕ್ಕೆ ಸಾಗುವದು ಯಾವ ರೀತಿಯಿಂದ ನೋಡಿದರೂ ಶ್ರೇಯಸ್ಕರವು. ಇದರಲ್ಲಿ

ನೀನು ಸತ್ತರೆ ನಿನಗೆ ವೀರಸ್ವರ್ಗವು ಸಿಗುವದು. ಒಂದುವೇಳೆ ನಿನಗೆ ಜಯವು ಸಿಕ್ಕರೆ ನೀನು ಪೃಥ್ವಿಯ ರಾಜನಾಗುವೆ. ಆದುದರಿಂದ ನೀನು ಜಯ, ಅಪಜಯ, ಲಾಭ, ಹಾನಿ, ಸುಖ, ದುಃಖ ಇವುಗಳ ವಿಚಾರವನ್ನು ಬದಿಗಿಟ್ಟು ಅಥವಾ ಅವೆಲ್ಲಕ್ಕೂ ಸಮವಾಗಿ ತಿಳಿದುಕೊಂಡು ಸ್ವಕರ್ತವ್ಯ ಮಾಡುವದನ್ನು ನಿಶ್ಚಯ ಮಾಡಿ ಯುದ್ಧಕ್ಕೆ ನಿಂತುಕೋ. ಈ ಪ್ರಕಾರ ನೀನು ಮಾಡಿದರೆ ನಿನಗೆ ಯಾವ ಪ್ರಕಾರದ ಪಾತಕವೂ ತಟ್ಟಲಾರದು."

ಶ್ರೀಕೃಷ್ಣನು ತಿರುಗಿ ಹೀಗೆ ಅಂದನು:—"ಅರ್ಜುನಾ, ಇಲ್ಲಿಯ ವರೆಗೆ 'ಆತ್ಮವು ಅಮರವಿರುತ್ತದೆ' ಎಂಬ ಸಾಂಖ್ಯದ ಅಂದರೆ ತತ್ವಜ್ಞಾನದ ದೃಷ್ಟಿಯಿಂದ ಸ್ವಕರ್ತವ್ಯ ಮಾಡುವದು ಹೇಗೆ ಶ್ರೇಯಸ್ಕರವಾದುದೆಂಬುದನ್ನು ನಿನಗೆ ಹೇಳಿದೆನು. ಈಗ ಇದಕ್ಕಿಂತ **ಯೋಗದ** ಅಂದರೆ 'ಕರ್ಮಕೌಶಲ್ಯದ ದೃಷ್ಟಿಯಿಂದ ಸ್ವಕರ್ತವ್ಯ ಮಾಡುವದು ಹೇಗೆ ಅಧಿಕ ಶ್ರೇಯಸ್ಕರವಾದದ್ದು' ಎಂಬದರ ಸೂಕ್ಷ್ಮ ವಿಚಾರವನ್ನು ನಿನಗೆ ತಿಳಿಸುತ್ತೇನೆ. ನೀನು ಅದನ್ನು ವಿಚಾರ ಮಾಡಿದರೆ ಕರ್ಮದಿಂದ ಹುಟ್ಟುವ ಪಾಪ ಪುಣ್ಯಗಳ ಬಂಧನವೇ ಉಳಿಯುವದಿಲ್ಲ. ಮತ್ತು ಆ ವಿಚಾರದಿಂದ ಪ್ರಯತ್ನ ಮಾಡಿದ್ದು ವ್ಯರ್ಥ ಹೋಗುವದಿಲ್ಲ, ಅಥವಾ ಅದರಿಂದ ದೋಷ ಉತ್ಪನ್ನವಾಗಿ ಪ್ರಾಯಶ್ಚಿತ್ತ ಭೋಗಿಸಬೇಕಾಗುವದಿಲ್ಲ. ಆ ವಿಚಾರದ ಪರಿಣಾಮವು ಮನಸ್ಸಿನ ಮೇಲೆ ಸ್ವಲ್ಪಾದರೂ ಆದಲ್ಲಿ ಮನುಷ್ಯನು ದೊಡ್ಡ ದೊಡ್ಡ ಸಂಕಟಗಳಿಂದ ಮುಕ್ತನಾಗುತ್ತಾನೆ. ಅದೊಂದೇ ನಿಶ್ಚಯಾತ್ಮಕ ವಿಚಾರವು. ಆ ನಿಶ್ಚಯವನ್ನು ಬಿಟ್ಟು ವಿಚಾರ ಮಾಡುವವರಿಗೆ ಮಾತ್ರ ಅನೇಕ ಟೊಂಗೆಗಳು ಒಡೆದಂತೆ ಕಾಣುತ್ತವೆ. ಮಂದಬುದ್ಧಿಯ ಜನರು ವೇದದಲ್ಲಿ ಕಾಮ್ಯಕರ್ಮಗಳ ವಿಧಾನವು ತುಂಬಿರುತ್ತದೆಂದು ವಾದ ಮಾಡುತ್ತಾರೆ. ಅಥವಾ ಅನೇಕ ಕಾಮನೆಗಳಿಂದ (ಆಶೆ ಲೋಭಗಳಿಂದ) ವ್ಯಾಪ್ತರಾಗಿ ಸ್ವರ್ಗವನ್ನು ಅಪೇಕ್ಷಿಸುತ್ತಾರೆ. ಅಥವಾ ಬೇರೆ ಬೇರೆ ಭೋಗಗಳ ಸಲುವಾಗಿ ಮತ್ತು ಐಶ್ವರ್ಯದ ಸಲುವಾಗಿ ಬೇರೆ ಬೇರೆ ಕರ್ಮಗಳನ್ನು ಮಾಡಬೇಕೆಂದು ಹೇಳುತ್ತಾರೆ. ಅಂಥವರಿಗೆ ಆ ನಿಶ್ಚಯರೂಪದ ವಿಚಾರವು ಬರುವದಿಲ್ಲ. ಹಾಗೂ ಅವರ ಮನಸ್ಸಿನಲ್ಲಿ ಸಮಾಧಾನವು ಅಥವಾ ಶಾಂತಿಯು ಸ್ಥಿರವಾಗಿ ಉಳಿಯುವದಿಲ್ಲ. ವೇದಾಂತವು ಸತ್ವ, ರಜ, ತಮ, ಈ ಮೂರೂ

ಗುಣಗಳಿಂದ ಮಿಶ್ರವಿರುತ್ತದೆ. ಆದರೆ ನೀನು ಆ ತ್ರಿಗುಣಗಳ ಮಿಶ್ರಸ್ಥಿತಿಯ ಕಿಂತ ಮುಂದೆ ಹೋಗು. ರಾಗದ್ವೇಷಗಳನ್ನು ಬಿಟ್ಟು, ರಜಸ್ತಮಗಳನ್ನು ತ್ಯಾಗ ಮಾಡಿ, ಯಾವಾಗಲು ಸತ್ವಗುಣದಲ್ಲಿ ಇದ್ದುಕೋ. ಹಾಗೂ ನಿನ್ನ ಯೋಗಕ್ಷೇಮದ ಚಿಂತೆಯನ್ನು ಮಾಡದೆ ಆತ್ಮದಲ್ಲಿಯೇ ಸ್ಥಿತವಾಗಿರು. (ಸ್ಥಿರವಾಗಿ ಮನಸ್ಸಿಡು.) ಅಂದರೆ ನಿನಗೆ ಬ್ರಹ್ಮಜ್ಞಾನದ ಪ್ರಾಪ್ತಿಯಾಗು ವದು. ಎಲ್ಲವು ಜಲಮಯವಾದ ಬಳಿಕ ಯಾವ ಪ್ರಕಾರ ಕೆರೆ ಬಾಂವಿಗಳ ಮಹತ್ವವು ಉಳಿಯುವದಿಲ್ಲವೋ ಆ ಪ್ರಕಾರ ಬ್ರಹ್ಮಜ್ಞಾನವಾದ ಮನುಷ್ಯ ನಿಗೆ ಸಕಲ ವೇದಗಳ ಆವಶ್ಯಕತೆಯು ಉಳಿಯುವದಿಲ್ಲ. ಇರಲಿ. ಆ ನಿಶ್ಚಯಾ ತ್ಮಕ ವಿಚಾರವು ಯಾವದೆಂಬುದನ್ನು ಹೇಳುತ್ತೇನೆ ಕೇಳು. ನಿನ್ನ ಅಧಿಕಾರ ವು ಕರ್ಮ ಮಾಡುವ ಮಟ್ಟಿಗೆ ಇರುತ್ತದಲ್ಲದೆ ಫಲದ ವಿಷಯದಲ್ಲಿ ನಿನ್ನ ಅಧಿಕಾರವು ಇರುವದಿಲ್ಲವೆಂಬುದನ್ನು ಲಕ್ಷ್ಯದಲ್ಲಿಟ್ಟುಕೋ. ಮತ್ತು ಇದನ್ನು ನೀನು ತಿಳಿದುಕೊಂಡು ಫಲದ ಇಚ್ಛೆಯಿಂದ ಕರ್ಮವನ್ನು ಮಾಡಬೇಡ. ಹಾ ಗೂ ಕರ್ಮ ಮಾಡುವದನ್ನು ಬಿಡಬೇಡ. ಫಲದಲ್ಲಿ ಆಸಕ್ತನಾಗದೆ ಯೋಗ ದಲ್ಲಿ (ತತ್ವಜ್ಞಾನದಲ್ಲಿ) ದೃಢನಾಗಿ ನಿನ್ನ ಕರ್ತವ್ಯಕರ್ಮವನ್ನು ಮಾಡು. ಕರ್ಮವು ಸಿದ್ಧಿಗೆ ಹೋಗಲಿ ಅಥವಾ ಹೋಗದಿರಲಿ, ಈ ಎರಡೂ ಸ್ಥಿತಿಯಲ್ಲಿ ನಿನ್ನ ಚಿತ್ತವೃತ್ತಿಯನ್ನು ಸಮವಾಗಿ ಇಟ್ಟುಕೊಳ್ಳುವದೇ **ಯೋಗವು.** ಇಂಥ ಮನಸ್ಸಿನ ಸ್ಥಿತಿಯಲ್ಲಿ ಕರ್ಮ ಮಾಡುವದು ಫಲದ ಮೇಲೆ ಲಕ್ಷ್ಯವಿ ಟ್ಟು ಕರ್ಮ ಮಾಡುವದಕ್ಕಿಂತ ಎಷ್ಟೋ ಪಾಲಿಗೆ ಶ್ರೇಷ್ಠವಾದ್ದು! ಆದುದರಿಂದ ಈ ಬುದ್ಧಿಗೂ ಈ ಮನಸ್ಸಿನ ಸಮತೋಲ ಸ್ಥಿತಿಗೂ ನೀನು ಶರಣು ಹೋಗು. ಯಾರು ಫಲದ ಮೇಲೆ ಲಕ್ಷ್ಯವಿಟ್ಟು ಕರ್ಮ ಮಾಡುತ್ತಾ ರೋ ಅವರ ಸ್ಥಿತಿಯು ಬಹಳ ಕನಿಕರವುಳ್ಳದ್ದಿರುವದು. ಫಲೇಚ್ಛೆಯಿಲ್ಲದೆ ಕರ್ಮ ಮಾಡುವವರಿಗೆ ಸುಕೃತ ಮತ್ತು ದುಷ್ಕೃತ ಹಾಗೂ ಪಾಪ ಮತ್ತು ಪುಣ್ಯ ಇವೆರಡರ ಸ್ಪರ್ಶವೂ ಆಗುವದಿಲ್ಲ. ಆದುದರಿಂದ ನೀನು ಈ ಯೋಗದ ಪ್ರಯತ್ನವನ್ನು ಮಾಡು. ಈ ಯೋಗವು ಕರ್ಮ ಮಾಡುವ ನಿಜ ಕೌಶಲ್ಯವಿ ರುತ್ತದೆ. ಈ ಬುದ್ಧಿಯಿಂದ ಕರ್ತವ್ಯಕರ್ಮಮಾಡುವವರು ಜನ್ಮಬಂಧನಗಳಿಂದ ಮುಕ್ತರಾಗಿ **ಅನಾಮಯ (ಮೋಕ್ಷ)** ಪದಕ್ಕೆ ಮುಟ್ಟುತ್ತಾರೆ" ಈ

ಬುದ್ಧಿಯು ನಿನ್ನಲ್ಲಿ ಯಾವಾಗ ಉತ್ಪನ್ನವಾಗಿ ನಿನ್ನ ಮೋಹತಮವನ್ನು ನಾಶ ಮಾಡುವದೋ ಆಗ ನಿನಗೆ ಹೆಚ್ಚಿಗೆ ಹೇಳುವ ಅಥವಾ ವಿಚಾರ ಮಾಡುವ ಅಗತ್ಯವು ಉಳಿಯುವದಿಲ್ಲ. ಯಾವಾಗ ನಿನ್ನ ಬುದ್ಧಿಯು ನಾನಾತರದ ವೇದ-ವಾದವನ್ನು ಬಿಟ್ಟು ಸಮಾಧಿಯು ಸ್ಥಳದಲ್ಲಿ ನಿಶ್ಚಲವಾಗುವದೋ ಆಗ ನಿನಗೆ ಈ ಯೋಗವು ಸಹಜವಾಗಿ ಪ್ರಾಪ್ತವಾಗುವದು."

ಈ ಹೊತ್ತಿಗೆ ಅರ್ಜುನನ ಮನಸ್ಸಿನಲ್ಲಿ ಕೆಲವು ಶಂಕೆಗಳು ಬಂದುದರಿಂದ ಅವನು ಶ್ರೀಕೃಷ್ಣನಿಗೆ—"ಕೇಶವಾ! **ಸ್ಥಿತಪ್ರಜ್ಞ**ನೆಂದು ಯಾರಿಗೆ ಅನ್ನುತ್ತಾರೆ? ಸಮಾಧಿಸ್ಥನ ಲಕ್ಷಣವೇನು? ಸ್ಥಿತಪ್ರಜ್ಞನು ಏನು ಮಾಡುತ್ತಾನೆ, ಎಲ್ಲಿ ಕೂಡ್ರುತ್ತಾನೆ ಮತ್ತು ಹೇಗೆ ವರ್ತಿಸುತ್ತಾನೆ?" ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು ಹೀಗೆ ಉತ್ತರ ಕೊಟ್ಟನು:—"ಅರ್ಜುನಾ, ಯಾವಾಗ ಮನುಷ್ಯನು ಬಾಹ್ಯಾತ್ಕಾರಿಕವಾಗಿ ಮಾತ್ರವಲ್ಲ, ಮನಸ್ಸಿನಿಂದ ಸಹ ಯಾವತ್ತು ಇಚ್ಛೆಗಳನ್ನು ತ್ಯಾಗ ಮಾಡಿ ತನ್ನಲ್ಲಿಯೇ ತನ್ನಷ್ಟಕ್ಕೆ ಸಂತುಷ್ಟನಾಗುತ್ತಾನೋ ಆಗ ಅವನಿಗೆ **ಸ್ಥಿತಪ್ರಜ್ಞ**ನೆನ್ನುತ್ತಾರೆ. ಯಾವನ ಮನಸ್ಸು ದುಃಖದಿಂದ ಉದ್ವಿಗ್ನವಾಗುವದಿಲ್ಲವೋ, ಯಾವನಿಗೆ ಸುಖದಿಂದ ಭೋಗಾಪೇಕ್ಷೆಯು ಉತ್ಪನ್ನವಾಗುವದಿಲ್ಲವೋ, ಹಾಗೂ ಯಾವನ ಪ್ರೀತಿ, ಭಯ, ಸಿಟ್ಟು, ಈ ವಿಕಾರಗಳು ಹೋಗಿರುತ್ತವೋ ಅಂಥ ಮನುಷ್ಯನಿಗೆ **ಸ್ಥಿತಧೀ** ಎಂದೆನ್ನುತ್ತಾರೆ. ಯಾವನು ಯಾವದರ ಕಡೆಗೂ ಪ್ರೇಮವನ್ನಿಡದೆ ಶುಭವು ಅಥವಾ ಅಶುಭವು ಪ್ರಾಪ್ತವಾದಾಗ್ಯೂ ಆನಂದಪಡುವದಿಲ್ಲವೋ, ಅಥವಾ ದ್ವೇಷವನ್ನು ಮಾಡುವದಿಲ್ಲವೋ, ಅಂಥವನ ಪ್ರಜ್ಞೆಯು ಸ್ಥಿರವಾಗಿರುತ್ತದೆಂದು ತಿಳಿಯಬೇಕು. ಯಾವ ಪ್ರಕಾರ ಆವೆಯು (ಕೂರ್ಮವು) ತನ್ನ ಕಾಲು ಮತ್ತು ಕುತ್ತಿಗೆಯನ್ನು ತನ್ನೊಳಗೆ ಜಗ್ಗಿಕೊಳ್ಳುತ್ತದೋ ಅದರಂತೆ ತನ್ನ ಇಂದ್ರಿಯುಗಳನ್ನು ವಿಷಯ (ಸುಖೋಪಭೋಗ) ಗಳಿಂದ ಪರಾವೃತ್ತ ಮಾಡಿ ಅವುಗಳನ್ನು ತನ್ನಲ್ಲಿಯೇ ಎಳೆದುಕೊಳ್ಳುವವನ ಪ್ರಜ್ಞೆಯು ಸ್ಥಿರವಿರುವದು. ಇಂದ್ರಿಯುಗಳಿಗೆ ಉಪಭೋಗಗಳು ದೊರೆಯದೆ ಇದ್ದಲ್ಲಿ ಅವು ತಮ್ಮಿಂದ ತಾವೇ ಬಿಟ್ಟುಹೋಗುತ್ತವೆ. ಮನಸ್ಸಿನಲ್ಲಿ ಕೆಲವು ದಿವಸ ಇರತಕ್ಕಂಥ ವಿಷಯುಗಳ ಪ್ರೀತಿಯು ಸಹ ಪರಮಾತ್ಮನ ಜ್ಞಾನವಾದ ಬಳಿಕ ಹೊ

ರಟಿ ಹೋಗುವದು. ಈ ಪ್ರಕಾರ ಇಂದ್ರಿಯಗಳನ್ನು ಸಂಯಮನ ಮಾಡು ವದು ಬಹಳ ಕಠಿಣವಿರುವದು. ಬೇಕುಬೇಕಾದಂಥ ಬುದ್ಧಿಶಾಲಿಗಳು ತಮ್ಮ ಇಂದ್ರಿಯಗಳ ನಿಗ್ರಹ ಮಾಡುವದಕ್ಕೆ ಪ್ರಯತ್ನ ಮಾಡುವಾಗ ಅವರ ಮನಸ್ಸು ಒಂದೊಂದು ಸಾರೆ ಅರವುಗೆಟ್ಟ ಕುದುರೆಯಂತೆ ಅವರ ಮನಃಪೂರ್ವಕ ಪ್ರಯ ತ್ನವನ್ನು ಸಹ ಧಿಃಕರಿಸಿ, ಬೇಕಾದ ಕಡೆಗೆ ಚರಿಸುವದನ್ನು ನಾವು ನೋಡು ತ್ತೇವೆ. ಯಾವಾತನು ತನ್ನ ಅತ್ಯಂತ ಪ್ರಬಲವಾದ ಮನಸ್ಸಿನಿಂದ ತನ್ನ ಇಂದ್ರಿ ಯಗಳ ನಿರೋಧವನ್ನು ಅಂದರೆ ನಿಗ್ರಹವನ್ನು ಮಾಡುತ್ತಾನೋ, ಅಂಥವನು **ಸ್ಥಿತಪ್ರಜ್ಞನು.** ಅರ್ಜುನಾ, ಇಂದ್ರಿಯ ಸಂಯಮನ ಮಾಡುವ ಉತ್ತಮ ಉಪಾಯವು ಯಾವದೆಂದರೆ, ವಿಷಯಗಳ ಧ್ಯಾನವನ್ನು ಬಿಡುವದು. ವಿಷಯದ ಧ್ಯಾನ ಮಾಡಲಿಕ್ಕೆ ಹತ್ತಿದರೆ ಪ್ರೀತಿಯು ಉತ್ಪನ್ನವಾಗುವದು. ಪ್ರೀತಿಯಿಂದ ಕಾಮವು, ಕಾಮದಿಂದ ಕ್ರೋಧವು, ಕ್ರೋಧದಿಂದ ಮೋಹವು, ಮೋಹ ದಿಂದ ಸ್ಮೃತಿಭ್ರಂಶವು, ಸ್ಮೃತಿಭ್ರಂಶದಿಂದ ವಿವೇಕನಾಶವು, ಮತ್ತು ವಿವೇಕ ನಾಶದಿಂದ ಸರ್ವನಾಶವು ಉಂಟಾಗುವವು. ಆದುದರಿಂದ ಮುಂಚೆ ಮನಸ್ಸಿ ನಿಂದ ವಿಷಯಗಳ ಧ್ಯಾನವನ್ನು ಬಿಡತಕ್ಕದ್ದು. ಆಯಾಯ ಇಂದ್ರಿಯಗಳಿಗೆ ಆಯಾಯ ವಿಷಯಗಳ ಸಂಬಂಧವಿರುವದು. ಆದರೆ ಇಂಥ ಸಂಬಂಧವು ರಾಗ ದ್ವೇಷಗಳಿಂದ ವಿರಹಿತವಿದ್ದರೆ ಮನುಷ್ಯನ ಮನಸ್ಸು ಗೊಂದಲವಾಗುವದಿಲ್ಲ. ಅದು ಶುದ್ಧವೂ ಶಾಂತವೂ ಇದ್ದು ಯಾವಾಗಲು ಪ್ರಸನ್ನವಿರುವದು. ಇದ ರಿಂದ ಮನುಷ್ಯನ ಬುದ್ಧಿಗೆ ಸ್ಥಿರತ್ವವುಂಬಾಗುವದು. ನೀರಿನಲ್ಲಿ ಚಲಿಸುವ ನಾವೆಗೆ ಗಾಳಿಯು ಬಡಿದ ಕೂಡಲೆ ಅದು ಇತ್ತಿಂದ ಅತ್ತ, ಅತ್ತಿಂದ ಇತ್ತ ಆಲೆದಾಡುವಂತೆ ಇಂದ್ರಿಯ ವ್ಯಾಪಾರದಲ್ಲಿ ತೊಡಗಿದ ಮನುಷ್ಯನ ಬುದ್ಧಿಯು ಹರಿದಾಡುವದು. ಆದುದರಿಂದ ಯಾವನು ತನ್ನ ಇಂದ್ರಿಯಗಳನ್ನು ವಿಷಯ ಗಳಿಂದ ಪರಾವೃತ್ತ ಮಾಡಿರುವನೋ ಅವನ ಪ್ರಜ್ಞೆಯು ಸ್ಥಿರವೆಂದು ತಿಳಿಯ ಬೇಕು. ಇಂಥ ಇಂದ್ರಿಯ ಸಂಯಮನ ಮಾಡಿದ ಮನುಷ್ಯನಿಗೆ ಇತರ ಸಾ ಮಾನ್ಯ ಮನುಷ್ಯರ ರಾತ್ರಿಯು ಹಗಲಾಗಿ ತೋರುವದು. ಮತ್ತು ಅವರ ಹಗಲು ರಾತ್ರಿಯಾಗಿ ತೋರುವದು. ಸಾಮಾನ್ಯ ಮನುಷ್ಯರು ಯಾವ ವಿಷಯದ ಬಗ್ಗೆ ನಿದ್ರಿಸ್ಥರಿರುವರೋ ಆ ವಿಷಯದ ಬಗ್ಗೆ ಸ್ಥಿತಪ್ರಜ್ಞನು

ಜಾಗ್ರತನಿರುವನು. ಹಾಗೂ ಯಾವ ವಿಷಯದ ಬಗ್ಗೆ ಸಾಮಾನ್ಯ ಮನುಷ್ಯರು ಜಾಗ್ರತರಿದ್ದು ಕೋಲಾಹಲವನ್ನು ಮಾಡುವರೋ ಆ ವಿಷಯದಲ್ಲಿ ಸ್ಥಿತಪ್ರಜ್ಞನು ನಿದ್ರಿಸ್ಥನಿರುವನು. ಸಮುದ್ರಕ್ಕೆ ಸಾವಿರಾರು ನದಿಗಳು ಕೂಡಿದಾಗ್ಯೂ ಅದರ ನೀರು ಯಾವ ಪ್ರಕಾರ ಮಲೆಯುವದಿಲ್ಲವೋ ಅದರಂತೆ ಸ್ಥಿತಪ್ರಜ್ಞನ ಮನಸ್ಸೆಂಬ ಸುಮುದ್ರದಲ್ಲಿ ಸಾವಿರಾರು ಇಚ್ಛೆಗಳೆಂಬ ನದಿಗಳು ಲೋಪವಾಗಿ ಅವನು ಅಕ್ಷಯ್ಯ ಶಾಂತಿಯನ್ನು ಅನುಭೋಗಿಸುವನು. ವಿಷಯಗಳನ್ನು ಯಾವಾಗಲು ಅಭಿಲಾಷಿಸುವ ಮನುಷ್ಯನಿಗೆ ಲವಲೇಶವಾದರೂ ಶಾಂತಿಯು ದೊರಕಲಾರದು. ಯಾವನು ಎಲ್ಲ ಇಚ್ಛೆಗಳನ್ನು ತ್ಯಾಗಮಾಡಿ ನಿಸ್ಪೃಹ ರೀತಿಯಿಂದ ವ್ಯವಹಾರವನ್ನು ಮಾಡುವನೋ ಅಂಥ ನಿರಭಿಮಾನಿ ಮತ್ತು ನಿರಹಂಕಾರಿ ಮನುಷ್ಯನಿಗೆ ಶಾಂತಿಯು ದೊರಕುವದು. ಈ ಸ್ಥಿತಿಗೆ **ಬ್ರಹ್ಮೀಸ್ಥಿತಿ**ಯೆಂದೆನ್ನುವರು. ಈ ಸ್ಥಿತಿಯಲ್ಲಿ ಮನುಷ್ಯನಿಗೆ ಮೋಹವಿಲ್ಲ. ಈ ಸ್ಥಿತಿಯಲ್ಲಿದ್ದು ಮರಣಪಡುವವನಿಗೆ **ಬ್ರಹ್ಮಪದದ ಅಕ್ಷಯ್ಯ ಆನಂದವು** ಪ್ರಾಪ್ತವಾಗುವದು.

ಇಷ್ಟಾದ ಬಳಿಕ ಅರ್ಜುನನು ಶ್ರೀಕೃಷ್ಣನಿಗೆ—" ಎಲೈ ಜನಾರ್ದನನೇ, ನೀನು ಹೇಳುವ ಪ್ರಕಾರ ಸ್ಥಿತಿಪ್ರಜ್ಞನ ಸ್ಥಿರಬುದ್ಧಿಯು ಕರ್ಮದಕಿಂತಲು ಹೆಚ್ಚು ಶ್ರೇಯಸ್ಕರವಿರುವದಾದ ಬಳಿಕ ನೀನು ನನಗೆ ಕರ್ಮವನ್ನು-ಕಿಂಬಹುನಾ ಘೋರಕರ್ಮವನ್ನು- ಮಾಡಲಿಕ್ಕೆ ಏಕೆ ಉಪದೇಶಿಸುವೆ?" ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು—" ಅರ್ಜುನಾ! ಸ್ಥಿತಪ್ರಜ್ಞರಲ್ಲಿ **ಸಾಂಖ್ಯ ಮತ್ತು ಯೋಗ** ಈ ಎರಡು **'ನಿಷ್ಠಾ ಅಥವಾ ಬುದ್ಧಿ,'** ಗಳಿರುತ್ತವೆ. ಸಾಂಖ್ಯರು ಜ್ಞಾನನಿಷ್ಠರು. ಯೋಗಿಗಳು ಕರ್ಮನಿಷ್ಠರು. ಸಾಂಖ್ಯರು ಜ್ಞಾನದ ಕಡೆಗೆ ಹೋದಾಗ್ಯೂ ಅವರ ಕರ್ಮ ಮಾಡುವದು ತಪ್ಪುವದಿಲ್ಲ. ಅವರ ಸಾಧ್ಯವು ನೈಷ್ಕರ್ಮ್ಯವು ಅಂದರೆ ಮೋಕ್ಷವು ಹಾಗೂ ಅವರ ಸಾಧನವು ಸನ್ಯಾಸವು ಇದ್ದಾಗ್ಯೂ ಅವರು ಕರ್ಮದ ಆರಂಭವನ್ನು ಮಾಡಿದಿದ್ದರೆ ಅವರಿಗೆ ನೈಷ್ಕರ್ಮ್ಯದ ಅನುಭವವುಂಟಾಗುವದಿಲ್ಲ. ಆದುದರಿಂದ ಕೇವಲ ಕರ್ಮದ ಸನ್ಯಾಸವನ್ನು ಮಾಡಿದರೆ ಸಿದ್ಧಿಯು ಪ್ರಾಪ್ತಿಯಾಗುವದಿಲ್ಲ. ಸಂಸಾರ ತ್ಯಾಗಮಾಡಿ ಅರಣ್ಯಕ್ಕೆ ಹೋಗಿ ಕೂಡ್ರುವದರಿಂದ ಕರ್ಮವು ತಪ್ಪುವ

ದಿಲ್ಲ. ಹಾಗೂ ಅವನು ಪಂಚಮಹಾಭೂತಗಳ ಸೃಷ್ಟಿಯೊಳಗಿಂದ ಹೊರಗೆ ಹೋಗುವದಿಲ್ಲ. ನಿನಗೆ ಅರಣ್ಯದಲ್ಲಿ ಹಸಿವೆಯಾಯಿತೆಂದರೆ ನೀನು ಬೇಟೆ ಯನ್ನಾಡುವದಕ್ಕೆ ಮೃಗಗಳ ಬೆನ್ನು ಹತ್ತಬೇಕಾಗುವದು. ನೀನು ನಿರಾಹಾರ ಮಾಡಬೇಕೆಂದು ನಿಶ್ಚಯ ಮಾಡಿದರೂ ನಿನ್ನ ಶ್ವಾಸೋಚ್ಛ್ವಾಸವು ನಡೆದೇ ಇರುವದು ನೀನು ನಿನ್ನ ಶ್ವಾಸೋಚ್ಛ್ವಾಸವನ್ನು ಪ್ರಾಣಾಯಾಮದಿಂದ ನಿಲ್ಲಿ ಸಿದಾಗ್ಯೂ ಪ್ರಾಣಾಯಾಮವಾದರೂ ಕರ್ಮವಿರುತ್ತದೆ. ಸಾರಾಂಶ-ಈ ಸೃಷ್ಟಿ ಯಲ್ಲಿ ಯಾವ ಜೀವಂತ ಮನುಷ್ಯನೂ ಒಂದು ಕ್ಷಣ ಸಹ ಕರ್ಮ ಮಾಡದೆ ಇರುವದು ಅಶಕ್ಯವು. ಕರ್ಮ ಮಾಡಬಾರದೆಂದು ನಿಶ್ಚಯವನ್ನು ಮಾಡಿದಾ ಗ್ಯೂ ಪ್ರಕೃತಿ ಗುಣವು ಮನುಷ್ಯನಿಗೆ ಮುಸಿಕೆ ಕಟ್ಟಿ, ಕರ್ಮವನ್ನು ಮಾಡ ಲಿಕ್ಕೆ ಹಚ್ಚುತ್ತದೆ. ಕರ್ಮೇಂದ್ರಿಯದ ಅತ್ಯಂತ ನಿಗ್ರಹವನ್ನು ಮಾಡಿದಾಗ್ಯೂ ಮನಸ್ಸು ಸುಮ್ಮನೆ ಕೂಡ್ರುವದು ಹೇಗೆ? ಅದು ತನ್ನ ವಿಷಯದ ಧ್ಯಾನದ ಕರ್ಮವನ್ನು ಎಡೆಬಿಡದೆ ನಡೆಸುವದು. ಬಾಹ್ಯಾತ್ಕಾರಿಕವಾಗಿ ಇಂದ್ರಿಯಗಳ ನಿಗ್ರಹವನ್ನು ಮಾಡಿ ಮನಸ್ಸಿನಲ್ಲಿ ವಿಷಯಗಳ ಧ್ಯಾನವನ್ನು ಮಾಡುವವನು ನಿಂದ್ಯನು. ಆದರೆ ಮನಸ್ಸಿನಿಂದ ವಿಷಯಗಳನ್ನು ತ್ಯಾಗ ಮಾಡುವದರಿಂದ ಇಂದ್ರಿ ಯಗಳ ನಿಗ್ರಹ ಮಾಡಿ ಆಸಕ್ತಿ ರಹಿತನಾದವನು ನಿಜವಾದ **ಯೋಗಿಯು.** ಅರ್ಜುನಾ, ನೀನು ನಿಶ್ಚಯದಿಂದ ಕರ್ಮವನ್ನು ಮಾಡು. ಕರ್ಮವನ್ನು ಮಾ ಡದೆ ಇರುವದಕ್ಕಿಂತ ಕರ್ಮವನ್ನು ಮಾಡುವದು ಒಳ್ಳೇದು. ನಿನ್ನ ಚರಿತಾ ರ್ಥವಾದರೂ ನೀನು ಅಕರ್ಮವನ್ನು ಸ್ವೀಕರಿಸುವದರಿಂದ ನಡೆಯಲಾರದು. ಈ ಜಗತ್ತು ಕರ್ಮದಿಂದಲೇ ಬಂಧನವಾಗಿರುತ್ತದೆ. ಆದರೆ ಕರ್ಮ ಮಾಡು ವದನ್ನು ಮುಕ್ತಸಂಗರಾಗಿ ಮಾಡತಕ್ಕದ್ದೆಂದು ನಾನು ಹೇಳುತ್ತೇನೆ. ಆಸಕ್ತಿ ವಿರಹಿತ ಕರ್ಮ ಮಾಡುವದರಿಂದ ಮನುಷ್ಯನಿಗೆ ಪರಮ ಪುರುಷಾರ್ಥವು ಪ್ರಾಪ್ತವಾಗುವದು. ಜನಕಾದಿ ವಿರಕ್ತ ಮಹಾತ್ಮರು ಹೀಗೆ ಕರ್ಮವನ್ನು ಮಾಡಿಯೇ ಸಿದ್ಧಿಯನ್ನು ಪಡೆದರು. ಸಾಮಾನ್ಯ ಜನರನ್ನು ಸನ್ಮಾರ್ಗಕ್ಕೆ ಹಚ್ಚುವದಕ್ಕಾಗಿ ವಿದ್ವಾನ್ ಮನುಷ್ಯನು ಕರ್ಮವನ್ನು ಮಾಡತಕ್ಕದ್ದು. ಶ್ರೇಷ್ಠ ಜನರು ಮಾಡುವದನ್ನು ಸಾಮಾನ್ಯ ಜನರು ಮಾಡಲಪೇಕ್ಷಿಸುವರು. ಆದುದರಿಂದ ಅರ್ಜುನಾ, ನೀನು ಮಮತ್ವವನ್ನೂ ಅಹಂಕಾರವನ್ನೂ ಬಿಟ್ಟು,

ಸುಖದುಃಖಗಳ ಕಡೆಗೆ ಲಕ್ಷ್ಯ ಕೊಡದೆ, ಪರಮೇಶ್ವರನಲ್ಲಿ ಚಿತ್ತವನ್ನಿಟ್ಟು, ಎಲ್ಲ ಕರ್ಮವನ್ನು ಆತನಿಗೆ ನಿವೇದನ ಮಾಡಿ, ಪಾಪಪುಣ್ಯಗಳ ಚಿಂತೆಯನ್ನು ಎಳ್ಳಷ್ಟಾದರೂ ಮಾಡದೆ ಯುದ್ಧವನ್ನು ಮಾಡು. **ಸ್ವಧರ್ಮದಲ್ಲಿ ಮರಣವು ಬಂದರೂ ಅಡ್ಡಿಯಿಲ್ಲ; ಆದರೆ ಪರಧರ್ಮವು ಭಯಂಕರವು.** ಯಾಕಂದರೆ ಅದರಿಂದ ಪಾಪಾಚರಣವಾಗುವ ಸಂಭವವಿರುವದು. ನೀನು ಕ್ಷಾತ್ರವೀರನು. ಯುದ್ಧ ಮಾಡುವದು ಕ್ಷಾತ್ರಧರ್ಮವಿರುತ್ತದೆ. ಆದುದರಿಂದ ನೀನು ನಿನ್ನ ಧರ್ಮಬದ್ಧಕರ್ಮವನ್ನು ಮಾಡಲಿಕ್ಕೇ ಬೇಕು."

ಈ ಪ್ರಕಾರ ಶ್ರೀಕೃಷ್ಣನು ಹೇಳಿದ ತರುವಾಯ ಅರ್ಜುನನು ತನ್ನ ಮನಸ್ಸಿನಲ್ಲಿ ಹುಟ್ಟಿದ ಇನ್ನೂ ಕೆಲವು ಶಂಕೆಗಳನ್ನು ಕೇಳಿಕೊಂಡನು. ಆ ಅವನ ಶಂಕೆಗಳನ್ನೆಲ್ಲ ಶ್ರೀಕೃಷ್ಣನು ಯಥಾಯೋಗ್ಯ ರೀತಿಯಿಂದ ಸಮಾಧಾನ ಮಾಡಿ ಹೀಗೆ ಹೇಳಿದನು:—"ಅರ್ಜುನಾ, ನಾನು ನಿನಗೆ **ಕರ್ಮಯೋಗ** ವನ್ನು ಸವಿಸ್ತಾರವಾಗಿ ಹೇಳಿದೆನು. ನೀನು ಮಮತ್ವವನ್ನು ತ್ಯಾಗ ಮಾಡಿ ಜಯಾಪಜಯಗಳ ವಿಚಾರ ಮಾಡದೆ ಸ್ವಕರ್ತವ್ಯವನ್ನು ಮಾಡು. ಫಲದ ಸಂಬಂಧವಾಗಿ ಲಕ್ಷ್ಯವನ್ನು ಕೊಡಬೇಡ. ಹಾಗೂ ನೀನು ಪರಮೇಶ್ವರನ ಮೇಲೆ ವಿಶ್ವಾಸವಿಟ್ಟು ನಿನ್ನ ಎಲ್ಲ ಕರ್ಮಗಳನ್ನು ಪರಮೇಶ್ವರನಿಗೆ ಅರ್ಪಣ ಮಾಡು. ನನ್ನ ಮತ್ತು ನಿನ್ನ ಸಾವಿರಾರು ಜನ್ಮಗಳು ಆದವು. ಇದೆಲ್ಲ ನನಗೆ ಗೊತ್ತುಂಟು. ನಿನಗೆ ಗೊತ್ತಿಲ್ಲ. ನಾನು ಅಜನ್ಮನಿದ್ದಾಗ್ಯೂ ನಾನು ಸರ್ವ ಭೂತಗಳ ಈಶ್ವರನಿರುತ್ತೇನೆ. ನಾನು ಅವ್ಯಯನಿದ್ದಾಗ್ಯೂ ನನ್ನ ಪ್ರಕೃತಿಯ ಆಶ್ರಯವನ್ನು ತೆಗೆದುಕೊಂಡು ನನ್ನ ಮಾಯೆಯಿಂದ ಜನ್ಮವನ್ನು ತೆಗೆದುಕೊಳ್ಳುತ್ತೇನೆ. ಯಾವ ಕಾಲಕ್ಕೆ ಧರ್ಮದ ಗ್ಲಾನಿಯಾಗಿ ಅಧರ್ಮವು ತಲೆ ಎತ್ತುತ್ತದೋ ಆ ಕಾಲಕ್ಕೆ ನಾನು ನನ್ನನ್ನು ಉತ್ಪನ್ನ ಮಾಡಿಕೊಳ್ಳುತ್ತೇನೆ. ಸಜ್ಜನರ ರಕ್ಷಣದ ಸಲುವಾಗಿ, ದುರ್ಜನರ ವಿನಾಶದ ಸಲುವಾಗಿ ಮತ್ತು ಧರ್ಮದ ಸಂಸ್ಥಾಪನೆಯ ಸಲುವಾಗಿ ಇಂಥ 'ಅವತಾರ' ವನ್ನು ಪ್ರತಿಯೊಂದು ಯುಗದಲ್ಲಿ ತೆಗೆದುಕೊಳ್ಳುತ್ತೇನೆ. ನನ್ನ ದಿವ್ಯ ಜನ್ಮವೂ ಕರ್ಮವೂ ಯಾರಿಗೆ ಚೆನ್ನಾಗಿ ತಿಳಿದಿರುವದೋ ಅವರಿಗೆ ಪುನರ್ಜನ್ಮವಿಲ್ಲ. ಭಯ, ಪ್ರೀತಿ ಮತ್ತು ಕ್ರೋಧ ಈ ವಿಕಾರಗಳನ್ನು ಬಿಟ್ಟುಕೊಟ್ಟು, ನನ್ನ ಆಶ್ರಯ

ಮಾಡಿ, ನನ್ನಲ್ಲಿ ತನ್ಮಯವಾಗಿ ನನ್ನ ನಿಜವಾದ ಜ್ಞಾನದಿಂದ ಪವಿತ್ರವಾದ ಅನೇಕ ಜನರು ನನ್ನಲ್ಲಿ ತಾದಾತ್ಮ್ಯವನ್ನು ಹೊಂದಿರುತ್ತಾರೆ. ಉಳಿದವರು **ಯಾವ ರೀತಿಯಿಂದ ನನ್ನ ಭಜನಪೂಜನವನ್ನು ಮಾಡುತ್ತಾರೋ ಅವರಿಗೆ ಆ ರೀತಿಯಿಂದಲೇ ನಾನು ಫಲವನ್ನು ಕೊಡುತ್ತೇನೆ.** ಹಾಗೂ ಜನರಾದರೂ ಬೇರೆ ಬೇರೆ ಪ್ರಕಾರಗಳಿಂದ ನನ್ನ ಮಾರ್ಗವನ್ನು ಅನುಸರಿಸುತ್ತಾರೆ" ಎಂದು ಹೇಳಿದನು.

ಆ ಮೇಲೆ ಶ್ರೀಕೃಷ್ಣನು ಅರ್ಜುನನಿಗೆ **ಭಕ್ತಿಯೋಗ**ವನ್ನು ಉಪದೇಶಿಸಿದನು. ಅದರಲ್ಲಿ ಅವನು ಅರ್ಜುನನಿಗೆ ಹೀಗೆ ಹೇಳಿದನು:—"ಅರ್ಜುನಾ, ನನ್ನ ಭಕ್ತಿಯು ಬಹಳ ಕಠಿಣವಿರುವದಿಲ್ಲ. **ಯಾವನಾದರೂ ನನಗೆ ಭಕ್ತಿಯಿಂದ ಪತ್ರ, ಪುಷ್ಪ, ಫಲ ಇಲ್ಲವೆ ಜಲವನ್ನು ಅರ್ಪಣ ಮಾಡಿದರೆ ನಾನು ಅದನ್ನು ಸಹ ಸ್ವೀಕಾರ ಮಾಡುತ್ತೇನೆ.** ನೀನು ಕರ್ಮ ಮಾಡುವದನ್ನೂ, ತಿನ್ನುವದನ್ನೂ, ಹವನ ಮಾಡುವದನ್ನೂ, ದಾನ ಮಾಡುವದನ್ನೂ. ತಪಸ್ಸು ಮಾಡುವದನ್ನೂ ನನಗೆ ಅರ್ಪಣ ಮಾಡು. ಅಂದರೆ ನೀನು ಕರ್ಮದ ಶುಭಾಶುಭ ಫಲಗಳಿಂದ ಬಿಡುಗಡೆ ಹೊಂದುವೆ. ಹಾಗೂ ನಿನ್ನ ಚಿತ್ತವು ಫಲಸನ್ಯಾಸ ಯೋಗದಲ್ಲಿ ಯುಕ್ತವಾಗಿ ನೀನು ನನ್ನ ಕಡೆಗೆ ಬಂದು ಮುಟ್ಟುವೆ. ನಾನು ಸಮದೃಷ್ಟಿಯವನಿದ್ದು ನನಗೆ ದ್ವೇಷಿಗಳು ಅಥವಾ ಪ್ರಿಯರು ಯಾರೂ ಇರುವದಿಲ್ಲ. ಆದಾಗ್ಯೂ ನನ್ನನ್ನು ಭಕ್ತಿಯಿಂದ ಭಜಿಸುವವರು ನನ್ನಲ್ಲಿ ಇರುವರು. ಹಾಗೂ ನಾನು ಅವರಲ್ಲಿ ಇರುವೆನು. ಅತ್ಯಂತ ದುರಾಚಾರಿ ಮನುಷ್ಯನು ಸಹ ನನ್ನನ್ನು ಅನನ್ಯ ಭಾವದಿಂದ ಭಜಿಸಿದರೆ ಅವನನ್ನು ಸಹ ಸಾಧುವೆಂತಲೇ ಎಣಿಸತಕ್ಕದ್ದು. ಯಾಕಂದರೆ ಯಾವನು ಪುಣ್ಯಕರ್ಮ ಮಾಡಲಿಕ್ಕೆ ಹತ್ತುತ್ತಾನೋ ಅವನು ತತ್ಕಾಲಕ್ಕೆ ಧರ್ಮಾತ್ಮನಾಗಿ ನಿತ್ಯಶಾಂತಿಗೆ ಮುಟ್ಟುತ್ತಾನೆ. ಸನ್ಯಾಸ ಅಥವಾ ಯೋಗ ಅಥವಾ ಯಜ್ಞ ಈ ಮಾರ್ಗವನ್ನು ಅನುಸರಿಸಲಿಕ್ಕೆ ಸಾಧ್ಯವಿಲ್ಲದಿದ್ದ ಸ್ತ್ರೀಯು, ಶೂದ್ರನು ಮತ್ತು ಚಾಂಡಾಲನು ಸಹ ನನ್ನ ಆಶ್ರಯವನ್ನು ಮಾಡಿದಲ್ಲಿ ಉತ್ತಮ ಗತಿಗೆ ಮುಟ್ಟುತ್ತಾರೆ. ಆದುದರಿಂದ ಅರ್ಜುನಾ, ನನ್ನಲ್ಲಿ ನಿನ್ನ ಮನಸ್ಸನ್ನು ಲೀನ ಮಾಡು. ಮತ್ತು ನನ್ನಲ್ಲಿ ಭಕ್ತಿಯನ್ನಿಡು. ನನಗೆ ಯಜ್ಞವನ್ನು ಅರ್ಪಣ ಮಾಡು. ಇದನ್ನೆಲ್ಲ

ನೀನು ಮಾಡದಿದ್ದರೂ ನನಗೆ ನಮಸ್ಕಾರವನ್ನಾದರೂ ಮಾಡು. ಅಂದರೆ ನೀನು ಭಕ್ತಿಯೋಗದಿಂದ ನನ್ನ ಕಡೆಗೆ ಬಂದು ಮುಟ್ಟುವೆ."

ಈ ಮೇರೆಗೆ ಶ್ರೀಕೃಷ್ಣನು ಅರ್ಜುನನಿಗೆ **ಭಕ್ತಿಯೋಗ**ವನ್ನು ಉಪದೇಶಿಸಿದ ಬಳಿಕ ಅವನು ಶ್ರೀಕೃಷ್ಣನಿಗೆ ಅವನ ಪರಮೇಶ್ವರಿ ಸ್ವರೂಪವನ್ನು ತೋರಿಸಲಿಕ್ಕೆ ಪ್ರಾರ್ಥನೆಯನ್ನು ಮಾಡಿದನು. ಆಗ ಶ್ರೀಕೃಷ್ಣನು ಅರ್ಜುನನಿಗೆ ಮೊದಲಿಗೆ ದಿವ್ಯ ದೃಷ್ಟಿಯನ್ನು ಕೊಟ್ಟು ತನ್ನ **ವಿಶ್ವರೂಪ**ವನ್ನು ತೋರಿಸಿದನು. ಆಗ ಒಮ್ಮಿಲೆ ಅಲ್ಲಿ ಕೋಟಿಸೂರ್ಯರ ತೇಜಸ್ಸು ಉತ್ಪನ್ನವಾಗಿ ಸಾವಿರಾರು ಕಣ್ಣು, ಬಾಯಿ, ಕೈಕಾಲುಗಳು ಇರುವಂಥ ಸಾವಿರಾರು ಸ್ವರೂಪವುಳ್ಳ ಸಕಲ ಜಗತ್ತು ಒಂದೇ ಸ್ಥಳದಲ್ಲಿ ಕಾಣಿಸಿತು. ಆ ರೂಪವು ಪೃಥ್ವಿಯಿಂದ ಆಕಾಶದ ಪರಿಯಂತರ ವ್ಯಾಪಿಸಿ, ಅದರಲ್ಲಿ ಕಮಲದ ಮೇಲೆ ಕುಳಿತಿದ್ದ ಬ್ರಹ್ಮದೇವನನ್ನೊಡಗೊಂಡು ಯಾವತ್ತು ದೇವತೆಗಳು, ಯಾವತ್ತು ಅಸುರರು, ಮತ್ತು ಯಾವತ್ತು ನಾಗರು ಕಾಣಿಸುತ್ತಿದ್ದು ಇವರ ಮುಂದೆ ಮಹರ್ಷಿಗಳು, ಸಿದ್ಧರು, ಗಂಧರ್ವರು, ಯಕ್ಷರು ಮೊದಲಾದವರು ಕೈಜೋಡಿಸಿ ನಿಂತು ಪ್ರಾರ್ಥನೆಯನ್ನು ಮಾಡುತ್ತಿದ್ದರು. ಈ ಅದ್ಭುತ ರೂಪದ ಸಾವಿರಾರು ಬಾಯಿಗಳಲ್ಲಿ ಸಮರಾಂಗಣದೊಳಗೆ ನಿಂತುಕೊಂಡಿದ್ದ ಪಾಂಡವ ಕೌರವ ಈ ಎರಡೂ ಪಕ್ಷದ ಲಕ್ಷಾವಧಿ ವೀರರು, ಧೃತರಾಷ್ಟ್ರನ ಮಕ್ಕಳು, ಭೀಷ್ಮ, ದ್ರೋಣ, ಕರ್ಣ, ದ್ರುಪದ, ವಿರಾಟ ಮೊದಲಾದ ರಥಿಕರು ಕಾಣಿಸಿದರು. ಇವರಲ್ಲಿ ಕೆಲವರ ತಲೆಗಳು ಒಡೆದಿದ್ದವು, ಮತ್ತೆ ಕೆಲವರ ಕೈಗಳು ಕಡಿದಿದ್ದವು. ಇಂಥವರೆಲ್ಲರು ಆ ಅದ್ಭುತ ಬಾಯಿಗಳಲ್ಲಿ ಹೋಗುತ್ತಿದ್ದರು. ಹಾಗೂ ಅದೃಶ್ಯವಾಗುತ್ತಿದ್ದರು. ಆಗ ಅರ್ಜುನನು ಭಯಕಂಪಿತನಾಗಿ ಶ್ರೀಕೃಷ್ಣನಿಗೆ—"ದೇವಾಧಿದೇವಾ, ನೀವು ಯಾರು ನನಗೆ ದಯವಿಟ್ಟು ಹೇಳಬೇಕು. ಈ ಉಗ್ರರೂಪವನ್ನು ನೋಡಿ ನನಗೆ ದಿಗ್ಭ್ರಮೆಯಾಗಿದ್ದು ನನಗೆ ಬಹಳ ಹೆದರಿಕೆಯು ಹುಟ್ಟಿರುತ್ತದೆ. ನಾನು ನಿಮಗೆ ಮೇಲಿಂದ ಮೇಲೆ ನಮಸ್ಕಾರಗಳನ್ನು ಮಾಡುತ್ತೇನೆ" ಎಂದು ಪ್ರಾರ್ಥಿಸಿದನು. ಅದಕ್ಕೆ ಶ್ರೀಕೃಷ್ಣನು—"ನಾನು ಯಾವತ್ತು ಜನರನ್ನು ಕ್ಷಯ ಮಾಡುವ ಕಾಲನು ಇರುತ್ತೇನೆ. ನಾನು ಈಗ ವೃದ್ಧನಾಗಿದ್ದು ಜನರ ನಾಶವನ್ನು ಮಾಡಲಿಕ್ಕೆ ತೊಡಗಿರುತ್ತೇನೆ. ಯು

ದ್ಧದಲ್ಲಿ ನಿಂತುಕೊಂಡಿರುವ ಯಾವತ್ತು ವೀರರನ್ನು ನಾನು ಕೊಂದಿರು ತ್ತೇನೆ. ಭೀಷ್ಮ, ದ್ರೋಣ, ಕರ್ಣ ಮೊದಲಾದ ಯಾವತ್ತರು ನನ್ನಿಂದ ಹತ ರಾಗಿರುತ್ತಾರೆ. ಅರ್ಜುನಾ, ಏಳು. ನೀನು ನಿಮಿತ್ಯಕ್ಕೆ ಮಾತ್ರ ನಿಂತು ಯುದ್ಧ ದಲ್ಲಿ ಜಯವನ್ನು ಸಂಪಾದಿಸು" ಎಂದು ಹೇಳಿದನು. ಇದನ್ನು ಕೇಳಿ ಅರ್ಜು ನನು ಥರಥರ ನಡುಗುತ್ತ ಕೈಜೋಡಿಸಿ, ಪುನಃ ಪುನಃ ನಮಸ್ಕಾರ ಮಾಡಿ– "ಹೇ ಹೃಷೀಕೇಶಾ, ಎಲ್ಲ ಬ್ರಹ್ಮಾಂಡದಲ್ಲಿ ನಿನ್ನ ಕೀರ್ತಿಯು ಹಬ್ಬಿ ಎಲ್ಲ ಬ್ರಹ್ಮಾಂಡವು ನಿನ್ನಲ್ಲಿ ಅನುರಕ್ತವಾಗಿರುವಾಗ ನಿನಗೆ ಯಾವದು ಅಸಾಧ್ಯವಿ ರುತ್ತದೆ? ಹೇ ಪ್ರಭೋ! ಹೇ ಅನಂತಾ! ಹೇ ವಿಶ್ವಧರಾ! ಹೇ ಪುರಾಣಪುರು ಷಾ! ಹೇ ಜಗನ್ನಿವಾಸಾ! ನಿನಗೆ ನಾನು ಸಹಸ್ರ ನಮಸ್ಕಾರಗಳನ್ನು ಮಾಡು ತ್ತೇನೆ. ನಿನಗೆ ಸರಿಯಾದವರು ಯಾರೂ ಇಲ್ಲ. ನಿನ್ನ ಅದ್ಭುತ ರೂಪವನ್ನು ನೋಡಿ ನನ್ನ ಮೈಮೇಲೆ ರೋಮಾಂಚನಗಳು ಎದ್ದಿರುವವು. ಭಯದಿಂದ ನನ್ನ ಮನಸ್ಸು ವ್ಯಥಿತವಾಗಿರುವದು. ನೀನು ದಯಮಾಡಿ ನಿನ್ನ ಮುಂಚಿನ ಸೌಮ್ಯ ರೂಪವನ್ನು ತೋರಿಸು" ಎಂದು ಶ್ರೀಕೃಷ್ಣನಿಗೆ ಪ್ರಾರ್ಥಿಸಿದನು. ಆಗ ಅವನು ತನ್ನ ಮುಂಚಿನ ರೂಪವನ್ನು ಪ್ರಕಟ ಮಾಡಿ–"ಅರ್ಜುನಾ, ನೀನು ಇವತ್ತಿನ ದಿವಸ ನೋಡಿದ ರೂಪವನ್ನು ನೋಡಲಿಕ್ಕೆ ದೇವತೆಗಳು ಸಹ ಅಪೇಕ್ಷಿಸು ತ್ತಾರೆ. ಬರೀ ವೇದಾಧ್ಯಯನದಿಂದ, ತಪಸ್ಸಿನಿಂದ, ದಾನದಿಂದ ಅಥವಾ ಯ ಜ್ಞದಿಂದ ಈ ನನ್ನ ರೂಪವನ್ನು ನೋಡಲಿಕ್ಕೆ ಸಿಗಲಾರದು. ಕೇವಲ ಪರಮ ಭಕ್ತಿಯಿಂದ ಈ ನನ್ನ ರೂಪವು ನೋಡಲಿಕ್ಕೂ, ತಿಳಿದುಕೊಳ್ಳಲಿಕ್ಕೂ, ಪ್ರವೇಶ ಮಾಡಲಿಕ್ಕೂ, ಸಿಗುವದು. ಯಾವನು ತನ್ನ ಎಲ್ಲ ಕರ್ಮಗಳನ್ನು ನನಗೆ ಅರ್ಪಣ ಮಾಡಿ ನನ್ನಲ್ಲಿ ಲೀನನಾಗಿ ನನ್ನ ಮೇಲೆ ಭಕ್ತಿಯನ್ನು ಇಟ್ಟು ಸರ್ವ ಸಂಗ ಪರಿತ್ಯಾಗ ಮಾಡಿ ಸರ್ವ ಭೂತಗಳಲ್ಲಿ ವೈರತ್ವವನ್ನು ಬಿಡುತ್ತಾನೋ ಅವನು ನನ್ನ ರೂಪದಲ್ಲಿ ಮಿಶ್ರನಾಗುತ್ತಾನೆ."

ಈ ಪ್ರಕಾರ ಶ್ರೀಕೃಷ್ಣನು ಉಪದೇಶ ಮಾಡಿದ್ದನ್ನು ಕೇಳಿ ಮತ್ತು ಅವನು ವಿಶ್ವರೂಪವನ್ನು ತೋರಿಸಿದ್ದನ್ನು ನೋಡಿ ಅರ್ಜುನನ ಮನಸ್ಸಿನ ಮೇಲೆ ಭಕ್ತಿಮಾರ್ಗದ ಬಗ್ಗೆ ಉತ್ತಮ ಪರಿಣಾಮವಾಯಿತು. ಆದರೂ ಅವ ನು ಶ್ರೀಕೃಷ್ಣನಿಗೆ–"ಭಕ್ತಿಮಾರ್ಗವು ಹೆಚ್ಚು ಶ್ರೇಷ್ಠವಾದ್ದೋ ವೇದ

ದಲ್ಲಿ ಹೇಳಿದ ಅವ್ಯಕ್ತೋಪಾಸನೆಯು ಹೆಚ್ಚು ಶ್ರೇಷ್ಠವಾದ್ದೋ?" ಎಂದು ತನ್ನ ಶಂಕೆಯನ್ನು ಪುನಃ ಕೇಳಿದನು. ಅದಕ್ಕೆ ಶ್ರೀಕೃಷ್ಣನು ಅರ್ಜುನನಿಗೆ:- "ನನ್ನಲ್ಲಿ ಮನಸ್ಸು ಇಟ್ಟು ಪರಮಶ್ರದ್ಧೆಯಿಂದ ನನ್ನ ಉಪಾಸನೆ ಮಾಡುವವರೂ ಅವ್ಯಕ್ತ ಉಪಾಸನೆಯನ್ನು ಮಾಡಿ ತಮ್ಮ ಇಂದ್ರಿಯ ಸಮೂಹದ ನಿಯಮನ ಮಾಡಿ ಯಾವತ್ತು ಕಡೆಗೆ ಸಮಬುದ್ಧಿಯನ್ನು ಇಟ್ಟು ಸಕಲ ಪ್ರಾಣಿಮಾತ್ರರ ಹಿತವನ್ನು ಮಾಡುವಲ್ಲಿ ತತ್ಪರರಿರುವರೂ ನನಗೇ ಬಂದು ಕೂಡುತ್ತಾರೆ. ಆದರೆ ಅವ್ಯಕ್ತ ಉಪಾಸನೆಯನ್ನು ಮಾಡುವದರಿಂದ ಅಧಿಕ ಕ್ಲೇಶವಾಗುವದು. ಶರೀರಧಾರಿ ಮನುಷ್ಯನಿಗೆ ಅವ್ಯಕ್ತ ಧ್ಯಾನವು ಬಹಳ ದುಃಖದಿಂದ ಆಗುವದು. ಆದುದರಿಂದ ನೀನು ನಿನ್ನ ಎಲ್ಲ ಕರ್ಮಗಳನ್ನು ನನಗೆ ಅರ್ಪಿಸಿ ಅನನ್ಯ ಭಾವದಿಂದ ನನ್ನ ಮೇಲೆ ಭಕ್ತಿಯನ್ನಿಟ್ಟು ನನ್ನಲ್ಲಿ ನಿನ್ನ ಮನಸ್ಸನ್ನು ಮತ್ತು ಬುದ್ಧಿಯನ್ನು ಸ್ಥಿರವಾಗಿಡು. ಅಂದರೆ ನಿನ್ನ ಇಹಲೋಕದ ಯಾತ್ರೆಯು ಮುಗಿದ ನಂತರ ನೀನು ನಿಸ್ಸಂಶಯದಿಂದ ನನ್ನ ಹತ್ತರ ಬಂದು ಇರುವೆ. ಈ ಪ್ರಕಾರ ನಿನಗೆ ನಿನ್ನ ಮನಸ್ಸನ್ನು ಸ್ಥಿರವಾಗಿಡುವದು ಆಗದಿದ್ದರೆ ಅದರ ಅಭ್ಯಾಸವನ್ನು ಮಾಡು. ಅದೂ ಆಗದಿದ್ದರೆ ನಿನ್ನ ಎಲ್ಲ ಕರ್ಮಗಳನ್ನು ನನಗೆ ಅರ್ಪಣ ಮಾಡು. ಅದೂ ನಿನ್ನಿಂದ ಆಗದಿದ್ದರೆ ಕೇವಲ ಕರ್ಮಫಲವನ್ನು ತ್ಯಾಗ ಮಾಡು. ಅಂದರೆ ನೀನು ಕೊನೆಗೆ ನನ್ನ ಕಡೆಗೆ ಬಂದು ಮುಟ್ಟುವೆ. ಅರ್ಜುನಾ, ಬೇರೆ ಬೇರೆ ಮಾರ್ಗಗಳಿಂದ ಪರಮೇಶ್ವರನ ಭಕ್ತಿಯನ್ನು ಮಾಡುವವರು ನನಗೆ ಪ್ರಿಯರೇ ಇರುತ್ತಾರೆ. ಸಕಲ ಪ್ರಾಣಿಮಾತ್ರರಲ್ಲಿ ದ್ವೇಷವನ್ನು ಬಿಟ್ಟು ಕಿಂಬಹುನಾ ಮಿತ್ರತ್ವವನ್ನು ಸಂಪಾದಿಸಿ ಅವರ ಮೇಲೆ ಕರುಣವನ್ನು ತೋರಿಸುವ ನಿರ್ಮಲನು, ನಿರಹಂಕಾರಿಯು, ಸುಖದುಃಖಗಳನ್ನು ಸಮವಾಗಿ ತಿಳಿಯುವವನು, ಕ್ಷಮಾ ಗುಣದವನು, ನಿತ್ಯ ಸಂತುಷ್ಟನು ಆದ **ಯೋಗಿಯು** ನನ್ನಲ್ಲಿಯೇ ಬುದ್ಧಿಯನ್ನು ಅರ್ಪಣ ಮಾಡಿದ ನನ್ನ ಭಕ್ತನು ಇದ್ದು ಅವನು ನನಗೆ ಪ್ರಿಯನು ಇರುತ್ತಾನೆ. ಜನರಿಗೆ ಉದ್ವೇಗವನ್ನು ಮಾಡದವನು, ಜನರಿಂದ ಉದ್ವೇಗವನ್ನು ಹೊಂದದವನು ಮತ್ತು ಸಂತೋಷ ಅಸಂತೋಷಗಳಿಂದ ವಿಮುಕ್ತನು ಆದ **ಮನುಷ್ಯನು** ನನಗೆ ಪ್ರಿಯನಿರುತ್ತಾನೆ. ಯಾವನು ಯಾವದೂ ಕರ್ಮವನ್ನು ಆರಂಭ ಮಾ

ಡಿಲ್ಲವೋ ಅಂಥ ಶುಚಿವಂತನೂ, ಉದಾಸೀನನೂ, ದುಃಖಿತನೂ ಆದ **ಭಕ್ತನು** ನನಗೆ ಪ್ರಿಯನಿರುತ್ತಾನೆ. ಶತ್ರುಮಿತ್ರರನ್ನೂ ಮಾನಾಪಮಾನ-ಶೀತೋಷ್ಣ-ಸುಖದುಃಖ-ನಿಂದಾಸ್ತುತಿ ಇವುಗಳನ್ನೂ ಸಮವಾಗಿ ನೋಡುವವನು, ಮೌನ ಧಾರಣ ಮಾಡುವವನು, ದೊರಕಿದ್ದರಲ್ಲಿ ಸಂತುಷ್ಟನಾಗುವವನು, ಮತ್ತು ಗೃಹತ್ಯಾಗ ಮಾಡಿದವನು ಆದ ಸ್ಥಿರಮತಿ **ಸನ್ಯಾಸಿಯು** ನನಗೆ ಪ್ರಿಯನಿರುತ್ತಾನೆ. ಈ ಎಲ್ಲರಲ್ಲಿ ನಾನು ಮೇಲೆ ಹೇಳಿದ ಪ್ರಕಾರ ಯಾವನು ನನ್ನ ಧರ್ಮವನ್ನೂ, ಅಮೃತತುಲ್ಯವಾದ ಉಪದೇಶವನ್ನೂ ಪಾಲಿಸಿ ನನ್ನಲ್ಲಿ ಶ್ರದ್ಧೆಯಿಂದ ಭಕ್ತಿಯನ್ನಿಡುತ್ತಾನೋ ಆ ಭಕ್ತನು ನನಗೆ ಅತ್ಯಂತ ಪ್ರಿಯನಿರುತ್ತಾನೆ."

ಈ ಪ್ರಕಾರ ಶ್ರೀಕೃಷ್ಣನು ಅರ್ಜುನನಿಗೆ **ಭಕ್ತಿಯೋಗ**ವನ್ನು ತಿಳಿಸಿ ಹೇಳಿದ ನಂತರ ಇನ್ನೂ ಹಲವು ಉಪದೇಶವನ್ನು ಹೇಳಿದನು. ಈ ಎಲ್ಲ ಉಪದೇಶಾಮೃತವು **ಭಗವದ್ಗೀತೆ** ಎಂಬ ಜಗತ್ಪ್ರಸಿದ್ಧ ಗ್ರಂಥದಲ್ಲಿ ವಿವರಿಸಲ್ಪಟ್ಟಿರುತ್ತದೆ. ಅದನ್ನೆಲ್ಲ ಇಲ್ಲಿ ಹೇಳುವದು ಶಕ್ಯವಿಲ್ಲ. ಈ ಉಪದೇಶದಲ್ಲಿ ಶ್ರೀಕೃಷ್ಣನು ತನ್ನ ಅತ್ಯಂತ ಪ್ರಿಯಕರ ಶಿಷ್ಯನಿಗೆ ತನ್ನ ಉಪದೇಶದ ಒಂದು ದೊಡ್ಡ ಗುಟ್ಟನ್ನು ಹೇಳಿದನು. ಅದೇನಂದರೆ:—

"ನೀನು ಸನ್ಯಾಸಿಯು ಅಥವಾ ಯೋಗಿಯು ಇದ್ದರೆ ನನ್ನ ಮೇಲೆ ನಿನ್ನ ಮನಸ್ಸನ್ನು ಅರ್ಪಣ ಮಾಡು. ನಿನಗೆ ಭಕ್ತಿಯನ್ನು ಮಾಡತಕ್ಕದ್ದಿದ್ದರೆ ನನ್ನ ಭಕ್ತಿಯನ್ನು ಮಾಡು. ನಿನಗೆ ಯಜ್ಞವನ್ನು ಮಾಡತಕ್ಕದ್ದಿದ್ದರೆ ನನ್ನ ಯಜನವನ್ನು ಮಾಡು. ಇದನ್ನು ಮಾಡದೆ ನೀನು ಇತರ ಕರ್ಮವನ್ನು ಮಾಡುತ್ತಿದ್ದರೆ ನನಗೆ ಬರೇ ನಮಸ್ಕಾರ ಮಾಡು. ನೀನು ಈ ಪ್ರಕಾರ ಮಾಡಿದರೆ ನನಗೆ ಪ್ರಿಯನಾಗುವಿಯೆಂದು ಪ್ರತಿಜ್ಞೆಯಿಂದ ಸತ್ಯವಾಗಿ ಹೇಳುತ್ತೇನೆ. ಸಾರಾಂಶ—ಧರ್ಮದ ಇತರ ಯಾವತ್ತು ಪ್ರಕಾರಗಳನ್ನು ಬಿಟ್ಟುಕೊಟ್ಟು ನನಗೊಬ್ಬನಿಗೆ ಶರಣು ಬಾ. ಅಂದರೆ ನಿನಗೆ ಯಾವ ಅನೇಕ ಪಾಪಗಳ ಭೀತಿಯು ಕಾಣುತ್ತದೋ ಆ ಎಲ್ಲ ಪಾಪಗಳಿಂದ ನಿನ್ನನ್ನು ಮುಕ್ತ ಮಾಡುವೆನು. ನೀನು ಎಳ್ಳಷ್ಟು ಸಹ ಚಿಂತೆ ಮಾಡಬೇಡ."

ಈ ಪ್ರಕಾರ ಭಗವಾನ್ ಶ್ರೀಕೃಷ್ಣನು ಧನುರ್ಧರನಾದ ಅರ್ಜುನನಿಗೆ ತನ್ನ ಉಪದೇಶವನ್ನು ಹೇಳಿ ಮುಗಿಸಿದ ನಂತರ—"ಅರ್ಜುನಾ, ನಿನಗೆ ಅಜ್ಞಾನದಿಂದ ಉತ್ಪನ್ನವಾಗಿದ್ದ ಭ್ರಾಂತಿಯು ಈಗಾದರೂ ಹೋಯಿತೇ?" ಎಂದು ಕೇಳಲು ಅರ್ಜುನನು--"ದೇವಾಧಿದೇವಾ ಶ್ರೀಕೃಷ್ಣಾ! ನಿನ್ನ ಕೃಪೆಯಿಂದ ನನ್ನ ಭ್ರಾಂತಿಯು ಈಗ ಪೂರ್ಣವಾಗಿ ಹೋಯಿತು. ನನ್ನ ಎಲ್ಲ ಸಂಶಯಗಳು ಬೈಲಾದವು. ನಿನ್ನ ವಚನವನ್ನು ಮಾನ್ಯ ಮಾಡಲಿಕ್ಕೆ ನಾನು ಈಗ ಸಿದ್ಧನಿರುತ್ತೇನೆ" ಎಂದು ವಿನಯದಿಂದ ಉತ್ತರ ಕೊಟ್ಟನು.

ಇಲ್ಲಿ ಶ್ರೀಕೃಷ್ಣಾರ್ಜುನರ ದಿವ್ಯ ಸಂವಾದವು ಮುಗಿದಿದ್ದು ಇದನ್ನು ಪುನಃ ಪುನಃ ನೆನಪು ಮಾಡಿಕೊಂಡು ಹೇಗೆ ಸಂಜಯನಿಗೆ ಅತ್ಯಂತ ಹರ್ಷವಾಗಿ ರೋಮಾಂಚನಗಳು ಎದ್ದು ನಿಲ್ಲುತ್ತಿದ್ದವೋ ಹಾಗೆ ಇದನ್ನು ಪುನಃ ಪುನಃ ಓದಿ ಮನನ ಮಾಡುವ ಯಾವತ್ತು ವಾಚಕರಿಗೆ ಹೊಸ ಹೊಸ ಆನಂದವು ಪ್ರಾಪ್ತವಾಗದೆ ಇರಲಿಕ್ಕಿಲ್ಲ. ಹಾಗೂ **ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನೂ ಧನುರ್ಧರನಾದ ಪಾರ್ಥನೂ ಐಕಮತ್ಯದಿಂದ ಕೆಲಸ ಮಾಡುತ್ತಾರೋ ಅಲ್ಲಿ ಶ್ರೀಯು, ವಿಜಯವು, ಐಶ್ವರ್ಯವು ಮತ್ತು ನ್ಯಾಯ ನೀತಿಗಳು ಸ್ಥಿರವಾಗಿರುತ್ತವೆ** ಎಂಬದಾಗಿ ಯಾರೂ ಒಪ್ಪಿಕೊಳ್ಳದೆ ಇರಲಾರರು.

# ೭. ಯುದ್ಧಪರ್ವ.



ಈ ಪ್ರಕಾರ ಶ್ರೀಕೃಷ್ಣಾರ್ಜುನರೊಳಗಿನ ಸಂವಾದವು ಸುಮಾರು ಒಂದು ಅಥವಾ ಒಂದೂವರೆ ತಾಸು ನಡೆಯಿತು. ಆ ಮೇಲೆ ಅರ್ಜುನನು ತನ್ನ ಧನುರ್ಬಾಣವನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧನಾಗಲು ಶ್ರೀಕೃಷ್ಣನು ಅವನ ರಥವನ್ನು ಪಾಂಡವರ ಸೈನ್ಯದ ಹತ್ತರ ತ್ವರೆಯಿಂದ ತಂದನು. ಆದರೆ ಯಾವ ಪ್ರಕಾರದ ಭಾವನೆಯಿಂದ ಅರ್ಜುನನ ಮನಸ್ಸಿಗೆ ವಿಷಾದವಾಗಿತ್ತೋ ಅದೇ ಪ್ರಕಾರದ ಭಾವನೆಯು ಅನ್ಯ ಪ್ರಕಾರದಿಂದ ಧರ್ಮನ

ಮನಸ್ಸಿನಲ್ಲಿ ಉತ್ಪನ್ನವಾಗಿದ್ದರಿಂದ ಅವನು ಒಮ್ಮಿಂದೊಮ್ಮೆ ತನ್ನ ಮೈಯೊಳಗಿನ ಕವಚವನ್ನು ತೆಗೆದು ತನ್ನ ರಥದಿಂದ ಕೆಳಗೆ ಜಿಗಿದು ಪಾದಾಚಾರಿಯಾಗಿ ಕೌರವ ಸೈನ್ಯದ ಕಡೆಗೆ ಹೋಗಹತ್ತಿದನು. ಧರ್ಮನ ಈ ಚಮತ್ಕಾರಿಕ ವರ್ತನವನ್ನು ನೋಡಿ ಇತರ ಪಾಂಡವರು ತಮ್ಮ ರಥಗಳಿಂದ ಕೆಳಗೆ ಜಿಗಿದು ಅವನ ಹಿಂದೆ ಹಿಂದೆ ಹೋದರು. ಅವರ ರಥಗಳೂ ಅವರ ಹಿಂದೆ ಹಿಂದೆ ಸಾಗಿದವು. ಲಕ್ಷಾವಧಿ ಜನರ ಜೀವವನ್ನು ಈ ಪ್ರಕಾರ ಯುದ್ಧ ಮಾಡಿ ನಾಶ ಮಾಡದೆ ದ್ವಂದ್ವ ಯುದ್ಧದಿಂದ ಈ ವಾದವನ್ನು ತೀರಿಸಿಕೊಳ್ಳಬೇಕು ಅಂದರೆ ಒಂದು ಪ್ರಕಾರದ ದ್ಯೂತವನ್ನೇ ಆಡಬೇಕು ಎಂಬ ವಿಚಾರದಿಂದ ಧರ್ಮರಾಜನು ಈ ಪ್ರಕಾರ ಮಾಡುತ್ತಾನೆಂದು ಪಾಂಡವರ ಕಡೆಯ ಜನರಿಗೆ ತೋರಿತು. ಆದರೆ ಉನ್ಮತ್ತ ದುರ್ಯೋಧನನಿಗೆ ಭೀಷ್ಮದ್ರೋಣಾದಿಗಳು ಕೂಡಿಕೊಂಡಿರುವ ಈ ಯುದ್ಧದಲ್ಲಿ ಧರ್ಮನು ಯುದ್ಧ ಮಾಡಲಿಕ್ಕೆ ಅಂಜಿಕೊಂಡು ತನಗೆ ಶರಣು ಬರುತ್ತಾನೆಂದು ತೋರಿತು. "ಇದೇನು? ಇದೇನು?" ಎಂದು ಧರ್ಮರಾಜನ ಬಂಧುಗಳು ಧರ್ಮರಾಜನಿಗೆ ಅನೇಕ ಸಾರೆ ಪ್ರಶ್ನೆ ಮಾಡಿದರು. ಆದರೆ ಧರ್ಮನು ಅವರ ಪ್ರಶ್ನೆಗೆ ಉತ್ತರ ಕೊಡದೆ ಭೀಷ್ಮಾಚಾರ್ಯನ ರಥದ ಕಡೆಗೆ ಹೋಗಿ ಅವನ ಕಾಲುಗಳನ್ನು ಹಿಡಿದುಕೊಂಡು ಗದ್ಗದ ಸ್ವರದಿಂದ—"ಪ್ರಿಯ ಮತ್ತು ಪೂಜ್ಯ ತಾತಾ! ನಿಮ್ಮ ಸಂಗಡ ನಿರುಪಾಯದಿಂದ ಯುದ್ಧ ಮಾಡುತ್ತೇನೆ. ದಯಮಾಡಿ ನನ್ನನ್ನು ಕ್ಷಮಿಸಿ ನನಗೆ ಆಶೀರ್ವಾದ ಮಾಡಿರಿ. ನೀವು ಸಿಟ್ಟಾದರೆ ನನಗೆ ಜಯವು ಬರಲಾರದು" ಎಂದು ಹೇಳಿದನು. ಆಗ ಭೀಷ್ಮಾಚಾರ್ಯನು ದುಃಖದಿಂದ ಕುತ್ತಿಗೆಯ ನರವನ್ನು ಉಬ್ಬಿಸಿ—"ಧರ್ಮಾ, ನೀನು ಬಂದು ನನಗೆ ನಮಸ್ಕಾರ ಮಾಡದೆ ಯುದ್ಧ ಮಾಡಿದ್ದರೆ ನಾನು ಒಂದು ವೇಳೆ ನಿನ್ನ ಅಪಜಯವನ್ನು ಚಿಂತಿಸುತ್ತಿದ್ದೆನು. ಆದರೆ ನೀನು ಪೂರ್ಣ ಧರ್ಮನಿಷ್ಠನು ಇರುತ್ತೀ. '**ಯತೋ ಧರ್ಮಸ್ತತೋ ಜಯಃ**' ಎಂಬಂತೆ ನಿನಗೆ ಪರಾಜಯವು ಸಂಭವಿಸಲಾರದು. ಮನುಷ್ಯನು ದ್ರವ್ಯದ ದಾಸನಿರುತ್ತಾನೆ. ದ್ರವ್ಯವು ಮನುಷ್ಯನ ದಾಸ್ಯತ್ವ ಮಾಡುವದಿಲ್ಲ. ನಾನು ದ್ರವ್ಯದಿಂದ ದುರ್ಯೋಧನನಿಗೆ ಬಂಧಿಸಲ್ಪಟ್ಟಿರುತ್ತೇನೆ. ನಾನು ಕರ್ತವ್ಯವೆಂದು ತಿಳಿದು ದುರ್ಯೋಧನನ ಪಕ್ಷದಿಂದ ನಿನ್ನ ಸಂಗಡ ಯುದ್ಧಮಾಡುತ್ತೇ

ನೆ. ನಿನ್ನ ಸಂಗಡ ನನ್ನ ದ್ವೇಷವು ಏನೂ ಇಲ್ಲ. ಹೋಗು. ನನ್ನ ಸಂಗಡ ನಿಶ್ಶಂಕ ಮನಸ್ಸಿನಿಂದ ಯುದ್ಧ ಮಾಡು" ಎಂದು ಉತ್ತರ ಕೊಟ್ಟನು. ಆ ಮೇಲೆ ಧರ್ಮನು ಪುನಃ ಭೀಷ್ಮಾಚಾರ್ಯನ ಕಾಲುಗಳ ಮೇಲೆ ತನ್ನ ಹಣೆಯನ್ನಿಟ್ಟು ಅವನ ಆಶೀರ್ವಾದವನ್ನು ಪಡೆದುಕೊಂಡ ಬಳಿಕ ದ್ರೋಣಾಚಾರ್ಯನ ರಥಕ್ಕೆ ಹೋಗಿ ಅವನಿಗೂ ನಮಸ್ಕರಿಸಿ ಅವನ ಕಡೆಯಿಂದಲೂ ಆಶೀರ್ವಾದವನ್ನು ಪಡೆದನು. ಇದೇ ಪ್ರಕಾರ ಅವನು ಕೃಪಾಚಾರ್ಯನ ಕಡೆಗೂ, ತನ್ನ ಮಾವನಾದ ಶಲ್ಯನ ಕಡೆಗೂ, ಹೋಗಿ ಅವರಿಗೆ ನಮಸ್ಕಾರ ಮಾಡಿ ಅವರಿಬ್ಬರ ಕಡೆಯಿಂದ ಸಹ ಆಶೀರ್ವಾದಗಳನ್ನು ಪಡೆದುಕೊಂಡನು. ಆ ಮೇಲೆ ಅವನು ತನ್ನ ರಥದ ಕಡೆಗೆ ತಿರುಗಿ ಬರುವಾಗ ದೊಡ್ಡ ಧ್ವನಿಯಿಂದ--"ನಾನು ನ್ಯಾಯದಿಂದ ಯುದ್ಧ ಮಾಡುತ್ತೇನೆಂದು ನನಗೆ ಕಾಣುತ್ತದೆ. ಈ ನನ್ನ ಅಭಿಪ್ರಾಯವನ್ನು ಮಾನ್ಯ ಮಾಡುವವರು ಹಾಗೂ ನನ್ನ ಪಕ್ಷಕ್ಕೆ ಬರಲಪೇಕ್ಷಿಸುವವರು ಈಗ ಅಗತ್ಯವಾಗಿ ಬರತಕ್ಕದ್ದು. ಮುಂದೆ ಅವರಿಗೆ ಬರುವದು ಶಕ್ಯವಿಲ್ಲ" ಎಂದು ಕೂಗಿ ಹೇಳಿದನು. ಆಗ ಯುಯುತ್ಸುವು ದುರ್ಯೋಧನನ ಪಕ್ಷವನ್ನು ಬಿಟ್ಟುಕೊಟ್ಟು ಬಹಿರಂಗವಾಗಿ ಎಲ್ಲರ ಸಮಕ್ಷ ಧರ್ಮರಾಜನ ಪಕ್ಷವನ್ನು ಸ್ವೀಕರಿಸಿದನು. ಆಗ ಧರ್ಮರಾಜನು ಯುಯುತ್ಸುವನ್ನು ಅಭಿನಂದಿಸಿ ಧೃತರಾಷ್ಟ್ರನ ಒಂದು ವಂಶವಾದರೂ ಜೀವಂತ ಉಳಿಯುವದೆಂದು ಆನಂದಪಟ್ಟನು. ಹಾಗೂ ತನ್ನ ಕವಚವನ್ನು ಪುನಃ ಹಾಕಿಕೊಂಡು ತನ್ನ ರಥವನ್ನು ಹತ್ತಿ ಎಲ್ಲರಿಗೂ ನಮಸ್ಕಾರ ಮಾಡಿ ತನ್ನ ಸೈನ್ಯದ ಕಡೆಗೆ ಹೋದನು. ಧರ್ಮರಾಜನ, ಅರ್ಥಾತ್ ಪಾಂಡವರ, ಧರ್ಮಶೀಲತೆಯನ್ನು ನೋಡಿ ಕೌರವರ ಕಡೆಯ ಸಣ್ಣದೊಡ್ಡ ಅರಸರಿಗೆ ಆಶ್ಚರ್ಯವೆನಿಸಿತು. ಕೆಲವರು ಪಾಂಡವರಿಗೆ ಬಹಿರಂಗವಾಗಿ ಧನ್ಯವಾದ ಮಾಡಿದರು. ನೂರಾರು ಜನರು ಪ್ರೇಮಾಶ್ರುಗಳನ್ನು ಸುರಿಸಿದರು. ಸ್ವಲ್ಪ ವೇಳೆಯಲ್ಲಿಯೇ ಎರಡೂ ಸೈನ್ಯದವರು ತಮ್ಮ ರಣಕಹಾಳಿಯನ್ನು ಊದಿ ಒಬ್ಬರ ಮೇಲೊಬ್ಬರು ಸಾಗಿ ಹೋಗಿ ಯುದ್ಧ ಮಾಡಿದರು.

ಈ ಯುದ್ಧದಲ್ಲಿ ನಡೆದ ವೃತ್ತಾಂತವನ್ನು ಹೇಳುವದು ಈ ಗ್ರಂಥದ ಪ್ರಸ್ತುತ ಕಾರ್ಯವಲ್ಲದಿದ್ದಾಗ್ಯೂ ಇದರಲ್ಲಿ ಶ್ರೀಕೃಷ್ಣನು ಮಾಡಿದ ಮಹ

ತ್ಕಾರ್ಯವನ್ನು ತೋರಿಸುವ ಮಟ್ಟಿಗೆ ಅದನ್ನು ಬರೆಯುತ್ತೇವೆ. ಅದು ಹೇಗೆಂದರೆ:--ಭೀಷ್ಮನು ಮೊದಲಿನ ಹತ್ತು ದಿವಸಗಳವರೆಗೆ ಕೌರವರ ಸೇನಾಧಿಪತ್ಯವನ್ನು ಅಂಗೀಕರಿಸಿ ಘನಘೋರವಾದ ಯುದ್ಧವನ್ನು ಮಾಡಿದನು. ಮೊದಲನೆ ದಿಸವ ಪೂರ್ವಾಹ್ನದಲ್ಲಿ ಯುದ್ಧವು ಆರಂಭವಾಯಿತು. ಪಾಂಡವರ ಕಡೆಯು ಸೇನಾಧಿಪತ್ಯವನ್ನು ಧೃಷ್ಟದ್ಯುಮ್ನನೂ, ಕೌರವರ ಕಡೆಯು ಸೇನಾಧಿಪತ್ಯವನ್ನು ಭೀಷ್ಮನೂ, ಸ್ವೀಕರಿಸಿದರು. ಈ ಯುದ್ಧದ ಮೊದಲನೇ ದಿವಸ ರಥಿಕರು ರಥಿಕರ ಕೂಡ, ರಾಹುತರು ರಾಹುತರ ಕೂಡ, ಮಾವುತರು ಮಾವುತರ ಕೂಡ, ಕಾಲಬಲವು ಕಾಲಬಲದ ಕೂಡ ಹೋರಾಡಿದ್ದರಿಂದ ಸಾವಿರಾರು ರಥಿಕರು, ಕುದುರೆಗಳು, ಆನೆಗಳು, ಕಾಲಬಲವು ಸಾಯಲು ರಣಾಂಗಣವು ರಕ್ತಮಾಂಸಗಳಿಂದ ವ್ಯಾಪಿಸಿ ಹೋಯಿತು. ಆ ಮೇಲೆ ಮಹಾ ರಥಿಕರು ಮಹಾ ರಥಿಕರ ಕೂಡ ದ್ವಂದ್ವ ಯುದ್ಧ ಮಾಡಿದರು. ಅದರಲ್ಲಿ ಅರ್ಜುನನ ಮತ್ತು ಭೀಷ್ಮನ ನಡುವೆ ಯುದ್ಧವು ಆರಂಭವಾಗಿ ಉಭಯ ವೀರರು ತಮ್ಮ ಪರಮಾವಧಿ ಶೌರ್ಯವನ್ನು ತೋರಿಸಿದರು. ಒಬ್ಬರು ಇನ್ನೊಬ್ಬರಿಗೆ ಸೊಪ್ಪು ಹಾಕಲಿಲ್ಲ. ಕೆಲವು ಹೊತ್ತಿನ ತರುವಾಯ ಇಬ್ಬರೂ ಒಬ್ಬರಿಂದ ಇನ್ನೊಬ್ಬರು ಅಗಲಿ ತಮ್ಮ ವಿರುದ್ಧ ಪಕ್ಷದ ಸಾವಿರಾರು ವೀರರನ್ನೂ, ಆನೆಗಳನ್ನೂ, ರಥಿಕರನ್ನೂ, ರಾಹುತರನ್ನೂ ಕೊಂದರು. ಈ ಪ್ರಕಾರ ಸಾಯಂಕಾಲದ ವರೆಗೆ ರಣಕದನವು ನಡೆದ ಬಳಿಕ ಧರ್ಮಯುದ್ಧದ ನೇಮದ ಪ್ರಕಾರ ಎರಡೂ ಪಕ್ಷದ ಸೇನಾಪತಿಗಳು ತಮ್ಮ ತಮ್ಮ ಸೈನ್ಯವನ್ನು ತೆಗೆದುಕೊಂಡು ತಮ್ಮ ಪಾಳ್ಯಗಳಿಗೆ ವಿಶ್ರಾಂತಿಗೈಯ್ಯಲಿಕ್ಕೆ ಹೋದರು. ಪುನಃ ಮರು ದಿವಸ ಮುಂಜಾನೆ ಈ ಎರಡೂ ಸೈನ್ಯದವರು ಮೊದಲಿನ ದಿವಸದಂತೆ ಯುದ್ಧ ಮಾಡಿದರು. ಇದೇ ಕ್ರಮವು ಪ್ರತಿದಿವಸ ನಡೆದು ಎರಡೂ ಪಕ್ಷದ ಕಡೆಯ ಮನುಷ್ಯರ ಮತ್ತು ಪಶುಗಳ ಭಯಂಕರ ಪ್ರಾಣಹಾನಿಯು ಆಯಿತು. ಈ ಪ್ರಕಾರ ಮೂರುದಿವಸ ಯುದ್ಧವು ನಡೆದಬಳಿಕ ನಾಲ್ಕನೇದಿವಸ ಭೀಮಸೇನನು ಅತಿಶಯ ಪರಾಕ್ರಮಮಾಡಿ ಸಾವಿರಾರು ಆನೆಗಳನ್ನು ಕೊಂದು ದುರ್ಯೋಧನನಿಗೆ ತನ್ನ ಬಾಣದಿಂದ ಅವನ ರಥದಲ್ಲಿ ಮೂರ್ಛಿತಮಾಡಿದನು. ಇದನ್ನು ಕಂಡು ದುರ್ಯೋಧನನ ಸಾರಥಿಯು ದುರ್ಯೋಧನನ ರಥವನ್ನು ರಣಾಂಗಣದಿಂದ

ಹಿಂದಕ್ಕೆ ತೆಗೆದುಕೊಂಡು ಹೋದನು. ಆದುದರಿಂದ ಕೌರವ ಸೈನ್ಯವು ಹೆದರಿ ಹಿಂದಕ್ಕೆ ಸರಿಯಿತು. ಭೀಷ್ಮ ದ್ರೋಣರ ಆಟವು ಸಹ ನಡೆಯುಲಿಲ್ಲ. ಸ್ವಲ್ಪ ಹೊತ್ತಿನ ನಂತರ ದುರ್ಯೋಧನನು ಎಚ್ಚರಿಕೆಯು ಮೇಲೆ ಬಂದು ತನ್ನ ಸೈನ್ಯವೂ ಭೀಷ್ಮ ದ್ರೋಣರೂ ಸಮರಾಂಗಣ ಬಿಟ್ಟು ಹಿಂದಕ್ಕೆ ಸರಿದುಕೊಳ್ಳುವದನ್ನು ನೋಡಿ ಭೀಷ್ಮನ ಕಡೆಗೆ ಹೋಗಿ--"ಪಿತಾಮಹನೇ, ನಿನಗೆ ಪಾಂಡವರ ಬಗ್ಗೆ ಕನಿಕರವು ಹುಟ್ಟಿದಂತೆಯೂ, ಅವರ ಮೇಲೆ ನಿನ್ನ ಕೃಪೆಯು ಇರುವಂತೆಯೂ ಸ್ಪಷ್ಟವಾಗಿ ಕಾಣುತ್ತದೆ. ನೀನು ಪಾಂಡವರ ಕೂಡ ಮನಃಪೂರ್ವಕ ಯುದ್ಧ ಮಾಡುವದಿಲ್ಲೆಂದು ಮೊದಲೇ ಹೇಳಿಬಿಟ್ಟಿದ್ದರೆ ನಾನು ಕರ್ಣನನ್ನೊಡಗೊಂಡು ಎರಡನೆ ವಿಚಾರವನ್ನು ಮಾಡುತ್ತಿದ್ದೆನು" ಎಂದು ನುಡಿದನು. ದುರ್ಯೋಧನನು ಈ ಪ್ರಕಾರ ಅಪ್ರಿಯವಾದ ಭಾಷಣ ಮಾಡಿದ್ದನ್ನು ಕೇಳಿ ಭೀಷ್ಮನು ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿ--"ದುರ್ಯೋಧನಾ, ಪಾಂಡವರು ದೇವತೆಗಳಿಂದಲೂ ಅಜಿಂಕ್ಯರಿರುತ್ತಾರೆಂದು ನಾನು ನಿನಗೆ ಅನೇಕ ಸಾರೆ ಹೇಳಿದೆನು. ಆದರೆ ಅದು ನಿನಗೆ ನಿನ್ನ ಮೋಹದ ಮೂಲಕ ತಿಳಿಯುಲಿಲ್ಲ. ಆದಿರಲಿ. ಈ ಮುದುಕನ ಕೈಯಿಂದ ಏನು ಆಗುತ್ತದೆಂಬುದನ್ನು ನಿನಗೆ ತೋರಿಸುತ್ತೇನೆ" ಎಂದು ಹೇಳಿ ಪುನಃ ಸಮರಾಂಗಣದಲ್ಲಿ ವೀರಾವೇಶದಿಂದ ಕಾದಲಿಕ್ಕೆ ನಿಂತನು. ಆಗ ದುರ್ಯೋಧನನು ಆನಂದದಿಂದ ಶಂಖವನ್ನು ಊದಿದನು. ಆಗ ಯಾವತ್ತು ಕೌರವ ವೀರರು ಯುದ್ಧ ಮಾಡಲಿಕ್ಕೆ ಸಮರಾಂಗಣಕ್ಕೆ ತಿರುಗಿ ಬಂದರು. ಆ ಮೇಲೆ ಪುನಃ ತುಮುಲ ಯುದ್ಧವು ನಡೆಯಿತು. ಅದರಲ್ಲಿ ಸಾವಿರಾರು ಜನರ ಧಡಗಳು ನೆಲಕ್ಕೆ ಕಡಿದು ಬಿದ್ದುದರಿಂದ ರಕ್ತದ ನದಿಯು ಹರಿಯಹತ್ತಿತು. ಸತ್ತುಬಿದ್ದ ಆನೆಗಳು ಆ ನದಿಗೆ ಹಾಕಿದ ಒಡ್ಡುಗಳಂತೆ ಕಾಣಿಸಿದವು. ಸತ್ತುಬಿದ್ದ ಮನುಷ್ಯರ ಮತ್ತು ಕುದುರೆಗಳ ಮಾಂಸವು ಆ ನದಿಯೊಳಗಿನ ಕೆಸರಾಯಿತು. ರಥದೊಳಗೆ ನಿಂತ ಭೀಷ್ಮನು ಯಾವಲ್ಲಿ ನಿಂತಿರುವನೆಂಬುದು ನಿಶ್ಚಿತವಾಗಿ ತಿಳಿಯದೆ ಹೋಯಿತು. ಅವನ ಧನುಷ್ಯವು ಯಾವಾಗಲು ಮಂಡಲಾಕಾರವಾಗಿತ್ತು. ಅವನ ರಥದಿಂದ ಯಾವಾಗಲು ಬಾಣಗಳು ಹೊರಬೀಳುತ್ತಿದ್ದವು. ಅವನಿಗೆ ಎದುರಾಗಿ ಬಂದ ವೀರರು ಅಗ್ನಿಯಲ್ಲಿ ಬೀಳುವ ಪತಂಗಗಳಂತೆ ಮೃತ್ಯುಮುಖದಲ್ಲಿ ಬೀಳುತ್ತಿದ್ದರು.

ಕೊನೆಗೆ ಶ್ರೀಕೃಷ್ಣನು ಅರ್ಜುನನ ರಥವನ್ನು ಭೀಷ್ಮನ ಮುಂದೆ ಒಯ್ದು ನಿಲ್ಲಿಸಿದನು. ಅರ್ಜುನನು ಪರಮಾವಧಿ ಶೌರ್ಯವನ್ನು ತೋರಿಸಿದಾಗ್ಯೂ ಭೀಷ್ಮನು ಅರ್ಜುನನ್ನು ನಿರ್ವಿಣ್ಯ ಮಾಡಿ ಬಿಟ್ಟನು. ಶ್ರೀಕೃಷ್ಣನು ಭೀಷ್ಮನ ಬಾಣಗಳು ಅರ್ಜುನನಿಗೆ ತಗಲಬಾರದೆಂದು ತನ್ನ ಸಾರಥ್ಯಕೌಶಲ್ಯವನ್ನು ಎಷ್ಟು ಉಪಯೋಗಿಸಿದಾಗ್ಯೂ ಅದರಿಂದ ಏನೂ ಉಪಯೋಗವಾಗಲಿಲ್ಲ. ಅರ್ಜುನನ ರಥದೊಳಗಿಂದ ಭೀಷ್ಮನ ಮೇಲೆ ಬಾಣಗಳು ಹೊರಬೀಳದಂತೆ ಆದವು. ಆಗ ಶ್ರೀಕೃಷ್ಣನು ಹಿಂದಿರುಗಿ ನೋಡಲಾಗಿ ಅರ್ಜುನನು ರಥ ದಲ್ಲಿ ಮೂರ್ಛಿತನಾದ್ದನ್ನು ಕಂಡನು. ಇದನ್ನು ಕಂಡು ಶ್ರೀಕೃಷ್ಣನು ಬಹಳ ವ್ಯಸನಪಟ್ಟು, ಭೀಷ್ಮನ ಮುಂದೆ ಪಾಂಡವರ ಆಟವು ಏನೂ ನಡೆಯುವ ದಿಲ್ಲೆಂತಲೂ, ಭೀಷ್ಮನು ಪಾಂಡವರನ್ನು ಅವರ ಸೈನ್ಯ ಸಹಿತವಾಗಿ ಇಂದಿನ ದಿವಸವೇ ಸಂಹರಿಸುತ್ತಾನೆಂತಲೂ ಮನಗಂಡು, ಭೀಷ್ಮ, ದ್ರೋಣ, ದುರ್ಯೋ ಧನ, ದುಶ್ಶಾಸನ, ಶಕುನಿ ಮೊದಲಾದವರನ್ನೂ, ಅವರ ಸಹಾಯಕರನ್ನೂ ಇಂದಿನ ದಿವಸವೇ ಕೊಂದು ಯುಧಿಷ್ಠಿರನಿಗೆ ಪೃಥ್ವಿಯ ರಾಜ್ಯವನ್ನು ಕೊಡ ಬೇಕೆಂದು, ತನ್ನ ಭಕ್ತರ ಅಭಿಮಾನದಿಂದ ತಾನು ರಥದಲ್ಲಿಟ್ಟಿದ್ದ ಸುದ ರ್ಶನ ಚಕ್ರವನ್ನು ಕೈಯಲ್ಲಿ ತೆಗೆದುಕೊಂಡು, ಕುದುರೆಯ ಕಡಿವಾಣಗ ಳನ್ನು ಚೆಲ್ಲಿಕೊಟ್ಟು, ರಥದ ಕೆಳಗೆ ಜಿಗಿದು, ಸುದರ್ಶನ ಚಕ್ರವನ್ನು ತಿರು ವುತ್ತ, ಭೀಷ್ಮನ ಮೇಲೆ ಸಾಗಿ ಹೋದನು. ಸ್ವತಃ ಶ್ರೀಕೃಷ್ಣನು ರಥ ದಿಂದ ಇಳಿದು ತನ್ನ ಮೇಲೆ ಸಾಗಿ ಬರುವದನ್ನು ನೋಡಿ ಭೀಷ್ಮನು ತನ್ನ ಧನುಷ್ಯವನ್ನು ಕೆಳಗೆ ಇಟ್ಟು ಅವನಿಗೆ ಕೈಜೋಡಿಸಿ––"ದೇವಾಧಿದೇವಾ, ಜಗನ್ನಿವಾಸಾ, ಶ್ರೀಕೃಷ್ಣಾ! ನಿನ್ನ ಕೈಯಿಂದ ನನಗೆ ಮರಣವು ಪ್ರಾಪ್ತ ವಾದರೆ ನನಗೆ ಇಹಪರಗಳೆರಡೂ ಪ್ರಾಪ್ತವಾಗುವವು. ಆದುದರಿಂದ ಬಾ, ನನ್ನನ್ನು ಕೊಲ್ಲು" ಎಂದು ಹೇಳಿದನು. ಇದನ್ನು ಕೇಳಿ ಶ್ರೀಕೃಷ್ಣನು ತನ್ನ ಕೈಗಳನ್ನು ಕಿಂಚಿತ್ತು ಹಿಂದಕ್ಕೆ ಸರಿಸಿ—"ಭೀಷ್ಮಾ, ಈ ಅನರ್ಥಕ್ಕೆ ನೀನೇ ಉತ್ಪಾದಕನು. ಈ ಭಯಂಕರ ಕ್ಷಯಕ್ಕೂ ನೀನೇ ಕಾರಣನು. ರಾಜನು ನಿಂದ್ಯವಾದ ದ್ಯೂತವನ್ನಾಡುವದನ್ನು ಬಿಡಿಸುವದೂ, ಅವನು ಅದನ್ನು ಕೇಳದಿದ್ದರೆ ಅವನನ್ನು ತ್ಯಾಗ ಮಾಡುವದೂ ಸನ್ಮಾರ್ಗವರ್ತಿಯಾ

ದ ಮಂತ್ರಿಯ ಕೆಲಸವಿರುತ್ತದೆ. ಯಾವ ಕುಲಕಂಟಕನಾದ ರಾಜನು ಧರ್ಮವನ್ನು ಬಿಟ್ಟು ನಡೆಯುತ್ತಾನೋ ಆ ದುಷ್ಟ ಬುದ್ಧಿಯ ರಾಜನನ್ನು ತೆಗೆದು ಹಾಕಬೇಕು. ಹೀಗಿದ್ದು ನೀನು ಅಂಥವನಿಗೆ ಜಯಶ್ರೀಯನ್ನು ದೊರಕಿಸಿ ಕೊಡುವೆಯಾ?" ಎಂದು ಕೇಳಿದನು. ಅದಕ್ಕೆ ಭೀಷ್ಮನು—"ರಾಜನು ಪರಮ ದೈವತವು. ಅವನನ್ನು ತೆಗೆದು ಹಾಕುವದು ನನ್ನ ಕೆಲಸವಲ್ಲ" ಎಂದು ಉತ್ತರ ಕೊಟ್ಟನು. ಈ ಪ್ರಕಾರ ಶ್ರೀಕೃಷ್ಣ ಮತ್ತು ಭೀಷ್ಮರೊಳಗೆ ಸಂವಾದವು ನಡೆದಿರುವಾಗ ಅರ್ಜುನನು ಎಚ್ಚರಿಕೆಯ ಮೇಲೆ ಬಂದು ರಥದ ಕೆಳಗೆ ಇಳಿದು ಶ್ರೀಕೃಷ್ಣನ ಕಡೆಗೆ ತ್ವರೆಯಿಂದ ಹೋಗಿ ಅವನ ಕಾಲು ಹಿಡಿದು—"ಜನಾರ್ದನಾ, ನೀನು ನಿನ್ನ ಪ್ರತಿಜ್ಞೆಯನ್ನು ಮೀರಬೇಡ. ನಾನು ನಿನ್ನ ಕೃಪೆಯಿಂದ ಶತ್ರುವಿನ ಸಂಹಾರವನ್ನು ನಿಶ್ಚಯವಾಗಿ ಮಾಡುವೆನು. ನೀನು ನಿನ್ನ ಪ್ರತಿಜ್ಞೆಯನ್ನು ಭಂಗ ಮಾಡಿ ನನ್ನ ಉದ್ಧಾರವನ್ನು ಮಾಡಿದರೆ ಅದರಿಂದ ನಮಗೆ ಏನು ಭೂಷಣವಾದೀತು? ಆದುದರಿಂದ ದಯಮಾಡಿ ನನ್ನನ್ನು ಕ್ಷಮಿಸಿ ಪುನಃ ರಥದಲ್ಲಿ ಬಂದು ಕುಳಿತು ನನ್ನ ಸಾರಥ್ಯವನ್ನು ಮಾಡು" ಎಂದು ಬೇಡಿಕೊಂಡನು. ಆಗ ಶ್ರೀಕೃಷ್ಣನು ಏನೂ ಉತ್ತರ ಕೊಡದೆ ರಥವನ್ನೇರಿ ಕುದುರೆಗಳ ಕಡಿವಾಣಗಳನ್ನು ಕೈಯಲ್ಲಿ ಹಿಡಿದನು. ಹಾಗೂ ಅರ್ಜುನನು ತನ್ನ ಧನುಷ್ಯಬಾಣವನ್ನು ತೆಗೆದುಕೊಂಡು ರಭಸದಿಂದ ಯುದ್ಧವನ್ನು ಆರಂಭ ಮಾಡಿದನು. ಅರ್ಜುನನ ರಭಸಕ್ಕೆ ಭೀಷ್ಮನಿಗೆ ಅರ್ಜುನನ ಬಾಣಪ್ರಯೋಗದ ಪ್ರತೀಕಾರ ಮಾಡುವದು ಅಸಾಧ್ಯವಾಯಿತು. ಈ ಪ್ರಕಾರ ಸಾಯಂಕಾಲದವರೆಗೆ ಭೀಷ್ಮಾರ್ಜುನರು '**ನಭೂತೋ ನಭವಿಷ್ಯತಿ**' ಯುದ್ಧವನ್ನು ಮಾಡಿದ ನಂತರ ಎರಡೂ ಪಕ್ಷದ ಸೈನ್ಯಗಳು ತಮ್ಮ ಪ್ರತಿದಿನದ ಪದ್ಧತಿಯ ಮೇರೆಗೆ ಸಾಯಂಕಾಲದಲ್ಲಿ ತಮ್ಮ ತಮ್ಮ ಸಿಬಿರಗಳಿಗೆ ಹೊರಟು ಹೋದವು.

ಶ್ರೀಕೃಷ್ಣನು ತನ್ನ ಪ್ರತಿಜ್ಞೆಯನ್ನು ಕಿಂಚಿತ್ತು ಭಂಗ ಮಾಡಿ ಭೀಷ್ಮನ ಅತ್ಯುತ್ಕಟ ಪರಾಕ್ರಮವನ್ನು ಕಡಿಮೆ ಮಾಡಿ ಅರ್ಜುನನ ಬಾಹುಗಳಿಗೆ ಹೆಚ್ಚು ಸ್ಫುರಣ ಬರವಂಥ ಕೃತಿಯನ್ನು ಮಾಡಿದ ಹೊತ್ತಿನಿಂದ ಪಾಂಡವರ ಜಯವು ಹೆಚ್ಚಾಗುತ್ತ ಹೋಗಿ ಅದು ಕಡೆಯತನಕ ಸ್ಥಿರವಾಯಿತು. ಭೀಮ ಮತ್ತು ಭೀಷ್ಮ ಇವರಿಬ್ಬರೂ ಭಯಂಕರ ಬಲಿಷ್ಠರು ಇದ್ದು ಪ್ರತಿದಿನ ತಮ್ಮ

ತಮ್ಮ ಶತ್ರುಗಳ ಅಸಂಖ್ಯ ಸೈನ್ಯವನ್ನು ಸಂಹಾರ ಮಾಡುತ್ತಿದ್ದಾಗ್ಯೂ ಭೀಮನ ಪರಾಕ್ರಮದ ಅಗ್ನಿಯಲ್ಲಿ ದುರ್ಯೋಧನನ ಬಂಧುಗಳು ದಿನಾಲು ಸುಟ್ಟು ಹೋಗಹತ್ತಿದರು. ಯುದ್ಧದ ಒಂಭತ್ತನೆ ದಿವಸವಂತೂ ಭೀಮನು ಧೃತರಾಷ್ಟ್ರನ ಹತ್ತೂ ಮಂದಿ ಮಕ್ಕಳನ್ನು ಒಬ್ಬನ ತರುವಾಯ ಇನ್ನೊಬ್ಬನನ್ನು ಕೊಂದುಬಿಟ್ಟನು. ಇದರಿಂದ ದುರ್ಯೋಧನನು ವ್ಯಸನಾಕ್ರಾಂತನಾಗಿ ಪುನಃ ಭೀಷ್ಮನ ಕಡೆಗೆ ಬಂದು—“ ಪಿತಾಮಹನೇ, ನೀನು ಪಾಂಡವರ ಉಪೇಕ್ಷೆಯನ್ನು ಮಾಡುತ್ತೀ. ಭೀಮನು ನನ್ನ ಅನೇಕ ಮಂದಿ ಬಂಧುಗಳನ್ನು ಕೊಂದನು. ಇದರ ಮುಯ್ಯ ತೀರಿಸಿಕೊಳ್ಳುವದು ನಿನ್ನಿಂದ ಆಗಲೊಲ್ಲದು. ಆದುದರಿಂದ ನನ್ನ ಮೇಲೆ ದೊಡ್ಡ ಸಂಕಟವು ಬಂದಿರುತ್ತದೆ” ಎಂದು ಮೊರೆಇಟ್ಟನು. ಆಗ ಭೀಷ್ಮನು–“ ಅಪ್ಪಾ ದುರ್ಯೋಧನಾ, ನಿನಗೆ ಮೇಲಿಂದ ಮೇಲೆ ನಾನೂ, ದ್ರೋಣನೂ, ವಿದುರನೂ, ಗಾಂಧಾರಿಯೂ ಇದನ್ನೇ ಹೇಳಿದೆವು. ಆದರೆ ಅದು ನಿನಗೆ ತಿಳಿಯದೆ ಹೋಯಿತು ಭೀಮನು ಯಾವ ಯಾವ ಧೃತರಾಷ್ಟ್ರನ ಮಕ್ಕಳ ಕೂಡ ಹೋರಾಡುವನೋ ಅವರನ್ನು ಸಂಹರಿಸದೆ ಬಿಡಲರಿಯನು ಆದುದರಿಂದ ರಣಾಂಗಣದಲ್ಲಿ ಮಡೆದ ನಿನ್ನ ಬಂಧುಗಳ ಸಲುವಾಗಿ ಶೋಕ ಮಾಡದೆ ನೀನೇ ಸ್ವತಃ ಸ್ವರ್ಗಪರಾಯಣನಾಗಿ ಸ್ಥಿರಬುದ್ಧಿಯಿಂದ ಭೀಮನ ಕೂಡ ಹೋರಾಡು” ಎಂದು ಉತ್ತರ ಕೊಟ್ಟನು. ಆಗ ದುರ್ಯೋಧನನು ಹಲ್ಲು ತುಟಿಗಳನ್ನು ಕಚ್ಚುತ್ತ ಭೀಮನ ಮೇಲೆ ತಾನೇ ಸಾಗಿ ಹೋಗಿ ಒಂದು ಬಾಣದಿಂದ ಅವನ ಕವಚವನ್ನು ಹರಿದು ಅವನನ್ನು ಅತಿಶಯವಾಗಿ ಗಾಯಪಡಿಸಲಾಗಿ ಭೀಮನು ಗಪ್ಪನೆ ನೆಲದ ಮೇಲೆ ಕೂತು ಬಿಟ್ಟನು. ಆದರೆ ಒಂದು ಕ್ಷಣಾರ್ಧದಲ್ಲಿ ಭೀಮನು ಪುನಃ ಎಚ್ಚರಿಕೆಯ ಮೇಲೆ ಬಂದು ತನ್ನ ಗದೆಯನ್ನು ಕೈಯೊಳಗೆ ಹಿಡಕೊಂಡು, ರಥದಿಂದ ಕೆಳಗೆ ಜಿಗಿದು, ಶತ್ರು ಸೈನ್ಯದ ಮೇಲೆ ಸಾಗಿ ಹೋದನು. ಅವನ ಗದೆಯ ಹೊಡತಕ್ಕೆ ಯಾರೂ ಈಡಾಗಲಿಲ್ಲ. ದ್ರೋಣನ ರಥವು ಮುರಿದು ಪುಡಿ ಪುಡಿಯಾಯಿತು. ಭೀಷ್ಮಾಚಾರ್ಯನ ಸಹಾಯಕ್ಕೆ ದುರ್ಯೋಧನ, ದುಶ್ಶಾಸನ ಮೊದಲಾದ ವೀರರು ಮತ್ತು ಭೀಮನ ಸಹಾಯಕ್ಕೆ ಅಭಿಮನ್ಯು, ಘಟೋತ್ಕಚ ಮೊದಲಾದ ವೀರರು ಒತ್ತರಿಸಿ ಬಂದರು. ಆಗ ಅಲ್ಲಿ ಭಯಂಕರ ರಣಕತ್ತಲವಾಗಿ ಅಗಣಿತ ವೀರರು

ಸತ್ತರು. ಇಷ್ಟರಲ್ಲಿ ಸೂರ್ಯಾಸ್ತವಾದುದರಿಂದ ಉಭಯ ಪಕ್ಷದ ವೀರರು ತಮ್ಮ ಸೈನ್ಯಗಳನ್ನು ಕರೆದುಕೊಂಡು ತಮ್ಮ ಶಿಬಿರಗಳಿಗೆ ಹೊರಟು ಹೋದರು.

ರಾತ್ರಿ ಭೋಜನೋತ್ತರದಲ್ಲಿ ದುರ್ಯೋಧನನು ಶಕುನಿ, ಕರ್ಣ, ದುಶ್ಶ್ಯಾಸನರ ಕೂಡ ಅಪಜಯ ಮುಖದಲ್ಲಿದ್ದ ತನ್ನ ಪಕ್ಷಕ್ಕೆ ಹೇಗೆ ಜಯವನ್ನು ತಂದುಕೊಡಬೇಕೆಂದು ಆಲೋಚನೆ ಮಾಡುತ್ತ ಕುಳಿತಾಗ್ಗೆ—“ಭೀಷ್ಮನು ಓರೆಗೆ ಸರಿದುಬಿಟ್ಟರೆ ನಿನಗೆ ಜಯವನ್ನು ದೊರಕಿಸಿಕೊಡುವೆನು” ಎಂದು ಕರ್ಣನು ಮಾತಾಡಿದನು. ಇದನ್ನು ಕೇಳಿ ದುರ್ಯೋಧನನು ಒಮ್ಮೆಲೆ ಎದ್ದು ತನ್ನ ಕುದುರೆಯ ಮೇಲೆ ಕುಳಿತು, ದೀವಟಿಗೆಯನ್ನು ಹಚ್ಚಿಕೊಂಡು, ಭೀಷ್ಮನ ಬಳಿಗೆ ಹೋಗಿ ಕೈಜೋಡಿಸಿ, ಕಣ್ಣೊಳಗೆ ನೀರು ತಂದು—“ತಾತಾ, ನಿನ್ನ ಪರಾಕ್ರಮದ ಆಶ್ರಯದಿಂದ ನಮಗೆ ಇಂದ್ರನ ಕೂಡ ಸಹ ಹೋರಾಡುವಷ್ಟು ಸಾಮರ್ಥ್ಯವಿರುತ್ತದೆ. ಆದುದರಿಂದ ನೀನು ದಯಮಾಡಿ ನನ್ನ ಶತ್ರುಗಳನ್ನು ತೀವ್ರದಿಂದ ಸಂಹಾರ ಮಾಡು. ಪಾಂಡವರ ಮೇಲಿನ ಸದಯಾಂತಃಕರಣದಿಂದ ಅಥವಾ ನನ್ನ ದುರ್ದೈವದಿಂದ ನಿನ್ನ ಕೈಯು ಅವರ ಮೇಲೆ ಕಸುವಿನಿಂದ ನಡೆಯದೆ ಇದ್ದರೆ ಕರ್ಣನಿಗೆ ಅಗ್ರಗಾಮಿ (ಸೇನಾಪತಿ) ಯಾಗುವ ಅಪ್ಪಣೆಯನ್ನು ಕೊಡು. ಅವನು ನಿಸ್ಸಂಶಯದಿಂದ ಪಾಂಡವರನ್ನು ಜಯಿಸುವನು” ಎಂದು ಹೇಳಿದನು. ದುರ್ಯೋಧನನ ಈ ವಾಗ್ಬಾಣದಿಂದ ಭೀಷ್ಮನ ಮನಸ್ಸು ಬಹಳ ನೊಂದದ್ದರಿಂದ ಅವನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ಹಿಂದುಗಡೆ ಸಿಟ್ಟಿನಿಂದ—“ದುರ್ಯೋಧನಾ, ನಾನು ನಿನ್ನಗೋಸ್ಕರ ಯಥಾಶಕ್ತಿ ಪರಿಶ್ರಮ ಮಾಡುತ್ತಿದ್ದರೂ ನೀನು ನನಗೆ ವ್ಯರ್ಥವಾಗಿ ನಿನ್ನ ವಾಗ್ಬಾಣದಿಂದ ತಾಡನ ಮಾಡುವದು ಬಹಳ ಆಶ್ಚರ್ಯವಿರುತ್ತದೆ. ಗಂಧರ್ವರು ನಿನ್ನನ್ನೂ ಕರ್ಣಾದಿಗಳನ್ನೂ ಗೆದ್ದು ಕಟ್ಟಿ ಹಾಕಿದಾಗ್ಗೆ ಪಾಂಡವರು ಬಂದು ನಿಮ್ಮನ್ನು ಬಿಡಿಸಿಕೊಂಡು ಹೋದರು. ಆ ಸಂದರ್ಭದಲ್ಲಿ ಕರ್ಣನ ಸಾಮರ್ಥ್ಯವು ನಿನಗೆ ಗೊತ್ತಾಗಲಿಲ್ಲವೇ? ನಿಮ್ಮೆಲ್ಲರನ್ನು ವಿರಾಟನಗರದ ಸಮೀಪದಲ್ಲಿ ಅರ್ಜುನನು ಸೋಲಿಸಿ ನಿನ್ನ ಮೈಮೇಲಿನ ವಸ್ತ್ರಗಳನ್ನೂ, ಕರ್ಣಾದಿಗಳ ಮೈಮೇಲಿನ ವಸ್ತ್ರಗಳನ್ನೂ ಸೆಳೆದುಕೊಂಡು ಹೋಗಿ ಉತ್ತರೆಯ ಗೊಂಬೆಗೆ ಉಡಿಸಲಿಕ್ಕೆ ಕೊ

ಟ್ಟಾಗ್ಗೆ ನಿನಗೆ ಕರ್ಣನ ಪರಾಕ್ರಮದ ಪರೀಕ್ಷೆಯಾಗಲಿಲ್ಲವೇ? ಈ ಅರ್ಜು ನನ್ನು-ವಿಶೇಷವಾಗಿ ಅವನ ಸಾರಥ್ಯವನ್ನು ವಿಷ್ಣುವಿನ ಅವತಾರವಾದ ಶ್ರೀಕೃಷ್ಣನು ಸ್ವೀಕರಿಸಿದಾಗ್ಗೆ-ಯಾರು ಸೋಲಿಸಲು ಸಮರ್ಥರು? ಈ ಯಾವತ್ತು ಸಂಗತಿಗಳು ಕನ್ನಡಿಯಂತೆ ಸ್ವಚ್ಛವಾಗಿರಲು ನಿನಗೆ ನಿನ್ನ ಮೂ ರ್ಖತನದ ಸಲುವಾಗಿ ಕಾಣಿಸಲೊಲ್ಲವು. ಅದೇನೂ ಇರಲಿ. ನಾಳೆ ನಾನಾ ದರೂ ಸಾಯುವೆನು; ಅಥವಾ ಪಾಂಡವರನ್ನಾದರೂ ಕೊಲ್ಲುವೆನು. ನಾಳೆ ನಾನು ಯಾವತ್ತು ಜನರು ಸಾವಿರಾರು ವರ್ಷ ಚೆನ್ನಾಗಿ ನೆನಪಿಡುವಂತೆ ಭಯಂಕರವಾದ ಯುದ್ಧವನ್ನು ಮಾಡುವೆನು. ನಾಳೆ ನಿನ್ನ ಉದ್ದೇಶವು ಯಾ ವದಾದರೊಂದು ರೀತಿಯಿಂದ ನೆರವೇರುವದು. ಚಿಂತೆ ಮಾಡಬೇಡ. ಮನೆಗೆ ಹೋಗಿ ಸಮಾಧಾನದಿಂದ ಮಲಗಿಕೋ" ಎಂದು ಹೇಳಿದನು. ಇದನ್ನು ಕೇಳಿ ದುರ್ಯೋಧನನು ಬಹಳ ಆನಂದಪಟ್ಟು ಭೀಷ್ಮನ ಕಾಲುಗಳ ಮೇಲೆ ತನ್ನ ಹಣೆಯನ್ನಿಟ್ಟು ನಮಸ್ಕಾರ ಮಾಡಿ ತನ್ನ ಸಿಬಿರಕ್ಕೆ ಹೊರಟು ಬಂದನು.

ಮರುದಿವಸ ಅಂದರೆ ಯುದ್ಧದ ಹತ್ತನೇ ದಿವಸ ಬೆಳಿಗ್ಗೆ ಭೀಷ್ಮನು ಸಮರಾಂಗಣಕ್ಕೆ ಬಂದ ಮೇಲೆ ದುರ್ಯೋಧನನು ಆನಂದದಿಂದ ಶಂಖವನ್ನು ಊದಿ ದುಶ್ಶಾಸನನಿಗೆ--"ನಾನು ಎಷ್ಟೋ ವರ್ಷಗಳಿಂದ ನನ್ನ ಮನಸ್ಸಿನಲ್ಲಿ ಹಂಬಲಿಸುತ್ತ ಬಂದ ಪ್ರಕಾರ ಇವತ್ತಿನ ದಿವಸ ಭೀಷ್ಮನು ಪಾಂಡವರನ್ನು ಕೊಂದು ನನಗೆ ಯಾರದೂ ಕಂಟಕವಿಲ್ಲದಂತೆ ಪೃಥ್ವಿಯ ರಾಜ್ಯವನ್ನು ನಿಶ್ಚ ಯವಾಗಿ ಕೊಡುವನು. ಆದರೆ ನಾವು ಅವನನ್ನು ಶಿಖಂಡಿಯಿಂದ ಮಾತ್ರ ಉಳಿಸಬೇಕು. ಶಿಖಂಡಿಯ ಮೇಲೆ ಬಾಣ ಬಿಡುವದಿಲ್ಲೆಂದು ಅವನ ಪ್ರತಿಜ್ಞೆ ಯು ಇರುವದಾಗಿ ಅವನು ನನಗೆ ತಿಳಿಸಿರುತ್ತಾನೆ. ಆದುದರಿಂದ ಭೀಷ್ಮನನ್ನು ಶಿಖಂಡಿಯಿಂದ ರಕ್ಷಣ ಮಾಡುವದನ್ನು ನೀನು ಚೆನ್ನಾಗಿ ಲಕ್ಷ್ಯದಲ್ಲಿಡು" ಎಂ ದು ಹೇಳಿದನು. ಈ ಪ್ರಕಾರ ಈ ಇಬ್ಬರು ಬಂಧುಗಳು ಭಾಷಣ ಮಾಡುತ್ತಿರು ವಾಗ ಭೀಷ್ಮನ ರಥವು ಕೌರವರ ಧ್ವಜಸ್ತಂಭದ ಹತ್ತರ ಬಂದು ನಿಂತುಕೊಳ್ಳ ಲು, ಧೃತರಾಷ್ಟ್ರನ ಮಕ್ಕಳು ಅವನ ರಥದ ಸುತ್ತಲು ನೆರೆದರು. ಆಗ ಪ್ರತಿ ದಿವಸದಂತೆ ಯಮನ ರಾಷ್ಟ್ರವನ್ನು ಬೆಳೆಸುವ ಭಯಂಕರ ಯುದ್ಧವು ಆರಂಭ ವಾಯಿತು. ಭೀಷ್ಮನು ತಾನು ಪರಶುರಾಮನ ಕಡೆಯಿಂದ ಪಡೆದುಕೊಂಡ

ಅಸ್ತ್ರಬಲದಿಂದ ಪಾಂಡವ ಸೈನ್ಯದ ಸಂಹಾರವನ್ನು ಮಾಡಲಿಕ್ಕೆ ಹತ್ತಿದನು. ಆ ದಿವಸ ಅವನು ಐದು ಸಾವಿರ ರಥಗಳನ್ನು, ಹತ್ತು ಸಾವಿರ ಆನೆಗಳನ್ನು, ಹತ್ತು ಸಾವಿರ ಕುದುರೆಗಳನ್ನು ಮತ್ತು ಹದಿನಾಲ್ಕು ಸಾವಿರ ಕಾಲಬಲವನ್ನು ಕೊಂದು ಏಳು ಮಂದಿ ಮಹಾರಥಿಗಳನ್ನು ಕೊಂದನು. ಈ ಪ್ರಕಾರ ಭೀಷ್ಮನು ಪರಾಕ್ರಮ ಮಾಡುತ್ತ ಆವೇಶದಿಂದ ಕೌರವ ಸೈನ್ಯದಕಿಂತ ಬಹಳ ಮುಂದೆ ಬರಲು ಅವನ ರಕ್ಷಕರು ಬಹಳ ದೂರ ಉಳಿದರು. ಈ ಪ್ರಸಂಗವನ್ನು ಸಾಧಿಸಿ ಶ್ರೀಕೃಷ್ಣನು ಅರ್ಜುನನಿಗೆ--"ಅರ್ಜುನಾ, ಈ ಸಮಯದಲ್ಲಿ ಭೀಷ್ಮನನ್ನು ನಾಲ್ಕೂ ಕಡೆಯಿಂದ ಮುತ್ತಿಕೊಂಡು ಅವನನ್ನು ಕೊಲ್ಲುವದು ಸರಿಯಾದದ್ದು. ಇಂಥ ಪ್ರಸಂಗವು ನಿನಗೆ ತಿರುಗಿ ದೊರಕಲಾರದು" ಎಂದು ಸೂಚಿಸಿದನು. ಕೂಡಲೆ ಅರ್ಜುನನು ಶಿಖಂಡಿಯ ರಥವನ್ನು ಮುಂದೆ ಮಾಡಿ ತಾನು ಅವನ ಹಿಂದೆ ನಿಂತುಕೊಂಡು ಭೀಷ್ಮನ ಮೇಲೆ ಬಾಣಗಳನ್ನು ಬಿಟ್ಟನು. ಶಿಖಂಡಿಯೂ ಭೀಷ್ಮನ ಮೇಲೆ ಬಾಣಗಳನ್ನು ಬಿಟ್ಟನು. ಸಾತ್ಯಕಿ, ಧೃಷ್ಟದ್ಯುಮ್ನ, ವಿರಾಟ, ದ್ರುಪದ, ನಕುಲ, ಸಹದೇವ, ಅಭಿಮನ್ಯು ಮತ್ತು ಕೆಲವು ವೀರರು ಕೂಡಿಕೊಂಡು ನಾಲ್ಕೂ ಕಡೆಯಿಂದ ಅವನನ್ನು ಸುತ್ತು ಹಾಕಿ ಅವನ ಮೇಲೆ ಬಾಣಗಳನ್ನು ಬಿಟ್ಟರು. ಭೀಷ್ಮನು ತನ್ನ ಎದುರಾಗಿ ಶಿಖಂಡಿಯು ನಿಂತುಕೊಂಡದ್ದನ್ನು ನೋಡಿ ತನ್ನ ಧನುಷ್ಯವನ್ನು ಕೆಳಗೆ ಇಟ್ಟನು. ಆಗ ನಾಲ್ಕೂ ಕಡೆಯಿಂದ ನೂರಾರು ಬಾಣಗಳು ಭೀಷ್ಮನ ಮೈಮೇಲೆ ಹೋಗಿ ಬೀಳಲಾಗಿ ಅವನ ಕವಚವು ಹರಿದು ಹೋಗಿ ಅವನ ಕವಚದೊಳಗೆ ಆ ಬಾಣಗಳು ಹೊಕ್ಕವು. ಇದನ್ನು ನೋಡಿ ಭೀಷ್ಮನು— "ಅಯ್ಯೋ, ಈ ಬಾಣಗಳು ಶಿಖಂಡಿಯವು ಅಲ್ಲ. ಇವು ಅರ್ಜುನನ ಬಾಣಗಳಿದ್ದು ನನ್ನ ಮರ್ಮಸ್ಥಾನಗಳಿಗೆ ಬಹು ವೇದನೆ ಕೊಡುತ್ತಿರುವವು" ಎಂದು ನುಡಿದು ತನ್ನ ಧನುಷ್ಯವನ್ನು ಮೇಲಕ್ಕೆ ಎತ್ತಲಾಗಿ ಅರ್ಜುನನು ಅವನ ಧನುಷ್ಯವನ್ನು ಮುರಿದು ಬಿಟ್ಟನು. ಈ ಪ್ರಕಾರ ಭೀಷ್ಮನು ತೆಗೆದುಕೊಂಡ ಎಷ್ಟೋ ಧನುಷ್ಯಗಳನ್ನು ಅರ್ಜುನನು ಮುರಿದನು. ಈ ಅವಧಿಯಲ್ಲಿ ಅರ್ಜುನನ ಮತ್ತು ಇತರ ವೀರರ ನೂರಾರು ಬಾಣಗಳು ಭೀಷ್ಮನ ಮೈಯಲ್ಲಿ ಸೇರಿಹೋದವು. ಅವನ ಮೈಯಲ್ಲಿ ಬಾಣಗಳು ಸೇರದೆ ಇದ್ದಂಥ ಸ್ಥಳವು ಎರಡು ಬೆರಳು

ಸಹ ಉಳಿಯಲಿಲ್ಲ. ಕಡೆಗೆ ಅವನು ಬಹಳ ಕಸವಿಸಿಪಟ್ಟು ಸೂರ್ಯನು ತನ್ನ ತಾಯಿಯ ಹೊಟ್ಟೆಯೊಳಗೆ ಹೋಗುವ ಕಾಲಕ್ಕೆ ಪೂರ್ವದ ಕಡೆಗೆ ತಲೆ ಮಾಡಿ ಕೆಳಗೆ ಬಿದ್ದುಕೊಂಡನು. ಆದರೆ ಅವನ ಮೈತುಂಬ ಬಾಣಗಳು ನೆಟ್ಟದ್ದರಿಂದ ಅವನ ತಲೆಯು ಭೂಮಿಗೆ ಹತ್ತದೆ ಅಂತರವಾಗಿ ಉಳಿಯಿತು. ಆ ಕಾಲಕ್ಕೆ ಭೂಕಂಪವಾಗಿ ಮಳೆಯು ಸುರಿಯಹತ್ತಿತು. ಪಾಂಡವರ ಸೈನ್ಯದಲ್ಲಿ ಪ್ರಚಂಡ ಜಯಘೋಷವಾಗಹತ್ತಿತು. ಇದನ್ನು ಅಲ್ಲಿ ಹಿಂದೆ ಇದ್ದ ದುರ್ಯೋಧನನು ನೋಡಿ ಏನಾದರೂ ಅನಿಷ್ಟವು ಸಂಭವಿಸಿದ್ದೀತೆಂದು ತಿಳಿದು ಕಣ್ಣೀರು ಸುರಿಸಿದನು. ಕೌರವರೆಲ್ಲರು ತಮ್ಮ ಆಧಾರಸ್ತಂಭವು ಮುರಿದು ಹೋಯಿತೆಂದು ಬಹಳ ದುಃಖ ಮಾಡಿ ಅಳಹತ್ತಿದರು. ಈ ವರ್ತಮಾನವನ್ನು ದುಶ್ಯಾಸನನು ಎರಡನೆ ಕಡೆಗೆ ಯುದ್ಧ ಮಾಡುತ್ತಿದ್ದ ದ್ರೋಣನ ಬಳಿಗೆ ಹೋಗಿ ಹೇಳಲಾಗಿ ಅವನೂ ತನ್ನ ಶಸ್ತ್ರವನ್ನು ಕೆಳಗೆ ಇಟ್ಟುಕೊಟ್ಟು ಶೋಕ ಮಾಡುತ್ತ ಭೀಷ್ಮನ ಹತ್ತರ ಬಂದನು. ಯುದ್ಧವು ನಾಲ್ಕೂ ಕಡೆಗೆ ನಿಂತು ಹೋಗಿ ಎರಡೂ ಕಡೆಯ ಪ್ರಮುಖ ವೀರರು ಕೈಮುಗಿದುಕೊಂಡು ಭೀಷ್ಮನ ಬಳಿಗೆ ಬಂದರು. ದಿವ್ಯರೂಪವನ್ನು ಹೊಂದಿದ ಭೀಷ್ಮನು ಸೂರ್ಯನು ದಕ್ಷಿಣಾಯನದಲ್ಲಿದ್ದು ಉತ್ತರಾಯಣದ ಕಡೆಗೆ ಬರುವ ದಾರಿಯನ್ನು ನೋಡುತ್ತಿದ್ದ ಕಾರಣ ಅವನ ಜೀವವು ಇನ್ನೂ ದೇಹದಲ್ಲಿದ್ದು ಅವನ ತಲೆಯು ನೇತಾಡುತ್ತಿತ್ತು. ಇದನ್ನು ನೋಡಿ ಎಷ್ಟೋ ಜನರು ಅವನ ತಲೆಯ ಕೆಳಗೆ ದೊಡ್ಡ ದೊಡ್ಡ ದಿಂಬುಗಳನ್ನು ಕೊಡಲಿಕ್ಕೆ ಹೋದರು. ಆದರೆ ಆ ಮಹಾತ್ಮನು ಅವುಗಳನ್ನು ತೆಗೆದುಕೊಳ್ಳಲಿಲ್ಲ. ಆಗ ಅರ್ಜುನನು ಅಲ್ಲಿ ಕುಳಿತು ಮೂರು ಬಾಣಗಳನ್ನು ಬಿಟ್ಟು ಅವುಗಳಿಂದ ಭೀಷ್ಮನ ತಲೆಯು ನೇತಾಡುವದನ್ನು ನಿಲ್ಲಿಸಿದನು. ದೊಡ್ಡ ದೊಡ್ಡ ವೈದ್ಯರು ಭೀಷ್ಮನ ಮೈಯೊಳಗಿನ ಬಾಣಗಳನ್ನು ಹೊರಗೆ ತೆಗೆದು ಅವನ ಚಿಕಿತ್ಸೆ ಮಾಡಲಿಕ್ಕೆ ಬಂದಿದ್ದರು. ಆದರೆ ಅವರಿಗೆ ಮೆಚ್ಚು ಕೊಟ್ಟು ತಿರುಗಿ ಕಳಿಸೆಂದು ಭೀಷ್ಮನು ದುರ್ಯೋಧನನಿಗೆ ಹೇಳಿದನು. ಇದಲ್ಲದೆ ಅವನು ದುರ್ಯೋಧನನಿಗೆ—"ನನ್ನ ಕಳೇಬರವು ಸೂರ್ಯನು ಉತ್ತರಾಯಣದಲ್ಲಿ ಬರುವ ತನಕ ಬಾಣಗಳ ಹಾಸಿಗೆಯ ಮೇಲೆ ಇರಲಿ. ನಾನು ನನ್ನ ತಂದೆಯ ಆಶೀರ್ವಾದದಿಂದ ಇಚ್ಛಾಮರಣಿಯು ಇರುತ್ತೇನೆ. ಆದರೆ ಅರ್ಜು

ನನ ಪರಾಕ್ರಮವನ್ನು ಈಗ ನೀನು ಮನಗಂಡಿರುವೆ. ಇನ್ನಾದರೂ ನೀನು ಈ ಯುದ್ಧವನ್ನು ಮುಗಿಸಿ ಪಾಂಡವರ ರಾಜ್ಯವನ್ನು ಪಾಂಡವರಿಗೆ ಕೊಟ್ಟು ಬಿಡು. ಹಾಗೂ ಈಗ ಯುದ್ಧದಲ್ಲಿ ಜೀವದಿಂದ ಉಳಿದಿರುವ ವೀರರನ್ನು ಅವರವರ ಮನೆಗೆ ಆನಂದದಿಂದ ಕಳಿಸಿಕೊಡು" ಎಂದು ಹೇಳಿದನು. ಆದರೆ ಅದಕ್ಕೆ ದುರ್ಯೋಧನನು ಏನೂ ಉತ್ತರ ಕೊಡಲಿಲ್ಲ. ಇದನ್ನು ನೋಡಿ ಭೀಷ್ಮನು ಕಣ್ಣು ಮುಚ್ಚಿದನು. ಕಡೆಗೆ ಎರಡೂ ಪಕ್ಷದ ರಾಜರೂ ಮಹಾರಥಿಗಳೂ ಭೀಷ್ಮನಿಗೆ ನಮಸ್ಕಾರ ಮಾಡಿ ದುಃಖದಿಂದ ಉಸುರುಗಳೆಯುತ್ತ ತಮ್ಮ ತಮ್ಮ ಶಿಬಿರುಗಳಿಗೆ ತಿರುಗಿ ಹೊರಟು ಹೋದರು.

ಕರ್ಣನು ಪಾಂಡವರನ್ನು ಕೊಲ್ಲುವನೆಂಬ ವಿಶ್ವಾಸವು ದುರ್ಯೋಧನನಿಗೆ ಮೊದಲಿನಿಂದಲೂ ಇತ್ತು. ಭೀಷ್ಮನು ಸೇನಾಪತಿಯಾಗಿರುವ ತನಕ ತಾನು ರಣಾಂಗಣದಲ್ಲಿ ಬಂದು ಯುದ್ಧ ಮಾಡುವದಿಲ್ಲೆಂದು ಕರ್ಣನು ಪ್ರತಿಜ್ಞೆಯನ್ನು ಮಾಡಿ ಹಿಂದೆ ಉಳಿದಿದ್ದನು. ಈಗ ಭೀಷ್ಮನ ತರುವಾಯ ಅಂದರೆ ಯುದ್ಧದ ಹನ್ನೊಂದನೇ ದಿವಸ ಕರ್ಣನು ಯುದ್ಧ ಮಾಡಲಿಕ್ಕೆ ಸಿದ್ಧನಾದುದನ್ನು ಕಂಡು ದುರ್ಯೋಧನನಿಗೂ, ಅವನಂತೆ ಕರ್ಣನ ಬಗ್ಗೆ ವಿಶ್ವಾಸವಿದ್ದ ಜನರಿಗೂ ಬಹಳ ಆನಂದವಾಯಿತು. ಭೀಷ್ಮನ ತರುವಾಯ ಕರ್ಣನನ್ನೇ ಸೇನಾಪತಿಯಾಗಿ ಮಾಡಬೇಕೆಂದು ದುರ್ಯೋಧನನು ಯೋಚಿಸಿರಲು, ಕರ್ಣನು– "ಮಹಾರಥಿ ದ್ರೋಣಾಚಾರ್ಯನು ನಮ್ಮಲ್ಲಿ ಇರುವಾಗ ಎರಡನೆಯವರಿಗೆ ಸೇನಾಧಿಪತಿಯಾಗಿ ಮಾಡುವದು ಉಚಿತವಲ್ಲ" ಎಂದು ದುರ್ಯೋಧನನಿಗೆ ಹೇಳಿದನು. ಆದುದರಿಂದ ದುರ್ಯೋಧನನು ಕರ್ಣನ ಮತದ ಪ್ರಕಾರ ದ್ರೋಣನ ಕಡೆಗೆ ಹೋಗಿ—"ನೀವೇ ವರ್ಣಶ್ರೇಷ್ಠತೆಯಿಂದ, ಶೃತಿಯಿಂದ, ವಯಸ್ಸಿನಿಂದ, ಬುದ್ಧಿಯಿಂದ, ವೀರ್ಯದಿಂದ, ತಪಸ್ಸಿನಿಂದ, ಅಸ್ತ್ರವಿದ್ಯೆಯಿಂದ, ಸಾರಾಂಶ ಅನೇಕ ಗುಣಗಳಿಂದ ನಮ್ಮ ಸೇನಾಪತಿಯಾಗಲಿಕ್ಕೆ ಯೋಗ್ಯರಿರುತ್ತೀರಿ" ಎಂದು ಅವನ ಸ್ತುತಿಯನ್ನು ಮಾಡಿ ಅವನಿಗೆ ಸೇನಾಧಿಪತ್ಯದ ಅಭಿಷೇಕವನ್ನು ಮಾಡಿಸಿದನು. ಇದರಿಂದ ದ್ರೋಣನು ಸಂತೋಷಪಟ್ಟು—"ದುರ್ಯೋಧನಾ, ನಾನು ನಿನ್ನ ಮೇಲೆ ಪ್ರಸನ್ನನಾಗಿರುತ್ತೇನೆ. ಬೇಕಾದ ವರವನ್ನು ಕೇಳಿಕೋ" ಎಂದು ನುಡಿ

ದನು. ಆಗ ದುರ್ಯೋಧನನು—"ಧರ್ಮನನ್ನು ಜೀವಂತ ಹಿಡಿದು ನನ್ನ ಕಡೆಗೆ ತೆಗೆದುಕೊಂಡು ಬರಬೇಕು" ಎಂದು ಹೇಳಿದನು. ಅದಕ್ಕೆ ದ್ರೋಣಾ ಚಾರ್ಯನು -"ಜೀವಂತ ತರಬೇಕೆಂದು ಏಕೆ ಅನ್ನುತ್ತಿ ? ಕೊಂದು ತರಬೇ ಕೆಂದು ಏಕೆ ಅನ್ನಲಿಲ್ಲ?" ಎಂದು ಕೇಳಿದನು. ಆಗ ದುರ್ಯೋಧನನು— "ಧರ್ಮನು ಸತ್ತರೂ ಭೀಮಾರ್ಜುನರು ಜೀವದಿಂದ ಇರುವರಲ್ಲವೇ? ಅದುದ ರಿಂದ ನೀವು ಧರ್ಮನನ್ನು ಜೀವಂತ ಹಿಡಿದು ನನ್ನ ಕಡೆಗೆ ಕೊಟ್ಟರೆ ಅವ ನನ್ನು ಪುನಃ ದ್ಯೂತವಾಡಲಿಕ್ಕೆ ಹಚ್ಚಿ ಅವನನ್ನೂ ಅವನ ತಮ್ಮಂದಿರ ನ್ನೂ ಪುನಃ ವನವಾಸಕ್ಕೆ ಕಳಿಸಿಕೊಡುವೆನು" ಎಂದು ಹೇಳಿದನು. ಇದನ್ನು ಕೇಳಿ ದ್ರೋಣನಿಗೆ ಬಹಳ ವ್ಯಸನವಾಯಿತು. ಆದರೂ ಅವನು ತಾನು ನುಡಿದಂತೆ ವರವನ್ನು ಕೊಡಬೇಕೆಂದು ಮನಸ್ಸಿನಲ್ಲಿ ವಿಚಾರ ಮಾಡಿ— "ಅರ್ಜುನನು ಧರ್ಮನನ್ನು ರಕ್ಷಣ ಮಾಡದಿದ್ದರೆ ನಾನು ಧರ್ಮನನ್ನು ಹಿಡಿ ದುಕೊಂಡು ಬಂದು ನಿನಗೆ ಒಪ್ಪಿಸುವೆನು" ಎಂದು ಹೇಳಿದನು. ಈ ಪ್ರಕಾರ ಭಾಷಣವಾದ ಬಳಿಕ ಯುದ್ಧವು ಆರಂಭವಾಯಿತು. ದ್ರೋಣನು ಸಮರಾಂಗ ಣದ ಮಧ್ಯಭಾಗದಲ್ಲಿ ನಿಂತುಕೊಂಡನು. ಆ ಹೊತ್ತು ಕರ್ಣನು ಸಹ ಸಮ ರಾಂಗಣಕ್ಕೆ ಬಂದು ಅಗ್ರಭಾಗದಲ್ಲಿ ನಿಂತುಕೊಂಡನು. ಕೌರವ ಸೈನ್ಯದವರು ಕರ್ಣನನ್ನು ಕಂಡು ಬಹಳ ಆನಂದಪಟ್ಟರು. ಭೀಷ್ಮನು ಪಾಂಡವರ ಮೇಲೆ ದಯವನ್ನು ತೋರಿಸಿದಂತೆ ಕರ್ಣನು ಎಂದಿಗೂ ತೋರಿಸುವದಿಲ್ಲೆಂಬ ವಿಶ್ವಾ ಸದಿಂದ ಅವರಿಗೆ ವಿಶೇಷ ರಣೋತ್ಸಾಹವು ಹುಟ್ಟಿತು. ಆದುದರಿಂದ ಕೌರವ ಸೈನಿಕರು ಮತ್ತು ವೀರರು ಮುಂಚಿನಕಿಂತ ಹೆಚ್ಚು ಆವೇಶದಿಂದ ಯುದ್ಧ ಮಾಡಿದರು. ದ್ರೋಣಕರ್ಣರ ಪರಾಕ್ರಮದಿಂದ ಪಾಂಡವ ಸೈನ್ಯದ ಹಾ ನಿಯು ವಿಶೇಷವಾಯಿತು. ಯುಧಿಷ್ಠಿರನ ಹತ್ತಿರ ಇದ್ದಂಥ ಸೈನ್ಯವು ಬಹಳ ನಾಶವಾಗಿ ಯುಧಿಷ್ಠಿರನ ಕಡೆಗೆ ಬಹಳ ಮಂದಿ ವೀರರು ಇರದೆ ಇದ್ದಂಥ ಸಮಯದಲ್ಲಿ ದ್ರೋಣನು ತನ್ನ ರಥವನ್ನು ತೆಗೆದುಕೊಂಡು ಹೋಗಿ ಅವನ ರಥದ ಎದುರಿಗೆ ನಿಲ್ಲಿಸಿದನು. ಆಗ ಪಾಂಡವರ ಸೈನ್ಯದ ಮಧ್ಯದಲ್ಲಿ "ಧರ್ಮ ರಾಜನು ಸತ್ತನು" ಎಂಬದಾಗಿ ಹಾಹಾಕಾರವು ಉತ್ಪನ್ನವಾಯಿತು. ಶ್ರೀ ಕೃಷ್ಣನು ದೂರಿಂದ ಈ ಕೂಗನ್ನು ಕೇಳಿ ಅರ್ಜುನನ ರಥವನ್ನು ತಂದು

ದ್ರೋಣನ ರಥಕ್ಕೆ ಎದುರಾಗಿ ನಿಲ್ಲಿಸಿ, ಧರ್ಮನನ್ನು ಆಗಿನ ಸಂಕಟದಿಂದ ಬಿಡುಗಡೆ ಮಾಡಿದನು. ಮರುದಿವಸ ಅಂದರೆ ಯುದ್ಧದ ಹನ್ನೆರಡನೆ ದಿವಸ ದುರ್ಯೋಧನನ ಸೂಚನೆಯ ಮೇರೆಗೆ ಸಂಸಪ್ತಕ ವೀರರು ಅರ್ಜುನನಿಗೆ ಯುದ್ಧಕ್ಕೆ ಆವ್ಹಾನ ಮಾಡಿ ಅವನನ್ನು ಸಮರಾಂಗಣದ ದಕ್ಷಿಣ ಕಡೆಗೆ ದೂರ ಕರೆದುಕೊಂಡು ಹೋಗಿ ಅವನ ಕೂಡ ಸ್ವತಂತ್ರ ಯುದ್ಧವನ್ನು ನಡೆಸಿದರು. ಆಗ ದ್ರೋಣನು ಪಾಂಡವ ಸೈನ್ಯದ ಮೇಲೆ ಸಾಗಿ ಹೋಗಿ ಧರ್ಮನನ್ನು ನಿರ್ವಿಣ್ಯ ಮಾಡಬೇಕೆಂದು ಅವನ ರಥದ ಕಡೆಗೆ ನಡೆದನು. ಇದನ್ನು ನೋಡಿ ಪಾಂಚಾಲ ದೇಶದ ಸತ್ಯಜಿತನು ದ್ರೋಣನನ್ನು ಅಡ್ಡಗಟ್ಟಲಾಗಿ ದ್ರೋಣನು ಅವನ ಮೇಲೆ ಬಾಣಗಳನ್ನು ಬಿಟ್ಟು ಅವನನ್ನು ಕೊಂದನು. ಇದರಂತೆ ಧರ್ಮನ ಸಂರಕ್ಷಣಾರ್ಥವಾಗಿ ಅಲ್ಲಿಗೆ ಬಂದ ಪಾಂಚಾಲ, ಕೇಕಯ, ಮತ್ಸ್ಯ, ಚೇದಿ, ಕಾರುಷ ಮುಂತಾದ ಸೈನಿಕರು ಓಡಿ ಬಂದರು. ಅವರನ್ನೂ ದ್ರೋಣನು ಸೋಲಿಸಿದನು. ಆಗ ಧರ್ಮರಾಜನು ರಣಭೂಮಿಯನ್ನು ಬಿಟ್ಟು ಹೊರಟು ಹೋದನು. ಇತ್ತಲಾ ಭೀಮನ ಮತ್ತು ಪ್ರಾಗ್ಜ್ಯೋತಿಷರ ಅರಸನಾದ ಭಗದತ್ತನ ನಡುವೆ ಯುದ್ಧವು ನಡೆಯಿತು. ಭೀಮನು ಭಗದತ್ತನ ಗಜಸೈನಿಕರ ಸಂಗಡ ಭಯಂಕರ ಯುದ್ಧವನ್ನು ಮಾಡಿದನು. ಆದರೆ ಭೀಮನಿಂದ ಭಗದತ್ತನನ್ನು ಸೋಲಿಸುವದು ಆಗಲಿಲ್ಲ. ಸಾಯಂಕಾಲದ ಹೊತ್ತಿಗೆ ಅರ್ಜುನನು ಸಂಸಪ್ತಕ ವೀರರನ್ನು ನಾಶಪಡಿಸಿ ತಿರುಗಿ ಬರುತ್ತಿದ್ದನು. ಆ ಕಾಲಕ್ಕೆ ಅರ್ಜುನನು ಭಗದತ್ತನ ವೀರಗರ್ಜನೆಯನ್ನು ಕೇಳಿ ಅವನ ಕಡೆಗೆ ತಿರುಗಿದನು. ಅರ್ಜುನನು ಬರಲಾಗಿ ಭಗದತ್ತನು ತನ್ನ ಆನೆಯನ್ನು ಅವನ ಮೈಮೇಲೆ ಸಾಗಿಸಿದನು. ಆ ಆನೆಯು ಬಹಳ ಬಲಾಢ್ಯವಿದ್ದು ಯುದ್ಧ ಮಾಡುವಲ್ಲಿ ನುರಿತದ್ದರಿಂದ ಅದು ಎಷ್ಟು ಯುದ್ಧ ಮಾಡಿದರೂ ಅದಕ್ಕೆ ಶ್ವಾಸ ಹತ್ತುತ್ತಿದ್ದಿಲ್ಲ. ಮತ್ತು ಅದು ಶಸ್ತ್ರಗಳಿಗೆ ಅಥವಾ ಅಗ್ನಿಗೆ ಏನೂ ಲಕ್ಷಿಸುತ್ತಿದ್ದಿಲ್ಲ. ಅದರ ಮೈಮೇಲೂ ತಲೆಯ ಮೇಲೂ ಕವಚವನ್ನು ಹಾಕಿ ಅದರ ಸೊಂಡಿಯಲ್ಲಿ ಸರಪಳಿಯ ಕೋಲನ್ನು ಕೊಟ್ಟಿತ್ತು. ಇಂಥ ಉನ್ಮತ್ತವಾದ ಆನೆಯು ಅರ್ಜುನನ ಮೈಮೇಲೆ ಸಾಗಿ ಹೋಗಲಾಗಿ ಅರ್ಜುನನು ತನ್ನ ಬಾಣವನ್ನು ಬಹಳ ಕಸುವಿನಿಂದ ಎಸೆಯಲು ಆ ಬಾಣವು ಆ ಆನೆಯ ಕವಚವನ್ನು ಒಡೆದು ಅದರ ಹಣೆಯೊಳಗೆ ಆಳವಾಗಿ

ಹೊಕ್ಕಿತು. ಇತ್ತಲಾ ಭಗದತ್ತನು ತನ್ನ ಅಂಕುಶಕ್ಕೆ ವೈಷ್ಣವಾಸ್ತ್ರವನ್ನು ಅಭಿಮಂತ್ರಿಸಿ ಅದನ್ನು ಅರ್ಜುನನ ಮೇಲೆ ಒಗೆದನು. ಆದರೆ ಅದೇ ವೇಳೆಗೆ ಆ ಆನೆಯು ಜೋಲಿಯನ್ನು ಹೊಡೆದದ್ದರಿಂದ ಆ ಅಂಕುಶವು ಶ್ರೀಕೃಷ್ಣನ ಎದೆಗೆ ತಟ್ಟಿತು. ಆದುದರಿಂದ ಆ ವೈಷ್ಣವಾಸ್ತ್ರದ ಆಟವು ಪ್ರತ್ಯಕ್ಷ ವಿಷ್ಣುವಿನ ಮೇಲೆ ಏನೂ ನಡೆಯದೆ ಇದ್ದ ಕಾರಣ ಅದು ಒಂದು ಹೂವಿನ ಮಾಲೆಯಷ್ಟು ಹೌರಗೆ ಒಡಿದು ಕೆಳಗೆ ಬಿತ್ತು. ಆಗ ಭಗದತ್ತನು ಸಿಟ್ಟಿಗೆದ್ದು ಅರ್ಜುನನ ಮೇಲೆ ತನ್ನ ಆನೆಯನ್ನು ನಡೆಸಬೇಕೆಂದು ಯತ್ನಿಸಿದನು. ಆದರೆ ಆ ಆನೆಯು ಬಹಳ ನಿರ್ವಿಣ್ಣವಾಗಿ ಅದರ ಸಾಮರ್ಥ್ಯವು ಮೊದಲೇ ಹೊರಟು ಹೋಗಿದ್ದರಿಂದ ಅದು ಮುಂದೆ ಹೆಜ್ಜೆಯನ್ನಿಡಲಿಲ್ಲ. ಕೊನೆಗೆ ಅದು ಧುಪ್ಪನೆ ನೆಲಕ್ಕೆ ಬಿದ್ದು ಸತ್ತಿತು. ಇಷ್ಟರಲ್ಲಿ ಅರ್ಜುನನು ಭಗದತ್ತನ ಮೇಲೆ ಬಾಣಗಳನ್ನು ಬಿಟ್ಟು ಅವನನ್ನು ಕೊಂದನು. ಈ ಪ್ರಕಾರ ಆ ಆನೆಯೂ ಅದರ ಮೇಲೆ ಕುಳಿತಿದ್ದ ಭಗದತ್ತನೂ ಒಂದೇ ವೇಳೆಗೆ ಸತ್ತ ತರುವಾಯ ಸೂರ್ಯಾಸ್ತವಾದ್ದರಿಂದ ಎರಡೂ ಕಡೆಯ ಸೇನಾಪತಿಗಳು ತಮ್ಮ ತಮ್ಮ ಸೈನ್ಯವನ್ನು ತೆಗೆದುಕೊಂಡು ತಮ್ಮ ಶಿಬಿರುಗಳಿಗೆ ಹೊರಟು ಹೋದರು.

ಯುದ್ಧದ ಹದಿಮೂರನೇ ದಿವಸ ಸಹ ದ್ರೋಣನಿಗೆ ತನ್ನ ಪ್ರತಿಜ್ಞೆಯನ್ನು ಕೊನೆಗಾಣಿಸಲಿಕ್ಕೆ ಆಗಲಿಲ್ಲ. ಆದುದರಿಂದ ದ್ರೋಣನು ಹದಿನಾಲ್ಕನೇ ದಿವಸ ವಿಲಕ್ಷಣವಾದ ಚಕ್ರವ್ಯೂಹವನ್ನು ರಚಿಸಿ ಈ ದಿನ ತನಗೆ ಧರ್ಮನು ಸಿಗದಿದ್ದರೂ ತಾನು ಎರಡನೆ ಯಾವನಾದರೊಬ್ಬ ಮಹಾರಥಿಕನನ್ನು ಕೊಲ್ಲುತ್ತೇನೆಂದು ದುರ್ಯೋಧನನಿಗೆ ಆಶ್ವಾಸನ ಕೊಟ್ಟನು. ಆ ಬಳಿಕ ಅವನು ಇತರ ಸಂಸಪ್ತಕ ವೀರರ ಕಡೆಯಿಂದ ಅರ್ಜುನನಿಗೆ ಆವ್ಹಾನ ಮಾಡಿಸಿ ಅವನನ್ನು ಯುದ್ಧಕ್ಷೇತ್ರದಿಂದ ಎರಡನೆ ಕಡೆಗೆ ಸ್ವತಂತ್ರ ಯುದ್ಧ ಮಾಡಲಿಕ್ಕೆ ಕರೆದೊಯ್ಯುವಂತೆ ಮಾಡಿದ ಬಳಿಕ ತಾನು ಪಾಂಡವರ ಮೇಲೆ ಸಾಗಿ ಹೋದನು. ಆದುದರಿಂದ ಪಾಂಡವ ಸೈನ್ಯದ ಗತಿಯು ಕುಂಠಿತವಾಯಿತು. ಭೀಮ, ಧೃಷ್ಟದ್ಯುಮ್ನ ಮೊದಲಾದ ವೀರರ ಆಟವು ಚಕ್ರವ್ಯೂಹದ ಮೇಲೆ ನಡೆಯಲಿಲ್ಲ. ಆಗ ಧರ್ಮನು ಅಭಿಮನ್ಯುವಿಗೆ ಚಕ್ರವ್ಯೂಹದಲ್ಲಿ ಪ್ರವೇಶ ಮಾಡಲಿಕ್ಕೆ ಹೇಳಿದನು. ಅದಕ್ಕೆ ಅಭಿಮನ್ಯುವು—“ನಾನು ಚಕ್ರವ್ಯೂಹದಲ್ಲಿ ಪ್ರವೇಶ ಮಾಡಲಿಕ್ಕೆ

ಮಾತ್ರ ಕಲಿತಿದ್ದೇನೆ. ಆದರೆ ಅದರಿಂದ ತಿರುಗಿ ಬರುವದು ನನಗೆ ಸಾಧ್ಯವಾಗಲಾರದು" ಎಂದು ಹೇಳಿದನು. ಅದಕ್ಕೆ ಭೀಮ, ಧೃಷ್ಟದ್ಯುಮ್ನ ಮೊದಲಾದ ವೀರರು-"ನಾವು ನಿನ್ನ ಬೆನ್ನಗುಂಟ ಬರುತ್ತೇವೆ" ಎಂದು ಧೈರ್ಯ ಹೇಳಿದರು. ಆಗ ಅಭಿಮನ್ಯುವು ಪರಾಕ್ರಮದಿಂದ ಚಕ್ರವ್ಯೂಹದಲ್ಲಿ ಹೊಕ್ಕು ದ್ರೋಣನ ಮೇಲೆ ಸಾಗಿ ಹೋದನು. ದ್ರೋಣನು ಅಭಿಮನ್ಯುವಿಗೆ ಒಳಗೆ ಬರಲಿಕ್ಕೆ ಅಡ್ಡಿಯನ್ನು ಮಾಡಲಿಲ್ಲ. ಭೀಮ, ಧೃಷ್ಟದ್ಯುಮ್ನ ಮೊದಲಾದ ಯಾದವರು ಆ ವ್ಯೂಹದಲ್ಲಿ ಸ್ವಲ್ಪ ಮುಂದೆ ಹೋಗಲು ಜಯದ್ರಥನು ಅವರನ್ನು ಅಡ್ಡಗಟ್ಟಿ ಅವರಗೂಡ ಭಯಂಕರವಾದ ಯುದ್ಧವನ್ನು ಮಾಡಲಿಕ್ಕೆ ಹತ್ತಲಾಗಿ ಅವರಿಗೆ ಅಭಿಮನ್ಯುವಿನ ಬೆನ್ನಗುಂಟ ಹೋಗುವದು ಶಕ್ಯವಾಗಲಿಲ್ಲ. ಇದರಿಂದ ಅಭಿಮನ್ಯುವು ಒಬ್ಬನೇ ಶತ್ರುಸೈನ್ಯದ ಚಕ್ರದಲ್ಲಿ ಸಿಗಬೇಕಾಯಿತು. ಆ ಮಹಾರಥಿಯು ಶ್ರೀಕೃಷ್ಣನ ಕೈಕೆಳಗೆ ಶಸ್ತ್ರಾಸ್ತ್ರಗಳ ಶಿಕ್ಷಣವನ್ನು ಪಡೆದದ್ದರಿಂದ ಹೆದರದೆ ದಿವ್ಯ ಪರಾಕ್ರಮದಿಂದ ಯುದ್ಧ ಮಾಡಿ ಸಾವಿರಾರು ವೀರರನ್ನು ಕೊಂದದ್ದಲ್ಲದೆ ದುರ್ಯೋಧನನ ಮಗನಾದ ಲಕ್ಷ್ಮಣನನ್ನು ಸಹ ಕೊಂದನು. ಇದರಿಂದ ದುರ್ಯೋಧನನು ಬಹಳ ಸಿಟ್ಟಿಗೆದ್ದು 'ಕೊಲ್ಲರಿ' 'ಕೊಲ್ಲರಿ' ಎಂದು ಕೂಗುತ್ತ ಅಭಿಮನ್ಯುವಿನ ಮೇಲೆ ಸಾಗಿ ಹೋದನು. ದುರ್ಯೋಧನನ ಸಹಾಯಕ್ಕೆ ಕೃಪ, ಕರ್ಣ, ಅಶ್ವತ್ಥಾಮ, ಬೃಹದ್ಬಲ, ಕೃತವರ್ಮರು ಕೂಡಿದರು. ಈ ಪ್ರಕಾರ ಈ ಆರು ಮಂದಿ ಕೌರವ ವೀರರು ಅಭಿಮನ್ಯುವಿನ ಮೇಲೆ ಬಿದ್ದು ಅವನ ಕುದುರೆಯನ್ನೂ ಸಾರಥಿಯನ್ನೂ ಕೊಂದರು. ಆಗ ಅಭಿಮನ್ಯುವು ಪಾದಚಾರಿಯಾಗಿಯೇ ಅವರ ಸಂಗಡ ಯುದ್ಧ ಮಾಡಿದನು. ಆದರೆ ದುಶ್ಶಾಸನನ ಮಗನು ಕೈಯೊಳಗೆ ಗದೆಯನ್ನು ಹಿಡಕೊಂಡು ಅವನ ಎದುರಾಗಿ ಬರಲು ಅಭಿಮನ್ಯುವು ತಾನೂ ಗದೆಯನ್ನು ಹಿಡಕೊಂಡು ಅವನ ಸಂಗಡ ಯುದ್ಧ ಮಾಡಿದನು. ಇದರಲ್ಲಿ ಇಬ್ಬರೂ ಒಬ್ಬರಿಗೊಬ್ಬರ ಗದಾಪ್ರಹಾರದಿಂದ ಮೂರ್ಛಿತರಾದರು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ದುಶ್ಶಾಸನನ ಮಗನು ಮೊದಲಿಗೆ ಎಚ್ಚರದ ಮೇಲೆ ಬಂದನು. ಆದರೆ ಅಭಿಮನ್ಯುವು ಇನ್ನೂ ಮೂರ್ಛೆಯಿಂದಲೇ ಬಿದ್ದುಕೊಂಡಿದ್ದನು. ಆಗ ದುಶ್ಶಾಸನನ ಮಗನು ಅವನನ್ನು ಗದೆಯಿಂದ ಹೊಡೆದು ಅವನ ಜೀವ ತೆಗೆದುಕೊಂಡನು.

ಈ ಪ್ರಕಾರ ಅರ್ಜುನನ ಪ್ರಿಯಮಗನೂ ಶ್ರೀಕೃಷ್ಣನ ಸೋದರಳಿಯನೂ ಆದ ಅಭಿಮನ್ಯುವು ಪರಾಕ್ರಮ ಮಾಡಿ ವೀರಸ್ವರ್ಗಕ್ಕೆ ಹೊರಟುಹೋದಾಗ ಅರ್ಜುನನು ಸಂಸಪ್ತಕರನ್ನು ಸಂಹರಿಸಿ ತಿರುಗಿ ಬರುತ್ತಿದ್ದನು. ಆಗ ದಾರಿಯಲ್ಲಿ ಒಮ್ಮಿಂದೊಮ್ಮೆ ಅವನ ಕಣ್ಣೊಳಗಿಂದ ನೀರು ಟಪಟಪನೆ ಬೀಳಹತ್ತಿದವು. ಅವನ ಕುತ್ತಿಗೆಯ ನರಗಳು ಉಬ್ಬಿ ಹೋಗಿ ಅವನ ಬಾಯಿಂದ ಶಬ್ದಗಳು ಹೊರಡದಂತೆ ಆದವು. ಈ ಅಪಶಕುನವನ್ನು ನೋಡಿ ಅರ್ಜುನನು ಶ್ರೀಕೃಷ್ಣನಿಗೆ-“ ದ್ರೋಣನು ಧರ್ಮನನ್ನು ಹಿಡಿದಿರಲಿಕ್ಕಿಲ್ಲವಷ್ಟೇ?” ಎಂದು ಕೇಳಿದನು. ಆದಕ್ಕೆ ಶ್ರೀಕೃಷ್ಣನು--“ ಧರ್ಮನಿಗೆ ಯಾವ ಅಪಾಯವೂ ತಟ್ಟುವದು ಶಕ್ಯವಿಲ್ಲ. ಆದರೆ ಎರಡನೇ ಯಾವದಾದರೂ ಕೆಟ್ಟ ಹಾನಿಯು ತಟ್ಟಿರಬಹುದು” ಎಂದು ಉತ್ತರ ಕೊಟ್ಟನು. ಆಗ ಎರಡೂ ಕಡೆಯ ಸೈನ್ಯಗಳು ತಮ್ಮ ಸಿಬಿರುಗಳಿಗೆ ಹೋಗಿದ್ದವು. ಪಾಂಡವರ ಸಿಬಿರವು ಶೋಕಮಯವಾಗಿತ್ತು. ಅರ್ಜುನನು ಅಲ್ಲಿಗೆ ಬಂದು ಮುಟ್ಟಿದ ಕೂಡಲೆ ತನ್ನ ಯಾವತ್ತು ಬಂಧುಗಳು ದುಃಖ ಮಾಡುವದನ್ನು ಕಂಡು-“ ಇದರ ಕಾರಣವೇನು?” ಎಂದು ಕೇಳಿದನು. ಅದಕ್ಕೆ ಯುಧಿಷ್ಠಿರನು-“ ತಮ್ಮಾ ಅರ್ಜುನಾ, ದ್ರೋಣನು ರಚಿಸಿದ ಚಕ್ರವ್ಯೂಹದಲ್ಲಿ ನಾನು ಮೂರ್ಖತನದಿಂದ ಅಭಿಮನ್ಯುವಿನನ್ನು ಪ್ರವೇಶ ಮಾಡಿಸಿದೆನು. ದ್ರೋಣನು ನನ್ನ ಮೇಲೆ ಸಾಗಿ ಬಂದು ನನ್ನನ್ನು ಹಿಡಿಯಲಿಕ್ಕೆ ಬೇಕಾದಷ್ಟು ಪ್ರಯತ್ನವನ್ನು ಮಾಡಿದಾಗ್ಯೂ ಅದು ಅವನಿಗೆ ಸಾಧ್ಯವಾಗಲಿಲ್ಲ. ಆದರೆ ಅಭಿಮನ್ಯುವಿನ ಹಿಂದೆ ಅವನ ಬೆನ್ನು ಹತ್ತಿ ಭೀಮ, ಧೃಷ್ಟದ್ಯುಮ್ನ, ವಿರಾಟ, ದ್ರುಪದ ಮೊದಲಾದ ವೀರರು ಹೋಗುತ್ತಿದ್ದಾಗ್ಗೆ ಅವರನ್ನು ಜಯದ್ರಥನು ಶಂಕರನ ವರಪ್ರಸಾದದಿಂದ ಅಡ್ಡಿ ಮಾಡಲಾಗಿ ಅಭಿಮನ್ಯುವೊಬ್ಬನೇ ಆ ವ್ಯೂಹದಲ್ಲಿ ಹೊಕ್ಕು ಅತ್ಯಂತ ಪರಾಕ್ರಮ ಮಾಡುತ್ತಿದ್ದಾಗ ಕೌರವವೀರರು ಅವನ ಸಾರಥಿಯನ್ನೂ ಕುದುರೆಯನ್ನೂ ಕೊಂದು, ಆ ನಂತರ ಅವನನ್ನು ಸಹ ಕೊಂದರು” ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಅರ್ಜುನನು ಒಮ್ಮಿಲೆ ಮೂರ್ಛೆ ಬಂದು ಕೆಳಗೆ ಬಿದ್ದುಕೊಂಡನು. ಕೆಲವು ಹೊತ್ತಿನ ಮೇಲೆ ಅವನು ಎಚ್ಚರಾಗಿ ಅಭಿಮನ್ಯುವಿನ ಸೌಂದರ್ಯವನ್ನೂ ಪರಾಕ್ರಮವನ್ನೂ ನೆನಿಸಿಕೊಂಡು ಶೋಕ ಮಾಡಿದ ಬಳಿಕ-“ ನಾನು ನಾಳೆ ಸೂರ್ಯಾಸ್ತವಾಗು

ವದರೊಳಗಾಗಿ ಜಯದ್ರಥನನ್ನು ಕೊಲ್ಲದಿದ್ದರೆ ಅಗ್ನಿಕಾಷ್ಠಗಳನ್ನು ಭಕ್ಷಣ ಮಾಡಿ ಪ್ರಾಣ ಕೊಡುವೆನು. ಜಯದ್ರಥನು ತನ್ನ ಜೀವದ ಹೆದರಿಕೆಯಿಂದ ಸಮರಾಂಗಣವನ್ನು ಬಿಟ್ಟು ಹೋಗದಿದ್ದರೆ ನಾನು ನಾಳೆ ನಿಶ್ಚಯದಿಂದ ಅವನನ್ನು ಕೊಲ್ಲುತ್ತೇನೆ. ಹೀಗೆ ಅವನನ್ನು ಕೊಲ್ಲದಿದ್ದರೆ ನನಗೆ ಪುಣ್ಯಗತಿಯು ಸಿಗಬೇಡ" ಎಂದು ಪ್ರತಿಜ್ಞೆಯನ್ನು ಮಾಡಿ ತನ್ನ ಗಾಂಡೀವ ಧನುಷ್ಯದ ಹುರಿಯನ್ನು ಜಗ್ಗಲಾಗಿ ಅದರ ಸಪ್ಪಳವು ಎಲ್ಲ ದಿಕ್ಕುಗಳನ್ನು ತುಂಬಿ ಬಿಟ್ಟಿತು. ಆಗ ಶ್ರೀಕೃಷ್ಣನು ಅರ್ಜುನನ ಪ್ರತಿಜ್ಞೆಗೆ ಅನುಮತಿಯನ್ನು ಕೊಡುವದಕ್ಕಾಗಿ ತನ್ನ ಪಾಂಚಜನ್ಯ ಶಂಖವನ್ನು ಗಟ್ಟಿಸಿ ಊದಿದನು. ಆ ಕೂಡಲೆ ಯಾವತ್ತು ವೀರರು ಸಿಂಹಗರ್ಜನೆಯನ್ನು ಮಾಡಿ ತಮ್ಮ ತಮ್ಮ ಶಂಖಗಳನ್ನು ಊದಿದರು. ಪಾಂಡವರ ಸೈನ್ಯದಲ್ಲಿ ಅಭಿಮನ್ಯುವಿನ ಮರಣದಗೋಸ್ಕರ ಆರ್ತಸ್ವರವು ಕೇಳಿಸುವ ಬದಲಾಗಿ ಆನಂದದಿಂದ ಊದಿದ ಶಂಖಗಳ ಸಪ್ಪಳವು ಏಕೆ ಕೇಳಿಸುತ್ತದೆಂದು ಕೌರವರು ಆಶ್ಚರ್ಯಪಟ್ಟರು. ಇಷ್ಟರಲ್ಲಿ ಒಬ್ಬ ಗುಪ್ತ ಚಾರಕನು ಜಯದ್ರಥನ ಕಡೆಗೆ ಅರ್ಜುನನು ಮಾಡಿದ ಪ್ರತಿಜ್ಞೆಯ ವರ್ತಮಾನನ್ನು ಅವನಿಗೆ ತಿಳಿಸಿದನು. ಇದನ್ನು ಕೇಳಿ ಜಯದ್ರಥನು ಹೆದರಿ ದುರ್ಯೋಧನನ ಕಡೆಗೆ ಹೋಗಿ ತನಗೆ ಯುದ್ಧರಂಗವನ್ನು ತತ್ಕಾಲವೇ ಬಿಟ್ಟು ಹೋಗಲಿಕ್ಕೆ ಅಪ್ಪಣೆಯನ್ನು ಕೇಳಿಕೊಂಡನು. ಆಗ ದುರ್ಯೋಧನನು ಜಯದ್ರಥನಿಗೆ ಆಶ್ವಾಸನವನ್ನು ಕೊಟ್ಟು ಅವನನ್ನು ದ್ರೋಣನ ಕಡೆಗೆ ಕರೆದುಕೊಂಡು ಹೋದನು. ದ್ರೋಣನು ಜಯದ್ರಥನಿಗೆ ಸ್ವಾಗತ ಮಾಡಿ ಅವನ ಬಾಯಿಂದ ಯಾವತ್ತು ವರ್ತಮಾನವನ್ನು ಕೇಳಿಕೊಂಡು—"ಜಯದ್ರಥಾ, ನಿನ್ನನ್ನು ನಾನು ರಕ್ಷಣ ಮಾಡುತ್ತೇನೆ, ಅಂಜಬೇಡ. ನಾಳೆ ನಾನು ಒಂದು ಅದ್ಭುತ ವ್ಯೂಹವನ್ನು ರಚಿಸುತ್ತೇನೆ. ಆ ವ್ಯೂಹವನ್ನು ಭೇದಿಸಿ ನಿನ್ನನ್ನು ಕೊಲ್ಲುವದು ಅರ್ಜುನನಿಗೆ ಕಠಿಣವಾಗುವಂತೆ ಮಾಡುತ್ತೇನೆ. ಇದಲ್ಲದೆ ಕ್ಷತ್ರಿಯರು ಯುದ್ಧದಲ್ಲಿ ಮಡೆಯಲಿಕ್ಕೆ ಎಂದೂ ಅಂಜಬಾರದು. ಯುದ್ಧರಂಗದಲ್ಲಿ ಮಡೆದ ವೀರರು ವೀರಸ್ವರ್ಗವನ್ನು ಪಡೆಯುವರೆಂಬುದನ್ನು ನೀನು ಲಕ್ಷ್ಯದಲ್ಲಿಡು. ಆದುದರಿಂದ ನೀನು ಮರಣಕ್ಕೆ ಅಂಜದೆ ಸ್ಥಿರಮನಸ್ಸಿನಿಂದ ಯುದ್ಧ ಮಾಡು" ಎಂದು

ಜಯದ್ರಥನಿಗೆ ಸಮಾಧಾನ ಹೇಳಿ ಅವನನ್ನು ಹುರಿದುಂಬಿಸಿದನು. ಆ ಬಳಿಕ ದುರ್ಯೋಧನನೂ ಜಯದ್ರಥನೂ ತಮ್ಮ ಶಿಬಿರಕ್ಕೆ ಹೊರಟು ಹೋದರು.

ಯುದ್ಧದ ಹದಿನಾಲ್ಕನೇ ದಿವಸ ವೃದ್ಧನಾದ ದ್ರೋಣನು ಶಂಖವನ್ನು ಊದುತ್ತ ಕೆಂಪು ಕುದುರೆಯನ್ನು ಹೂಡಿದ ತನ್ನ ರಥದಲ್ಲಿ ಕುಳಿತು ಯುದ್ಧ ರಂಗಕ್ಕೆ ಬಂದು ಶಕಟವ್ಯೂಹವನ್ನು ರಚಿಸಿದನು. ಆ ವ್ಯೂಹದ ಉದ್ದಳತೆಯು ೨೪ ಹರದಾರಿ ಇದ್ದು ಹಿಂದಿನ ಭಾಗದ ಅಗಲಳತೆಯು ಹತ್ತು ಹರದಾರಿ ಇತ್ತು. ಈ ಶಕಟ ವ್ಯೂಹದ ಅಗ್ರಭಾಗದಲ್ಲಿ ದ್ರೋಣನು ಸ್ವತಃ ನಿಂತುಕೊಂಡು ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ವೀರರನ್ನು ನಿಲ್ಲಿಸಿದನು. ಹಾಗೂ ಆ ವ್ಯೂಹವನ್ನು ಬಿಟ್ಟು ಅದರ ಹಿಂದೆ ಮೂರು ಹರದಾರಿ ದೂರ ಜಯದ್ರಥನನ್ನು ನಿಲ್ಲಿಸಿ ಅವನ ರಕ್ಷಣಾರ್ಥವಾಗಿ ಸೌಮದತ್ತಿ, ಕರ್ಣ, ಅಶ್ವತ್ಥಾಮ, ಶಲ್ಯ, ವೃಷ ಮತ್ತು ಕೃಪ ಈ ಪ್ರಕಾರ ಆರು ಮಂದಿ ವೀರರನ್ನೂ, ಅನೇಕ ಗಜಸೈನ್ಯವನ್ನೂ, ಅಶ್ವಸೈನ್ಯವನ್ನೂ ಇಟ್ಟನು. ಈ ಪ್ರಕಾರ ಆ ವ್ಯೂಹದ ಸುವ್ಯವಸ್ಥೆಯನ್ನು ಮಾಡಿ ಬಿಳೇ ಕವಚವನ್ನು ಮೈಯಲ್ಲಿ ಹಾಕಿಕೊಂಡು ತನ್ನ ಧನುಷ್ಯದ ಠಣತ್ಕಾರವನ್ನು ಮಾಡುತ್ತ ದ್ರೋಣನು ಕೇವಲ ಕೃತಾಂತನಂತೆ ಅದರ ಅಗ್ರಭಾಗದಲ್ಲಿ ನಿಂತುಕೊಂಡಾಗ ಅವನನ್ನು ಕಣ್ಣಿಂದ ನೋಡಲಿಕ್ಕೆ ಸಹ ಯಾರಿಗೂ ಧೈರ್ಯವಾಗಲಿಲ್ಲ. ಆದರೆ ತನ್ನ ಭಯಂಕರ ಪ್ರತಿಜ್ಞೆಯನ್ನು ಸತ್ಯ ಮಾಡುವದಕ್ಕಾಗಿ ಸಿದ್ಧನಾದ ಮತ್ತು ಸುವರ್ಣ ಕವಚವನ್ನು ಮೈಮೇಲೆ ಹಾಕಿಕೊಂಡ ಕೃಷ್ಣಸಾರಥಿ ಅರ್ಜುನನು ಶ್ರೀಕೃಷ್ಣನ ಸೂಚನೆಯ ಮೇರೆಗೆ ದ್ರೋಣನಿಗೆ ನಮಸ್ಕಾರ ಮಾಡಿದನು. ಆಗ ದ್ರೋಣನು ಅರ್ಜುನನಿಗೆ— "ಪಾರ್ಥಾ, ನೀನು ನಿನ್ನ ಎದುರಾಗಿ ನಿಂತ ಶತ್ರುವನ್ನು ಗೆದ್ದ ಹೊರತಾಗಿ ಮುಂದೆ ಹೋಗಲಿಕ್ಕಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವಿಯಷ್ಟೇ?" ಎಂದು ಕೇಳಿದನು. ಅದಕ್ಕೆ ಅರ್ಜುನನು—"ನೀವು ನನ್ನ ಗುರುಗಳು ಇರುತ್ತೀರಿ, ಶತ್ರುಗಳಲ್ಲ" ಎಂದು ಉತ್ತರ ಕೊಟ್ಟು ದುಶ್ಶಾಸನನ ಗಜಸೈನ್ಯವು ನಿಂತ ಕಡೆಗೆ ಹೋಗುವದಕ್ಕಾಗಿ ಮುಂದಕ್ಕೆ ಸಾಗಿದನು. ಈ ಪ್ರಕಾರ ಅವನು ಮುಂದೆ ಸಾಗುವಾಗ್ಗೆ ದ್ರೋಣನು ಅರ್ಜುನನ ಮೇಲೆ ಅನೇಕ ಬಾಣಗಳನ್ನು ಬಿಟ್ಟನು. ಆದರೆ ಅರ್ಜುನನು ಅದನ್ನು ಲಕ್ಷಿಸಲಿಲ್ಲ. ಆ ಮೇಲೆ ಶ್ರೀಕೃಷ್ಣನು

ಅರ್ಜುನನ ರಥವನ್ನು ದುಶ್ಶಾಸನನ ಗಜಸೈನ್ಯದ ಮೇಲೆ ಹಾಯಿಸಲು ಆ ಗಜಸೈನ್ಯವು ಚದರಿ ಹೋಯಿತು. ಇದನ್ನು ದುರ್ಯೋಧನನು ನೋಡಲಾರದೆ ದ್ರೋಣನ ಬಳಿಗೆ ಹೋಗಿ-"ಗುರುವರ್ಯರೇ, ಅರ್ಜುನನು ನಮ್ಮ ಇಷ್ಟು ದೊಡ್ಡ ಸೈನ್ಯವನ್ನು ಚದರಿಸಿ ಒಳಗೆ ಬಂದನು. ನಿಮ್ಮನ್ನು ಗೆದಿಯದೆ ಒಳಗೆ ಬರುವದು ಯಾರಿಗೂ ಶಕ್ಯವಿಲ್ಲವೆಂದು ಎಲ್ಲರದು ವಿಶ್ವಾಸವಿತ್ತು. ಅದು ವ್ಯರ್ಥ ವಾಯಿತು. ನೀವು ಜಯದ್ರಥನಿಗೂ ನನಗೂ ವಚನ ಕೊಟ್ಟು ನಮ್ಮನ್ನು ಮೋಸಪಡಿಸಿದಿರೆಂದು ಹೇಳಬೇಕಾಗುತ್ತದೆ. ನೀವು ನಿಮ್ಮ ಹೃದ್ಗತವನ್ನು ನನಗೆ ತಿಳಿಸಿದ್ದರೆ ನಾನು ಜಯದ್ರಥನನ್ನು ರಣರಂಗದಲ್ಲಿ ಇಟ್ಟುಕೊಳ್ಳುತ್ತಿದ್ದಿಲ್ಲ" ಎಂದು ಹೇಳಿದನು. ಅದಕ್ಕೆ ದ್ರೋಣನು-"ದುರ್ಯೋಧನಾ, ನಿನ್ನ ಕಠೋರ ಮಾತಿನಿಂದ ನಾನು ಸಿಟ್ಟಿಗೆ ಬರುವದಿಲ್ಲ. ನೀನು ನನ್ನ ಮಗನಂತೆ ಇರುತ್ತೀ. ಅರ್ಜುನನಿಗೆ ಶ್ರೀಕೃಷ್ಣನಂಥ ಕುಶಲ ಸಾರಥಿಯು ಇರುವದರಿಂದ ಮತ್ತು ಅವನ ವಾಜಿಗಳು ಸಹ ಬಹು ತೇಜಸ್ವಿಯಾಗಿರುವದರಿಂದ ಅರ್ಜುನನ ರಥದ ವೇಗವು ಹೇಗೆ ಇರುತ್ತದೆಂಬುದನ್ನು ನೀನು ಕಣ್ಣಾರೆ ನೋಡುತ್ತಿಯಷ್ಟೇ. ಒಮ್ಮೊಮ್ಮೆ ಅರ್ಜುನನ ಬಾಣಗಳಿಗಿಂತ ಮುಂಚಿತವಾಗಿಯೇ ಅವನ ರಥವು ಹೋಗುವದರಿಂದ ಅವನ ಬಾಣಗಳು ಸಹ ಅವನ ರಥದ ಹಿಂದೆ ಬೀಳುವವು. ಇಂಥ ಭರದಿಂದ ಹೋಗುವ ರಥದ ಬೆನ್ನನ್ನು ನನ್ನಂಥ ಮುದುಕನು ಹತ್ತುವದು ಹೇಗೆ? ಇದಲ್ಲದೆ ಅರ್ಜುನನು ನನ್ನ ಮುಂದೆ ಎದುರಾಗಿ ನಿಂತು ನನ್ನಕೂಡ ಯುದ್ಧವನ್ನು ಮಾಡುವದಿಲ್ಲ. ಅಂದಮೇಲೆ ನನ್ನ ಉಪಾಯವೇನದೆ? ಆದುದರಿಂದ ನೀನು ಅವನಿಗೆ ಎದುರಾಗಿ ನಿಂತು ಯುದ್ಧ ಮಾಡು. ಅರ್ಜುನನ ಬಾಣಗಳನ್ನು ಭೇದಿಸಲಿಕ್ಕೆ ಬಾರದಂಥ ದಿವ್ಯ ಕವಚವನ್ನು ನಿನಗೆ ತೊಡಿಸುತ್ತೇನೆ" ಎಂದು ಹೇಳಿ ದ್ರೋಣನು ಅಭಿಮಂತ್ರಿಸಿ ಮತ್ತೊಂದು ಕವಚವನ್ನು ದುರ್ಯೋಧನನಿಗೆ ತೊಡಿಸಿದನು. ಆ ಬಳಿಕ ದುರ್ಯೋಧನನು ವೀರಾವೇಶದಿಂದ ಅರ್ಜುನನ ರಥದ ಹಿಂದೆ ತ್ವರೆಯಿಂದ ಹೋದನು. ದುರ್ಯೋಧನನು ತಮ್ಮ ಬೆನ್ನು ಹತ್ತಿ ಬರುವದನ್ನು ಶ್ರೀಕೃಷ್ಣನು ನೋಡಿ ಆನಂದಪಟ್ಟು— "ಅರ್ಜುನಾ, ದುರಭಿಮಾನಿಯೂ ಸುಖದಪಿಂಡನೂ ಆದ ದುರ್ಯೋಧನನು ತಾನಾಗಿ ನಿನ್ನ ಎದುರಿಗೆ ಬರುತ್ತಿದ್ದಾನೆ. ಈ ಸುಯೋಗವನ್ನು ಕಳಕೊಳ್ಳ

ಬೇಡ. ಇವತ್ತೇ ಅವನನ್ನು ಕೊಂದು ಈ ಯುದ್ಧವನ್ನು ಮುಗಿಸಿ ಬಿಡು" ಎಂದು ಹೇಳಿದನು. ಅದಕ್ಕೆ ಅರ್ಜುನನು ಒಡಂಬಟ್ಟು ದುರ್ಯೋಧನನ ಮೇಲೆ ತನ್ನ ಬಾಣಗಳನ್ನು ಬಿಟ್ಟನು. ಆದರೆ ಆ ಬಾಣಗಳು ದುರ್ಯೋಧನನ ಕವಚಕ್ಕೆ ಹೋಗಿ ಮುಟ್ಟಿ ನಿಸ್ಸತ್ವವಾಗಿ ಕೆಳಗೆ ಬಿದ್ದವು. ಈ ಚಮತ್ಕಾರವನ್ನು ನೋಡಿ ಶ್ರೀಕೃಷ್ಣನು ಅರ್ಜುನನಿಗೆ—"ನಿನ್ನ ಬಾಣಗಳು ದುರ್ಯೋಧನನ ಕವಚದೊಳಗೆ ಹೋಗುವದೇ ಇಲ್ಲ. ನಿನ್ನ ರಟ್ಟೆಯ ಅಥವಾ ಮುಷ್ಟಿಯ ಕಸವು ಕಡಿಮೆಯಾಯಿತೋ ಹೇಗೆ?" ಎಂದು ಅರ್ಜುನನ ಕೂಡ ಚೇಷ್ಟೆ ಮಾಡಿದನು. ಆಗ ಅರ್ಜುನನು ಶ್ರೀಕೃಷ್ಣನ ಪ್ರಶ್ನೆಯ ಗೂಢವನ್ನರಿತು—"ಶ್ರೀಕೃಷ್ಣಾ, ದ್ರೋಣನು ದುರ್ಯೋಧನನಿಗೆ ಅಭೇದ್ಯವಾದ ಕವಚವನ್ನು ತೊಡಿಸಿರುತ್ತಾನೆಂಬುದು ನಿನಗೆ ಗೊತ್ತಿದ್ದು ನೀನು ನಿನ್ನ ಪ್ರಶ್ನೆಯಿಂದ ನನ್ನಲ್ಲಿ ಸುಮ್ಮನೆ ಭ್ರಾಂತಿಯನ್ನುಂಟುಮಾಡುತ್ತೀ. ಹೆಂಗಸರಿಗೆ ಹೇಗೆ ಕವಚವನ್ನು ತೊಡಿಸಬೇಕೋ ಹಾಗೆ ದ್ರೋಣನು ದುರ್ಯೋಧನನಿಗೆ ಕವಚವನ್ನು ತೊಡಿಸಿರುತ್ತಾನೆ. ಅವನ ಕಣ್ಣನ್ನು ಈಗಲೇ ತೆರೆಯಿಸುತ್ತೇನೆ, ನೋಡು" ಎಂದು ನುಡಿದು ದುರ್ಯೋಧನನ ಸಾರಥಿಯ ಮೇಲೆ ಬಾಣ ಒಗೆದು ಅವನನ್ನು ಕೊಂದದ್ದಲ್ಲದೆ ಕವಚವಿಲ್ಲದೆ ಇದ್ದಂಥ ಅವನ ಎರಡೂ ಅಂಗೈಗಳ ಮೇಲೆ ತನ್ನ ಬಾಣಗಳನ್ನು ಒಗೆದನು. ಇದರಿಂದ ದುರ್ಯೋಧನನ ಅಂಗೈಗಳಿಗೆ ಬಹಳ ನೋವು ಆಗಿ ಅವನು ಆ ನೋವನ್ನು ತಡೆಯಲಾರದೆ ಯುದ್ಧರಂಗವನ್ನು ಬಿಟ್ಟು ಓಡಿ ಹೋದನು.

ಈ ಪ್ರಕಾರ ದುರ್ಯೋಧನನಿಗಾದ ದೈನ್ಯ ಸ್ಥಿತಿಯನ್ನು ನೋಡಿ ಕೌರವರ ಕಡೆಯ ಅನೇಕ ಮಂದಿ ವೀರರು ಸಂತಾಪದಿಂದ ಅರ್ಜುನನ ಮೇಲೆ ಸಾಗಿ ಹೋದರು. ಇತ್ತಲಾ ಭೀಮನು ಇನ್ನೊಂದು ಕಡೆಗೆ ಕೌರವ ಸೈನ್ಯದ ಕೂಡ ಹೋರಾಡುತ್ತ ಅವರ ಶಕಟವ್ಯೂಹವನ್ನು ಒಡೆಯುವಲ್ಲಿ ತೊಡಗಿದ್ದನು. ಆ ದಿವಸದ ಯುದ್ಧವು ಯಾವತ್ತು ದಿವಸಗಳಿಗಿಂತ ಅತಿ ಭಯಂಕರವಾಯಿತು. ಕಡೆಗೆ ಭೀಮಾರ್ಜುನರು ಕೌರವ ಸೈನ್ಯಕ್ಕೆ ಅತಿಶಯ ನಾಶವನ್ನು ಮಾಡಿ ಅವರು ರಚಿಸಿದ ವ್ಯೂಹವನ್ನು ಒಡೆದರು. ಆ ಬಳಿಕ ಅರ್ಜುನನ ರಥವು ಸಾಯಂಕಾಲದ ಸುಮಾರಕ್ಕೆ ಆರು ಮಂದಿ ಮಹಾರಥಿಕರ ಆಶ್ರಯದಲ್ಲಿ ಜಯು

ದ್ರಥನು ನಿರ್ಭಯದಿಂದ ಕುಳಿತುಕೊಂಡಿದ್ದ ಸ್ಥಳಕ್ಕೆ ಹೋಗಿ ಮುಟ್ಟಿತು. ಅಲ್ಲಿ ಅರ್ಜುನನ ಮತ್ತು ಆ ಆರು ಮಂದಿ ಮಹಾರಥಿಕರ ನಡುವೆ ಭಯಂಕರವಾದ ಯುದ್ಧವು ನಡೆಯಿತು. ಆ ಯುದ್ಧವು ತೀವ್ರ ಮುಗಿಯಲಿಲ್ಲ. ಆಗ ಶ್ರೀಕೃಷ್ಣನು ತನ್ನ ಮಾಯೆಯಿಂದ ಸಾಯಂಕಾಲದ ಸೂರ್ಯನ ಮೇಲೆ ಮೋಡಗಳನ್ನು ಪಸರಿಸಿದ್ದರಿಂದ ಕತ್ತಲಗವಿಯಲಿಕ್ಕೆ ಹತ್ತಿತು. ಆದುದರಿಂದ ಇನ್ನುಮೇಲೆ ಸೂರ್ಯಾಸ್ತದ ಮೂಲಕ ಬೇಗನೆ ಯುದ್ಧ ಮುಗಿಯುವ ತೂತೂರಿಯನ್ನು ಊದುವರೆಂತಲೂ, ಅರ್ಜುನನು ತನ್ನ ಪ್ರತಿಜ್ಞೆಯು ಸುಳ್ಳಾದ್ದರಿಂದ ಪ್ರಾಣ ತ್ಯಾಗವನ್ನು ಮಾಡುವನೆಂತಲೂ ಜಯದ್ರಥನು ತಿಳಿದುಕೊಂಡು ಆನಂದದಿಂದ ಹೊರಬಿದ್ದು ಯುದ್ಧರಂಗದಲ್ಲಿ ಅಂಜಿಕೆಯಿಲ್ಲದೆ ತಿರುಗಾಡಹತ್ತಿದನು. ಇಷ್ಟರಲ್ಲಿ ಒಮ್ಮೆಲೆ ಆ ಮೋಡಗಳೊಳಗಿಂದ ಸೂರ್ಯನು ಹೊರಬಿದ್ದ ಕಾರಣ ಅವನ ಪ್ರಕಾಶ ಕಿರಣಗಳು ಯುದ್ಧರಂಗದ ಮೇಲೆ ಬಿದ್ದವು. ಆ ಮೇಲೆ ಅರ್ಜುನನು ಸಂಧ್ಯಾ ಪ್ರಕಾಶದಲ್ಲಿ ಜಯದ್ರಥನ ಮೇಲೆ ಒಂದು ಬಾಣವನ್ನು ಬಿಟ್ಟು ಅವನ ತಲೆಯನ್ನು ಹಾರಿಸಿದನು. ಈ ಪ್ರಕಾರ ಜಯದ್ರಥನ ವಧವಾದ ಬಳಿಕ ಪಾಂಡವರು ಜಯಧ್ವನಿಯಿಂದ ಕೂಗಲಿಕ್ಕೆ ಹತ್ತಲಾಗಿ ಶ್ರೀಕೃಷ್ಣನು ಅರ್ಜುನನ ರಥವನ್ನು ಧರ್ಮನ ಸಮೀಪಕ್ಕೆ ತ್ವರೆಯಿಂದ ಒಯ್ದನು. ಆಗ ಧರ್ಮನು ಶ್ರೀಕೃಷ್ಣನನ್ನು ನೋಡಿದ ಕೂಡಲೆ ತನ್ನ ರಥದಿಂದ ಕೆಳಗೆ ಇಳಿದು ಶ್ರೀಕೃಷ್ಣನನ್ನು ಅಪ್ಪಿಕೊಂಡನು. ಅರ್ಜುನನಾದರೂ ಶ್ರೀಕೃಷ್ಣನನ್ನು ಅಪ್ಪಿಕೊಂಡನು. ಈ ಮೂರೂ ಜನರ ಕಣ್ಣೊಳಗೆ ಆನಂದಾಶ್ರುಗಳು ಸುರಿದವು. ಆಗ ಧರ್ಮನು— "ಶ್ರೀಕೃಷ್ಣಾ, ನಿನ್ನ ಕೃಪೆಯಿಂದ ಅರ್ಜುನನು ತನ್ನ ಕಠಿಣವಾದ ಪ್ರತಿಜ್ಞೆಯನ್ನು ಕೊನೆಗಾಣಿಸಿದನು. ನಿನ್ನ ಅನುಗ್ರಹದಿಂದ ನಾವು ಶತ್ರುಗಳನ್ನು ಗೆದಿಯುವೆವೆಂಬದರಲ್ಲಿ ಸಂಶಯವಿಲ್ಲ" ಎಂದು ನುಡಿದನು. ಅದಕ್ಕೆ ಶ್ರೀಕೃಷ್ಣನು— "ಯುಧಿಷ್ಠಿರಾ, ನಿನ್ನ ತಪಸ್ಸಿನಿಂದಲೂ, ಧರ್ಮಶೀಲತೆಯಿಂದಲೂ, ಸಾಧುತ್ವದಿಂದಲೂ, ಯಜ್ಞಯಾಗಾದಿಗಳಿಂದಲೂ ಜಯದ್ರಥನು ಸತ್ತನೆಂದು ತಿಳಿದುಕೋ" ಎಂದು ಉತ್ತರ ಕೊಟ್ಟನು. ಈ ಪ್ರಕಾರ ಪಾಂಡವರ ಸೈನ್ಯದಲ್ಲಿ ಆನಂದದ ಭಾಷಣವು ನಡೆದಿರಲು ಅತ್ತ ಕೌರವರ ಸೈನ್ಯದಲ್ಲಿ ದುಃಖದ ಮತ್ತು ರೋಷದ ಭಾಷಣಗಳು ನಡೆದಿದ್ದವು. ಜಯದ್ರಥನು ಸತ್ತದ್ದನ್ನು ಕೇಳಿ ದುರ್ಯೋ

ಧನನು ಸೊಂಡೆಯನ್ನು ಒಣಗಿಸಿಕೊಂಡು ಹೆಣಕ್ಕಿಂತ ಕನಿಷ್ಠನಾದನು. ಅವನು ಹಲ್ಲು ಮುರಿದ ಹಾವಿನಂತೆ ಉಸುರುಗಳೆಯುತ್ತ ದ್ರೋಣನ ಕಡೆಗೆ ಹೋಗಿ ದುಃಖದಿಂದಲೂ, ಸಿಟ್ಟಿನಿಂದಲೂ—" ಆಚಾರ್ಯರೇ, ಭೀಮಾರ್ಜುನರು ತಮ್ಮ ಕ್ಷಾತ್ರತೇಜದಿಂದ ಮಾಡಿದ ಭಯಂಕರ ಯುದ್ಧವನ್ನು ನೋಡಿರಿ. ಅವರು ನನ್ನ ಏಳು ಅಕ್ಷೌಹಿಣಿ ಸೈನ್ಯವನ್ನು ಸಂಹಾರ ಮಾಡಿ ಕಡೆಗೆ ಜಯದ್ರಥನನ್ನು ಕೊಂದುಬಿಟ್ಟರು. ಜಯಶಾಲಿಯಾಗಬೇಕೆಂದು ಹಂಬಲಿಸುತ್ತ ಕೂತಿರುವ ನನ್ನ ಸಲುವಾಗಿ ಜೀವ ಕೊಟ್ಟಂಥ ಇಷ್ಟು ಮಂದಿ ವೀರರ ಋಣವನ್ನು ನಾನು ಹೇಗೆ ತೀರಿಸಲಿ? ಈ ಲಕ್ಷಾವಧಿ ಜನರನ್ನು ಕೊಲ್ಲಿಸಿದ ಪಾಪವು ನಾನು ಸಹಸ್ರ ಅಶ್ವಮೇಧ ಯಜ್ಞವನ್ನು ಮಾಡಿದರೂ ತೀರಲಾರದು. ಲಕ್ಷಾವಧಿ ಮಿತ್ರರ ದ್ರೋಹವನ್ನು ಕಟ್ಟಿಕೊಂಡ ನನ್ನನ್ನು ಆ ರಾಜಸಭೆಯಲ್ಲಿ ಪೃಥ್ವಿಯು ಏಕೆ ನುಂಗಿಬಿಡಲಿಲ್ಲ? ನನ್ನಗೋಸ್ಕರ ಪ್ರಾಣವನ್ನು ಕೊಟ್ಟ ಆ ಮಿತ್ರರ ಹಿಂದೆ ನಾನಾದರೂ ಯಮಸದನಕ್ಕೆ ಹೋಗುತ್ತೇನೆ. ನೀವು ಮಾತ್ರ ನಿಮ್ಮ ಪ್ರಿಯಶಿಷ್ಯನನ್ನು ಇದೇ ರೀತಿಯಿಂದ ಉಪೇಕ್ಷೆ ಮಾಡುತ್ತ ಹೋಗಿರಿ" ಎಂದು ಹೇಳಿದನು. ಈ ಅಪ್ರಿಯವಾದ ಭಾಷಣವನ್ನು ಕೇಳಿ ದ್ರೋಣನು—" ದುರ್ಯೋಧನಾ, ಈ ಪ್ರಕಾರ ನನ್ನನ್ನು ನಿನ್ನ ಕಠಿಣವಾದ ವಾಗ್ಪ್ರಹಾರದಿಂದ ಏಕೆ ಕಷ್ಟಪಡಿಸುವೆ? ಅರ್ಜುನನು ಯುದ್ಧದಲ್ಲಿ ಅಜಿಂಕ್ಯನಿರುತ್ತಾನೆಂದು ನಾನು ನಿನಗೆ ಈ ಮೊದಲೇ ನೂರು ಸಾರೆ ಹೇಳಿದ್ದೇನೆ. ತ್ರೈಲೋಕ್ಯದಲ್ಲಿ ಶೂರಶ್ರೇಷ್ಠನೆಂದು ನಾವು ತಿಳಿದುಕೊಂಡಂಥ ಭೀಷ್ಮನನ್ನು ಸಹಾ ಅರ್ಜುನನು ಗೆದ್ದನು. ಇದಕ್ಕಿಂತ ಹೆಚ್ಚಿನ ಪ್ರಮಾಣವು ನಿನಗೇನು ಬೇಕು? ಶಕುನಿಯು ದ್ಯೂತದಲ್ಲಿ ಒಗೆದಂಥ ಲೆತ್ತಗಳು ಲೆತ್ತಗಳಲ್ಲ, ಅವು ಅರ್ಜುನನ ಬಾಣಗಳೆಂದು ತಿಳಿ. ಯಾವ ಮೂರ್ಖನು ತನ್ನ ತಂದೆತಾಯಿಗಳ, ಆಪ್ತರ ಮತ್ತು ಮಿತ್ರರ ವಚನಗಳನ್ನು ಮೀರಿ ತನ್ನ ಹಟವನ್ನೇ ನಡೆಸುತ್ತಾನೋ ಅವನು ಬೇಗನೆ ಶೋಕಕ್ಕೆ ಗುರಿಯಾಗುತ್ತಾನೆ. ನೀವು ಸತೀಶಿರೋಮಣಿಯಾದ ದ್ರೌಪದಿಯನ್ನು ರಾಜಸಭೆಯಲ್ಲಿ ಎಳೆದು ತಂದು ಮಾಡಿದ ಅಧರ್ಮದ ಫಲವನ್ನು ಈಗ ಅನುಭೋಗಿಸಿರಿ. ಸುಮ್ಮನೆ ನನಗೇಕೆ ದೂಷಣವನ್ನು ಕೊಡುತ್ತೀ? ಜಯದ್ರಥನನ್ನು ಸಂರಕ್ಷಣ ಮಾಡಲಿಕ್ಕೆ ನಿಂತುಕೊಂಡಿದ್ದ ನೀವು

ಆರು ಮಂದಿ ವೀರರು ಜೀವಂತರಿರುತ್ತಾರೆ. ಅಶ್ವತ್ಥಾಮನು ಜೀವಂತನಿರು ತ್ತಾನೆ, ಕರ್ಣನು ಜೀವಂತನಿರುತ್ತಾನೆ, ಕೃಪನೂ ಜೀವಂತನಿರುತ್ತಾನೆ; ಜಯ ದ್ರಥನು ಮಾತ್ರ ಸತ್ತನು. ಇದರ ಅರ್ಥವೇನು? ಇದಕ್ಕಾಗಿ ನೀವು ನಾಚತ ಕ್ಕದ್ದು. ನಾನು ಇವತ್ತಿನ ದಿವಸ ನನ್ನ ಮೈಯೊಳಗಿನ ಕವಚವನ್ನೇ ಕಳೆಯು ವದಿಲ್ಲ. ಯುದ್ಧವನ್ನು ಮುಂದೆ ಸಾಗಿಸಬೇಕೆಂಬ ನಿನ್ನ ಅಪೇಕ್ಷೆಯು ಈಡೇ ರಲಿ. ಅಶ್ವತ್ಥಾಮನಿಗೆ ತನ್ನ ಜೀವವನ್ನು ಉಳಿಸಿಕೊಂಡು ಪಾಂಚಾಲರನ್ನೂ ಪಾಂಡವರನ್ನೂ ಜೀವಂತ ಬಿಡಬೇಡವೆಂದು ತಿಳಿಸು. ನಾನೂ ನನ್ನ ಜೀವ ದಲ್ಲಿ ಜೀವವಿರುವ ತನಕ ನಿನ್ನ ಶತ್ರುಗಳನ್ನು ಕೊಂದು ಬಿಡುತ್ತೇನೆ. ಕ್ಷುಬ್ಧ ರಾದ ಕೌರವರೂ ಪಾಂಡವರೂ ರಾತ್ರಿಯಲ್ಲಿ ಸಹ ಯುದ್ಧ ಮಾಡುವರು" ಎಂದು ದುರ್ಯೋಧನನಿಗೆ ಹೇಳಿ ತನ್ನ ರಥವನ್ನು ಪಾಂಡವರ ಸೈನ್ಯದ ಕಡೆಗೆ ಸಾಗಿಸಿದನು. ಯುದ್ಧರಂಗವನ್ನು ಬಿಟ್ಟು ಹೋಗುವ ತುತೂರಿಯು ಇನ್ನೂ ಊದದೆ ಇದ್ದ ಮೂಲಕ ಪಾಂಡವರ ಸೈನ್ಯವು ಸಹ ಇನ್ನೂ ಯುದ್ಧರಂಗ ದಲ್ಲಿ ನಿಂತುಕೊಂಡಿತ್ತು. ಸಿಟ್ಟಿನ ಆವೇಶದಲ್ಲಿದ್ದ ದುರ್ಯೋಧನನು ರಾತ್ರಿ ಯಲ್ಲಿ ಯುದ್ಧವನ್ನು ನಡೆಸಲಿಕ್ಕೆ ಒಪ್ಪಿಗೆಯನ್ನು ಕೊಟ್ಟು ತನ್ನ ಕಡೆಯ ಬೇರೆ ಬೇರೆ ಸೇನಾನಾಯಕರಿಗೆ ಅವರವರ ಸೈನ್ಯಗಳ ಚಟುವಟಿಕೆಗಳನ್ನು ಮುಂದರಿಸಲಿಕ್ಕೆ ಸೂಚನೆಯನ್ನು ಮಾಡಿದನು. ಆ ಮೇಲೆ ಅವನು ತನ್ನ ಕಾಲಬಲದವರಿಗೆ ಶಸ್ತ್ರಗಳನ್ನು ಬಿಟ್ಟು ಪ್ರತಿಯೊಂದು ರಥದ ಹತ್ತರ ಐದು ದೀವಟಿಗೆಗಳನ್ನು, ಪ್ರತಿಯೊಂದು ಆನೆಯ ಹತ್ತರ ಮೂರು ದೀವಟಿಗೆಗಳ ನ್ನು ಮತ್ತು ಪ್ರತಿಯೊಂದು ಕುದುರೆಯ ಹತ್ತರ ಒಂದು ದೀವಟಿಗೆಯನ್ನು ಹಿಡಿದುಕೊಂಡು ನಿಲ್ಲಲಿಕ್ಕೆ ಅಪ್ಪಣೆಯನ್ನು ಮಾಡಿದನು. ಅದರಂತೆ ಅವರೆ ಲ್ಲರು ತಮ್ಮ ತಮ್ಮ ದೀವಟಿಗೆಗಳಿಗೆ ಉರಿ ಹಚ್ಚಿ ಬೆಳಕು ಮಾಡಿ ಅಲ್ಲಲ್ಲಿ ನಿಂತುಕೊಂಡರು. ಪಾಂಡವರಾದರೂ ಇದೇ ಪ್ರಕಾರ ವ್ಯವಸ್ಥೆಯನ್ನು ಮಾಡಿ ದರು. ಆದುದರಿಂದ ಆ ರಾತ್ರಿ ಕಾಲಬಲದ ಯುದ್ಧವು ನಿಂತು ಹೋಗಿ ರಥಿ ಕರ, ಮಾವುತರ ಮತ್ತು ರಾಹುತರ ಯುದ್ಧವು ಮಾತ್ರ ನಡೆಯಿತು. ದ್ರೋಣ ನು ದುರ್ಯೋಧನನ ವ್ಯರ್ಥವಾದ ದೂಷಣದಿಂದಲೂ, ಕರ್ಣನು ದ್ರೋ ಣನ ಯಥಾರ್ಥವಾದ ದೂಷಣದಿಂದಲೂ ರೊಚ್ಚಿಗೆದ್ದು ಪಾಂಡವರ ಕೂಡ

ಭಯಂಕರವಾದ ಯುದ್ಧವನ್ನು ಮಾಡಿದರು. ದ್ರೋಣ ಕರ್ಣರ ಮುಂದೆ ಯಾರ ಪರಾಕ್ರಮವೂ ನಡೆಯಲಿಲ್ಲ. ಇದನ್ನು ನೋಡಿ ಪಾಂಡವರ ಕಡೆಯ ಕಾಲಬಲದ ವೀರರು ಅಂಜಿಕೊಂಡು ತಮ್ಮ ತಮ್ಮ ಕೈಯೊಳಗಿನ ದೀವಟಿಗೆಗಳನ್ನು ಒಕ್ಕೊಟ್ಟು ಓಡಿ ಹೋಗಲಾರಂಭಿಸಿದರು. ಆ ಪ್ರಸಂಗದಲ್ಲಿ ಶ್ರೀಕೃಷ್ಣನು ಅರ್ಜುನನ ರಥವನ್ನು ಕರ್ಣನ ಮೇಲೆ ಸಾಗಿಸದೆ ಘಟೋತ್ಕಚನನ್ನೇ ಮುಂದೆಮಾಡಿ ಅವನಿಗೆ--"ಬಾಳಾ ಘಟೋತ್ಕಚಾ, ನಿನಗೆ ನಿನ್ನ ತಂದೆಯು ಮತ್ತು ಕಕ್ಕಂದಿರ ಸೇವೆಯನ್ನು ಮಾಡುವ ಯೋಗವು ಇವತ್ತಿನ ದಿವಸ ಬಂದಿರುತ್ತದೆ. ರಾತ್ರಿಯ ಸಮಯದಲ್ಲಿ ರಾಕ್ಷಸರ ಸಾಮರ್ಥ್ಯವು ಬಹಳ ಇರುವದು. ಆದುದರಿಂದ ಈ ಕಠಿಣ ಪ್ರಸಂಗದಲ್ಲಿ ನೀನು ನಿನ್ನ ಸಾಮರ್ಥ್ಯವನ್ನು ತೋರಿಸು" ಎಂದು ಹೇಳಿ ಅವನನ್ನು ಪ್ರೋತ್ಸಾಹಿಸಿದನು. ಆಗ ಘಟೋತ್ಕಚನು ತನ್ನ ರಾಕ್ಷಸೀ ಶಕ್ತಿಯಿಂದ ಕರ್ಣನ ಮೇಲೆ ಸಾಗಿ ಹೋಗಿ ತನ್ನ ಅದೃಶ್ಯ ರೂಪದಿಂದ ಆ ಕತ್ತಲದೊಳಗೆ ಕೌರವ ಸೈನ್ಯದ ಮೇಲೆ ಕಲ್ಲು, ಕತ್ತಿ, ಬರ್ಚಿ, ಬಾಣ ಮುಂತಾದವುಗಳ ಮಳೆಯನ್ನು ಸುರಿಸಿದನು. ಇದರಿಂದ ಕೌರವ ಸೈನ್ಯವು ಅತಿಶಯವಾಗಿ ನಾಶವಾಯಿತು. ಕರ್ಣನು ತನ್ನ ಪ್ರಬಲವಾದ ಶಕ್ತಿಯಿಂದ ಘಟೋತ್ಕಚನ ಹಾವಳಿಯನ್ನು ತಗ್ಗಿಸುತ್ತಲೇ ಇದ್ದನು. ಆದರೂ ರಾಕ್ಷಸೀ ಮಾಯೆಯು ಮುಂದೆ ಅವನ ಆಟವು ವಿಶೇಷ ಸಾಗಲಿಲ್ಲ. ಆಗ ಕೌರವ ಸೈನ್ಯದಲ್ಲಿ ಹಾಹಾಕಾರವು ಉತ್ಪನ್ನವಾಯಿತು. ಆದುದರಿಂದ ಕೌರವವೀರರು ದುರ್ಯೋಧನನಿಗೆ- "ಇವತ್ತಿನ ರಾತ್ರಿ ನಾವು ಘಟೋತ್ಕಚನ ಕೈಯಿಂದ ಬದುಕಿ ಉಳಿದ ಬಳಿಕ ಮುಂದೆ ಪಾಂಡವರ ಕೂಡ ಯುದ್ಧ ಮಾಡುವೆವು. ಆದುದರಿಂದ ಕರ್ಣನು ತನಗೆ ಇಂದ್ರನು ಕೊಟ್ಟ ಅಮೋಘ ಶಕ್ತಿಯನ್ನು ಉಪಯೋಗಿಸಿದ ಹೊರತು ನಮಗೆ ಗತಿ ಇಲ್ಲ" ಎಂದು ಬಹಳ ದೈನ್ಯದಿಂದ ಹೇಳಿಕೊಂಡರು. ಆ ಅಮೋಘ ಶಕ್ತಿಯನ್ನು ಇಂದ್ರನು ಕರ್ಣನ ದಾನಶೂರತ್ವಕ್ಕೆ ಮೆಚ್ಚಿ ಅವನಿಗೆ ಕೊಟ್ಟಿದ್ದನು. ಕರ್ಣನು ಯಾವನ ಮೇಲೆ ಆ ಶಕ್ತಿಯನ್ನು ಒಗೆಯುವನೋ ಅವನು ಖಂಡಿತವಾಗಿ ಸಾಯಬೇಕೆಂತಲೂ, ಅದನ್ನು ಕರ್ಣನು ಒಮ್ಮೆ ಉಪಯೋಗಿಸಿದ ತರುವಾಯ ಅದರ ಉಪಯೋಗವು ಇನ್ನೊಬ್ಬನ ಮೇಲೆ ಆಗಲಾರದೆಂತಲೂ ಇಂದ್ರನು ಕರ್ಣನಿಗೆ ಆ ಶಕ್ತಿಯನ್ನು ಕೊಡುವ ಕಾಲಕ್ಕೆ ತಿಳಿಸಿ

ದ್ದನು. ಆ ಅಮೋಘ ಶಕ್ತಿಯನ್ನು ಕರ್ಣನು ದುರ್ಯೋಧನನ ಹೇಳಿಕೆಯ ಪ್ರಕಾರ ಘಟೋತ್ಕಚನ ಮೇಲೆ ಒಗೆದದ್ದರಿಂದ ಅದು ಆ ಅದೃಶ್ಯ ಸ್ಥಿತಿಯಲ್ಲಿಯೇ ಘಟೋತ್ಕಚನಿಗೆ ತಾಗಲು ಅವನು ಧುಪ್ಪನೆ ಆಕಾಶದಿಂದ ನೆಲಕ್ಕೆ ಬಿದ್ದು ಸತ್ತನು. ಘಟೋತ್ಕಚನು ಬೀಳ ಬೀಳುವಾಗ್ಗೆ ಎರಡೂ ಕಡೆಯ ನೂರಾರು ಜನರು ಅವನ ಪ್ರಚಂಡ ದೇಹದ ಕೆಳಗೆ ಸಿಕ್ಕು ಸತ್ತರು. ಈ ಪ್ರಕಾರ ಪರಾಕ್ರಮಿಯಾದ ಘಟೋತ್ಕಚನು ಮಡೆದು ಹೋದ್ದರಿಂದ ಭೀಮಾರ್ಜುನರಿಗೆ ಬಹಳ ದುಃಖವಾಯಿತು. ಆದರೆ ಕರ್ಣನ ಅಮೋಘ ಶಕ್ತಿಯು ಹರಣವಾಯಿತೆಂದು ನೋಡಿ ಭಗವಾನ್ ಶ್ರೀಕೃಷ್ಣನಿಗೆ ಬಹಳ ಹರ್ಷವಾದ್ದರಿಂದ ಅವನು ಅರ್ಜುನನಿಗೆ ಆಲಿಂಗನ ಕೊಟ್ಟದ್ದಲ್ಲದೆ ಸಿಂಹನಾದ ಮಾಡುತ್ತ ರಥದ ಕೆಳಗೆ ಜಿಗಿದು ಕುಣಿದಾಡಹತ್ತಿದನು. ಇದನ್ನು ನೋಡಿ ಅರ್ಜುನನಿಗೆ ಆಶ್ಚರ್ಯವೆನಿಸಿ ಅರ್ಜುನನು ಶ್ರೀಕೃಷ್ಣನಿಗೆ-“ಶ್ರೀಕೃಷ್ಣಾ, ನಾವು ನಮ್ಮ ಪರಾಕ್ರಮಿ ಬಾಲಕನಾದ ಘಟೋತ್ಕಚನ ಬಗ್ಗೆ ಶೋಕಿಸುವಾಗ ನಿನಗೆ ಅತ್ಯಾನಂದವಾಗಿರುವ ಕಾರಣವೇನು?” ಎಂದು ಕೇಳಿದನು. ಅದಕ್ಕೆ ಶ್ರೀಕೃಷ್ಣನು--“ಅರ್ಜುನಾ, ನಾನು ಕರ್ಣನ ಯಾವ ಅಮೋಘ ಶಕ್ತಿಯಿಂದ ನಿನ್ನನ್ನು ಉಳಿಸಲಿಕ್ಕೆ ಇಷ್ಟು ದಿವಸ ಪ್ರಯತ್ನ ಮಾಡುತ್ತಿದ್ದೆನೋ ಆ ಅಮೋಘ ಶಕ್ತಿಯು ಘಟೋತ್ಕಚನನ್ನು ಮಾತ್ರ ಒಯ್ದುದ್ದರಿಂದ ನೀನು ಇವತ್ತಿನ ದಿವಸ ಜೀವಂತ ಉಳಿದೆ. ಇನ್ನು ಮೇಲೆ ಕರ್ಣನು ಸತ್ತಂತಾಯಿತೆಂದು ತಿಳಿ. ಕರ್ಣನು ಈ ತನ್ನ ಅಮೋಘ ಶಕ್ತಿಯನ್ನು ಯಾರ ಮೇಲೆ ಒಗೆದಾಗ್ಯೂ ಅದು ಅವರ ಜೀವವನ್ನು ತೆಗೆದುಕೊಳ್ಳದೆ ಎಂದಿಗೂ ಬಿಡುತ್ತಿದ್ದಿಲ್ಲ. ಆದುದರಿಂದ ಘಟೋತ್ಕಚನು ಆ ಅಮೋಘ ಶಕ್ತಿಯನ್ನು ತನ್ನ ಮೈಮೇಲೆ ತೆಗೆದುಕೊಂಡದ್ದರಿಂದ ಅವನು ನಿನ್ನ ಮೇಲೆ ಅನಂತ ಉಪಕಾರಗಳನ್ನು ಮಾಡಿದನು” ಎಂದು ಹೇಳಿದನು. ಇದನ್ನು ಕೇಳಿ ಅರ್ಜುನನಿಗೆ ತುಸು ಸಮಾಧಾನವಾಯಿತು. ಪ್ರತಿದಿನ ರಾತ್ರಿ ದುರ್ಯೋಧನನೂ ಕರ್ಣನೂ ಅರ್ಜುನನನ್ನು ದ್ವೈರಥಕ್ಕೆ ಆಹ್ವಾನ ಮಾಡಿ ಅವನ ಮೇಲೆ ಈ ಅಮೋಘ ಶಕ್ತಿಯನ್ನು ಪ್ರಯೋಗ ಮಾಡಿ ಕೊಲ್ಲಬೇಕೆಂದು ವಿಚಾರ ನಡೆಸುತ್ತಿದ್ದರು. ಆದರೆ ಬೆಳಗಾದ ಕೂಡಲೆ ಅವರು ಅದನ್ನು ಮರೆತು ಬೇರೆ ಕಾರ್ಯಕ್ರಮದಲ್ಲಿ ತೊಡಗುತ್ತಿದ್ದರು. ಯುಧಿಷ್ಠಿರನ

ನ್ನು ಹಿಡಿಯುವ ಆಶೆಯಿಂದ ಕೌರವರು ಮೂರು ದಿವಸ ಅರ್ಜುನನನ್ನು ಸಂಸಪ್ತಕ ವೀರರ ಕಡೆಗೆ ತೊಡಗಿಸಿದರು. ನಾಲ್ಕನೇ ದಿವಸ ಕರ್ಣನು ಜಯದ್ರಥನನ್ನು ರಕ್ಷಿಸುವ ಕೆಲಸದಲ್ಲಿ ತೊಡಗಿದ್ದರಿಂದ ಈ ಶಕ್ತಿಯನ್ನು ಅರ್ಜುನನ ಮೇಲೆ ಪ್ರಯೋಗ ಮಾಡಲಿಕ್ಕೆ ಮರೆತನು. ಕೊನೆಗೆ ಆ ರಾತ್ರಿಯ ಯುದ್ಧದಲ್ಲಿ ಘಟೋತ್ಕಚನು ತನ್ನ ರಾಕ್ಷಸೀ ಮಾಯೆಯಿಂದ ಕೌರವರಿಗೆ ಗಂಟಲಗಾಣನಾಗಲಾಗಿ ಕರ್ಣನು ಈ ಅಮೋಘ ಶಕ್ತಿಯನ್ನು ಉಪಯೋಗಿಸಿದ ಹೊರತು ಮಾರ್ಗವೇ ಉಳಿಯಲಿಲ್ಲ. ಒಂದು ವೇಳೆ ಕರ್ಣನ ಮನಸ್ಸಿನಲ್ಲಿ ತಾನು ಸೇನಾಧಿಪತಿಯಾದ ಬಳಿಕ ಅರ್ಜುನನ್ನು ಬೇರೆ ಕಡೆಗೆ ಕರಕೊಂಡು ಹೋಗಿ ಅವನ ಕೂಡ ದ್ವಂದ್ವ ಯುದ್ಧ ಮಾಡಿ ಅವನನ್ನು ಕೊಂದು ಸ್ವತಂತ್ರ ಯಶಸ್ಸನ್ನು ಸಂಪಾದಿಸಬೇಕೆಂದು ಇದ್ದಿರಬೇಕೆಂದು ಕಾಣುತ್ತದೆ. **ಈ ಸಂಸಾರದಲ್ಲಿ ಅನೇಕ ಸಾರೆ ಇಂಥ ಪ್ರಸಂಗಗಳು ಬರುತ್ತವೆ. ಒಮ್ಮೊಮ್ಮೆ ಯಾವದೊಂದು ಕೆಲಸವನ್ನು ತಾವು ಮೊದಲಿಗೆ ಏಕೆ ಮಾಡಲಿಲ್ಲವೆಂದು ತಮಗೇ ಸ್ವತಃ ಆಶ್ಚರ್ಯವಾಗಿ ದುಃಖವೆನಿಸುತ್ತದೆ. ಒಮ್ಮೊಮ್ಮೆ ಸುಲಭ ಕೆಲಸವು ಸಹ ತಮಗೆ ಹೊತ್ತಿಗೆ ಲಕ್ಷ್ಯಕ್ಕೆ ಬರುವದಿಲ್ಲ. ಲಕ್ಷ್ಯಕ್ಕೆ ಬಂದರೂ ಅದನ್ನು ಮಾಡುವ ಮನಸ್ಸು ಆಗುವದಿಲ್ಲ. ಆ ಸಮಯಕ್ಕೆ ಬೇರೊಂದು ವಿಚಾರದಲ್ಲಿ ಮನಸ್ಸು ಮಗ್ನವಾಗುತ್ತದೆ. ಈ ಪ್ರಕಾರ ದೈವೀ ಮಾಯೆಯು ವಿಲಕ್ಷಣವಿರುತ್ತದೆ.** ಕರ್ಣನು ಈ ಪ್ರಕಾರ ತನ್ನ ಕೈಯೊಳಗಿನ ಅಮೋಘ ಶಕ್ತಿಯನ್ನು ತನ್ನ ಶತ್ರುವಾದ ಅರ್ಜುನನ ಮೇಲೆ ಉಪಯೋಗಿಸದೆ ವ್ಯರ್ಥವಾಗಿ ಕಳೆದು ಬಿಟ್ಟನೆಂದು ಧೃತರಾಷ್ಟ್ರನು ಆಶ್ಚರ್ಯವನ್ನು ವ್ಯಕ್ತ ಮಾಡಲು, ಸಂಜಯನು ಅವನಿಗೆ--"ನಾವು ರಾತ್ರಿಯಲ್ಲಿ ಮಾಡಿದ ವಿಚಾರವನ್ನು ಬೆಳಗಾದ ಬಳಿಕ ಶ್ರೀಕೃಷ್ಣನ ಮಾಯೆಯಿಂದ ಮರೆತುಬಿಡುತ್ತಿದ್ದೆವು. ಹಾಗೂ ಶ್ರೀಕೃಷ್ಣನು ದಿನಾಲು ಅರ್ಜುನನ ರಥವನ್ನು ಆದಷ್ಟು ಮಟ್ಟಿಗೆ ಕರ್ಣನಿಂದ ದೂರ ಒಯ್ದು ಅರ್ಜುನನನ್ನು ಉಳಿಸುತ್ತಿದ್ದನು" ಎಂದು ಹೇಳಿದನು. ಈ ಪ್ರಕಾರ ಘಟೋತ್ಕಚನು ಸತ್ತ ಮೇಲೆ ಎರಡೂ ಸೈನ್ಯಗಳು ದಣಿದು ಹೋದ್ದರಿಂದ ಅರ್ಜುನನ ಸೂಚನೆಯ ಮೇರೆಗೆ ಎರಡೂ ಕಡೆಯ ಸೇನಾಪತಿಗಳು

ಚಂದ್ರೋದಯವಾಗುವ ತನಕ ತಮ್ಮ ತಮ್ಮ ಸೈನ್ಯದ ಜನರಿಗೆ ಯುದ್ಧರಂಗ ದಲ್ಲಿಯೇ ಮಲಗಿಕೊಳ್ಳಲಿಕ್ಕೆ ಅಪ್ಪಣೆಯನ್ನು ಮಾಡಿದರು. ಆಗ ಎಲ್ಲ ಮನು ಷ್ಯರೂ ಆನೆ ಕುದುರೆಗಳೂ ಇಡೀ ದಿವಸ ತಮಗೆ ಆದ ಭಯಂಕರ ಶ್ರಮ ದಿಂದ ದಣಿದು ಹೋಗಿದ್ದ ಕಾರಣ ಒಂದು ಕ್ಷಣದೊಳಗೆ ಸತ್ತಂತೆ ಮಲಗಿ ಕೊಂಡು ನಿದ್ರೆಮಾಡಹತ್ತಲು ಯುದ್ಧರಂಗದಲ್ಲಿ ಆ ಯಾವತ್ತರ ಶ್ವಾಸೋ ಚ್ಛ್ವಾಸದ ಹೊರತು ಒಂದೂ ಶಬ್ದವು ಕೇಳಿಸಲಿಲ್ಲ.

ಶಾ. ಶಕದ ಮುಂಚೆ ೩೧೦೪ ನೇ ಮಾರ್ಗಶೀರ್ಷ ಶುದ್ಧ ಚತುರ್ದಶಿ ಯ ದಿವಸ ಭಾರತ ಯುದ್ಧವು ಆರಂಭವಾಗಿ ಭೀಷ್ಮನು ಹತ್ತು ದಿವಸ ಅತಿ ಪರಾಕ್ರಮ ಮಾಡಿ ವದ್ಯ ಅಷ್ಟಮಿಯ ದಿವಸ ತನ್ನ ದೇಹವನ್ನಿಟ್ಟನು. ಮುಂದೆ ನಾಲ್ಕು ದಿವಸ ದ್ರೋಣನ ಸೇನಾಧಿಪತ್ಯದಲ್ಲಿ ಯುದ್ಧವು ನಡೆದು ಮಾರನೇ ದಿವಸ ಅಂದರೆ ವದ್ಯ ಏಕಾದಶಿಯ ಸಾಯಂಕಾಲದಲ್ಲಿ ಜಯದ್ರಥನು ಮಡೆದ ನು. ಮತ್ತು ರಾತ್ರಿಯಲ್ಲಿ ಘಟೋತ್ಕಚನು ಮಡೆದನು. ಘಟೋತ್ಕಚನ ಮರ ಣದ ತರುವಾಯ ಎರಡೂ ಸೈನ್ಯದವರು ಸಮರಾಂಗಣದಲ್ಲಿ ಮಲಗಿಕೊಂಡು ಬೆಳಗುಮುಂಜಾನೆ ನಾಲ್ಕು ಹೊಡೆಯುವ ತನಕ ನಿದ್ರೆ ಮಾಡಿದರು. ಅನಂತರ ವದ್ಯ ದ್ವಾದಶಿಯ ಚಂದ್ರನು ಉದಯೋನ್ಮುಖನಾಗಿ ಪೂರ್ವ ಕಡೆಯ ಕ್ಷಿತಿ ಜದ ಮೇಲೆ ಮೆಲ್ಲಮೆಲ್ಲನೆ ಬಂದು ಸಮರಾಂಗಣದ ಮೇಲೆ ಸ್ವಚ್ಛವಾದ ಬೆಳ ದಿಂಗಳವನ್ನು ಹರಡಿದನು. ಆ ಬಳಿಕ ಸೈನಿಕರು ಎಚ್ಚರರಾಗಿ ಪುನಃ ಯುದ್ಧ ವನ್ನು ಮಾಡಲಿಕ್ಕೆ ಆರಂಭ ಮಾಡಿದರು. ಆಗ ದುರ್ಯೋಧನನು ದ್ರೋಣ ನಿಗೆ-“ಆಚಾರ್ಯರೇ, ನೀವು ನಿಮ್ಮ ಪ್ರಿಯ ಶಿಷ್ಯನ ಮೇಲಿನ ಪ್ರೇಮದಿಂದಾ ಗಲಿ, ನನ್ನ ದುರ್ಭಾಗ್ಯದಿಂದಾಗಲಿ ಪಾಂಡವರ ಬಗ್ಗೆ ದಯವನ್ನು ತೋರಿಸು ತ್ತಿದ್ದೀರಿ. ಇನ್ನು ಮುಂದೆ ಈ ಪ್ರಕಾರ ಮಾಡಬೇಡಿರಿ. ನೀವು ಇನ್ನುಮೇಲೆ ನನ್ನ ಸಲುವಾಗಿ ದಣಿದವರು, ದಣಿಯದೆ ಇರುವವರು, ಅಸ್ತ್ರವಿದ್ಯೆಯನ್ನು ಬಲ್ಲವರು, ಅಸ್ತ್ರವಿದ್ಯೆಯನ್ನು ಅರಿಯದವರು ಎಂಬ ಭೇದಾಭೇದ ಮಾಡದೆ ಅಥವಾ ಯಾರಿಗೂ ದಯ ತೋರಿಸದೆ ಪಾಂಡವ ಸೈನ್ಯವನ್ನು ಪೂರ್ಣವಾಗಿ ನಾಶ ಮಾಡಿರಿ” ಎಂದು ಹೇಳಿದನು. ಅದಕ್ಕೆ ದ್ರೋಣನು--“ಇವತ್ತಿನ ವರೆಗೆ ಶಕ್ಯವಿದ್ದಷ್ಟದನ್ನು ನಾನು ಮಾಡುತ್ತಲೇ ಬಂದಿರುವೆನು. ಆದರೂ

ಈಹೊತ್ತು ನಾನು ಅಸ್ತ್ರವಿದ್ಯೆ ಗೊತ್ತಿದ್ದವರಿಗೂ, ಅಸ್ತ್ರವಿದ್ಯೆ ಗೊತ್ತಿಲ್ಲದವರಿಗೂ ಕೂಡಿಯೇ ನಿನ್ನ ಹೇಳಿಕೆಯಂತೆ ಕೊಂದುಬಿಡುತ್ತೇನೆ. ನಾನು ಪಾಂಚಾಲರನ್ನು ಇವತ್ತಿನ ದಿವಸ ಕೊಂದುಬಿಡುವ ತನಕ ನನ್ನ ಮೈಯೊಳಗಿನ ಕವಚವನ್ನು ಸಹ ತೆಗೆಯುವದಿಲ್ಲ. ಆದರೆ ಅರ್ಜುನನ ಮೇಲೆ ನೀನೇ ಸಾಗಿ ಹೋಗು. ಅರ್ಜುನನ ವೈರಭಾವಕ್ಕೆ ನೀನೇ ಆದಿಕಾರಣನಿರುವೆ. ಆದುದರಿಂದ ಅರ್ಜುನನು ದಣಿದಿರುವಾಗ ಅವನ ಮೇಲೆ ಸಾಗಿ ಹೋಗಿ ಅವನ ಮೇಲಿನ ಸೇಡು ತೀರಿಸಿಕೋ. ಸುಮ್ಮನೆ ಇತರ ಕ್ಷತ್ರಿಯರನ್ನು ಏಕೆ ನಾಶಪಡಿಸುತ್ತೀ?" ಎಂದು ನುಡಿದು ಸಿಟ್ಟಿನಿಂದಲೂ ಆವೇಶದಿಂದಲೂ ರಣಾಂಗಣದ ಮಧ್ಯಭಾಗವನ್ನು ಬಿಟ್ಟು ಉತ್ತರ ಕಡೆಗೆ ಹೋಗಿ ಅಲ್ಲಿ ನಿಂತಿದ್ದ ಪಾಂಚಾಲರ ಮೇಲೆ ತನ್ನ ಅಸ್ತ್ರಗಳನ್ನು ಒಗೆಯಲಿಕ್ಕೆ ಆರಂಭ ಮಾಡಿದನು. ಪಾಂಚಾಲರ ಸಹಾಯಕ್ಕೆ ಚೇದಿ ಮತ್ತು ಮತ್ಸ್ಯರು ಹೋದರು. ಅವರೆಲ್ಲರ ಮೇಲೂ ದ್ರೋಣನು ತನ್ನ ಅಸ್ತ್ರಗಳನ್ನು ಒಗೆದು ದ್ರುಪದನ ಮೂರು ಮಂದಿ ಮಕ್ಕಳನ್ನು ಕೊಂದದ್ದಲ್ಲದೆ ಪ್ರತ್ಯಕ್ಷ ದ್ರುಪದನಿಗೂ ವಿರಾಟನಿಗೂ ಯಮಸದನಕ್ಕೆ ಕಳುಹಿಸಿದನು. ಇದನ್ನು ಕಂಡು ಧೃಷ್ಟದ್ಯುಮ್ನನು –"ಇವತ್ತಿನ ದಿವಸ ನಾನು ದ್ರೋಣನನ್ನು ಕೊಲ್ಲದೆ ಬಿಟ್ಟರೆ ನನ್ನ ಪುಣ್ಯವೆಲ್ಲ ನಷ್ಟವಾಗಿ ಹೋಗಲಿ" ಎಂದು ಪ್ರತಿಜ್ಞೆಯನ್ನು ಮಾಡಿ ದ್ರೋಣನ ಮೇಲೆ ಸಾಗಿ ಹೋದನು. ಇಷ್ಟರಲ್ಲಿ ಸೂರ್ಯೋದಯವಾಗಲು ಎಲ್ಲ ಕ್ಷತ್ರಿಯರು ತಮ್ಮ ಯುದ್ಧವನ್ನು ಸ್ವಲ್ಪ ಹೊತ್ತು ನಿಲ್ಲಿಸಿ ತಮ್ಮ ನಿತ್ಯಕ್ರಮವನ್ನು ಮುಗಿಸಿಕೊಂಡ ತರುವಾಯ ಪುನಃ ಘನಘೋರವಾದ ಯುದ್ಧವನ್ನು ಆರಂಭ ಮಾಡಿದರು. "ಸಾಯುವೆನು ಅಥವಾ ಕೊಲ್ಲುವೆನು" ಎಂಬ ನಿಶ್ಚಯದಿಂದ ಯುದ್ಧ ಮಾಡಲಿಕ್ಕೆ ನಿಂತುಕೊಂಡಿದ್ದ ದ್ರೋಣನನ್ನು ನೋಡಿ ಇವನನ್ನು ಯಾವ ರೀತಿಯಿಂದ ಬಲಹೀನ ಮಾಡಬೇಕೆಂದು ಪಾಂಡವರಿಗೆ ಬಹಳ ಚಿಂತೆಯು ಉತ್ಪನ್ನವಾಯಿತು. ಪಾಂಡವ ಸೈನ್ಯದ ಬಲಪಾರ್ಶ್ವದ ಮೇಲೆ ದ್ರೋಣನು ಅನೇಕ ಅಸ್ತ್ರಗಳನ್ನು ಒಗೆದು ಭಯಂಕರವಾದ ನಾಶವನ್ನು ನಡೆಸಿದ್ದರಿಂದ ಈ ಸೈನ್ಯವೆಲ್ಲ ಉಳಿಯುವದೋ ಇಲ್ಲೋ ಎಂದು ಅವರಿಗೆ ಭಯವುಂಟಾಯಿತು. ಎಲ್ಲೆಲ್ಲಿ ಸಹಾಯದ ಅಗತ್ಯವು ಕಂಡುಬರುತ್ತಿತ್ತೋ ಅಲ್ಲಲ್ಲಿ ಶ್ರೀಕೃಷ್ಣನು ಅರ್ಜುನನ

ರಥವನ್ನು ಒಯ್ದು ನಿಲ್ಲಿಸುತ್ತಿದ್ದನು. ಆದರೂ ದ್ರೋಣನ ಮುಂದೆ ಅರ್ಜುನ
ನ ಪ್ರಯತ್ನವು ಏನೂ ನಡೆಯಲಿಲ್ಲ. ಪಾಂಚಾಲ ಸೈನ್ಯವು ಬಹುಶಃ ಇಲ್ಲ
ದಂತೆ ಆದುದರಿಂದಲೂ ದೃಷ್ಟದ್ಯುಮ್ನನ ಪ್ರತಿಜ್ಞೆಯು ನಿರರ್ಥಕವಾಗುವ
ಹೊತ್ತು ಬಂದದ್ದರಿಂದಲೂ ಶ್ರೀಕೃಷ್ಣನು ಧರ್ಮಯುದ್ಧವನ್ನು ಬಿಟ್ಟು ಕೂಟ
ಯುದ್ಧವನ್ನು ಮಾಡಬೇಕೆಂದೆಣಿಸಿ--“ ನೀವು ಎಡಪಾರ್ಶ್ವದಲ್ಲಿ ಯುದ್ಧಮಾಡ
ಲಿಕ್ಕೆ ನಿಂತುಕೊಂಡಿದ್ದ ಅಶ್ವತ್ಥಾಮನು ಸತ್ತನೆಂದು ಹೂಲಿಯನ್ನು ಎಬ್ಬಿಸಿರಿ.
ಅಂದರೆ ದ್ರೋಣನು ಪುತ್ರಶೋಕದಿಂದ ಹತವೀರ್ಯನಾಗುವನು ” ಎಂದು
ಪಾಂಡವ ವೀರರಿಗೆ ಸೂಚಿಸಿದನು. ಶ್ರೀಕೃಷ್ಣನ ಈ ಸೂಚನೆಯು ಅರ್ಜುನನ
ಮನಸ್ಸಿಗೆ ಬರಲಿಲ್ಲ. ಆದರೆ ಯುಧಿಷ್ಠಿರನು ಈ ಪ್ರಸಂಗವು ಕಠಿಣವಿರುತ್ತದೆಂದು
ನೋಡಿ ಬಹಳ ಕಷ್ಟದಿಂದ ಒಪ್ಪಿಕೊಂಡನು. ಆ ಬಳಿಕ ಭೀಮನು ತಮ್ಮ
ಕಡೆಗೆ ತಮ್ಮ ಸಹಾಯಕ್ಕಾಗಿ ಬಂದು ನಿಂತಿದ್ದ ಮಾಲವ ದೇಶದ ಇಂದ್ರವ
ರ್ಮನ ಅಶ್ವತ್ಥಾಮವೆಂಬ ಆನೆಯನ್ನು ಕೊಂದನು. ಆಗ ಪಾಂಡವರು “ ಅಶ್ವ
ತ್ಥಾಮನು ಸತ್ತನು ” ಎಂದು ಹೂಲಿಯನ್ನು ಎಬ್ಬಿಸಿದರು. ಈ ಸುದ್ದಿಯು
ದ್ರೋಣನ ಕಿವಿಗೆ ಮುಟ್ಟಲು ಅವನು ತನ್ನ ಶಸ್ತ್ರಪ್ರಯೋಗವನ್ನು ನಿಲ್ಲಿಸಿ ಇದರ
ಸತ್ಯತೆಯನ್ನು ತಿಳಿದುಕೊಂಡು ಬರುವದಕ್ಕಾಗಿ ತನ್ನೊಬ್ಬ ರಾಹುತನನ್ನು ತನ್ನ
ಎದುರಿಗೆ ನಿಂತುಕೊಂಡಿದ್ದ ಯುಧಿಷ್ಠಿರನ ಕಡೆಗೆ ಕಳಿಸಿದನು. ಅದಕ್ಕೆ ಯುಧಿ
ಷ್ಠಿರನು---“ ಅಶ್ವತ್ಥಾಮನು ಸತ್ತನು. ಆದರೆ ಮನುಷ್ಯನೋ ಆನೆಯೋ
ಗೊತ್ತಿಲ್ಲ” **(ಅಶ್ವತ್ಥಾಮಾ ಹತಃ ನರೋವಾ ಕುಂಜರೋವಾ)** ಎಂದು
ಉತ್ತರ ಕೊಟ್ಟನು. ಧರ್ಮನು ಎಂದೂ ಅಸತ್ಯ ಮಾತಾಡಿದ್ದಿಲ್ಲವಾದ ಕಾರಣ
ಅವನ ರಥವು ನೆಲಕ್ಕೆ ಮುಟ್ಟದೆ ಅಂತರದಿಂದ ನಡೆಯುತ್ತಿತ್ತು. ಆದರೆ ಅವನ
ಬಾಯಿಂದ ಅಶ್ವತ್ಥಾಮನೆಂಬವನು ಸತ್ತನೆಂಬ ಸಂದಿಗ್ಧ ಉತ್ತರವು ಬಂದ
ಕೂಡಲೆ ಅವನ ರಥವು ನೆಲಕ್ಕೆ ಮುಟ್ಟಿತು. ಧರ್ಮನು ಕೊಟ್ಟ ಈ ಸಂದಿಗ್ಧ
ಉತ್ತರವನ್ನು ತನ್ನ ರಾಹುತನ ಮುಖಾಂತರ ಕೇಳಿ ದ್ರೋಣನು ಆಶ್ಚರ್ಯ
ಪಟ್ಟನು. ದ್ರೋಣನು ನಾಲ್ಕು ದಿವಸ ಬಿಟ್ಟೂ ಬಿಡದೆ ಯುದ್ಧ ಮಾಡಿ ದಣಿದಿ
ದ್ದನು. ಅದರಲ್ಲಿಯೂ ಅವನು ತನ್ನ ಮಗನ ಮರಣದ ಕೆಟ್ಟ ಸುದ್ದಿಯನ್ನು
ಕೇಳಿದ್ದರಿಂದ ಕೈಕಾಲು ಕಳಕೊಂಡನು. ಆಗ ಅವನಿಗೆ ಯಾವ ಅಸ್ತ್ರಗಳನ್ನು

ಪ್ರಯೋಗ ಮಾಡಬೇಕೆಂಬ ನೆನಪು ಸಹ ಉಳಿಯಲಿಲ್ಲ. ಅವನು ಧೃಷ್ಟದ್ಯು ಮ್ನನ ಮೇಲೆ ಒಗೆಯುತ್ತಿದ್ದ ಬಾಣಗಳು ಸಹ ಅವನ ಬತ್ತಳಿಕೆಯ ಹೊರಗೆ ಬಾರದಾದವು. ಆದುದರಿಂದ ಅವನು ತನ್ನ ಧನುಸ್ಸವನ್ನು ಕೆಳಗೆ ಇಟ್ಟು ಕೊಂಡು ಸಮಾಧಿ ಹತ್ತಿದವನಂತೆ ಕಣ್ಣು ಮುಚ್ಚಿಕೊಂಡು ಒಂದು ಕ್ಷಣ ಹೊತ್ತು ಕುಳಿತನು. ಇದನ್ನು ನೋಡಿ ಧೃಷ್ಟದ್ಯುಮ್ನನು ತನ್ನ ರಥದ ಕೆಳಗೆ ಹಾರಿಕೊಂಡು ದ್ರೋಣನ ರಥವನ್ನೇರಿ ಅಲ್ಲಿ ಧ್ಯಾನಸ್ಥನಾಗಿ ಕುಳಿತಿದ್ದ ದ್ರೋಣನ ಚಂಡಿಕೆಯನ್ನು ಹಿಡಿದು ತನ್ನ ಕೈಯೊಳಗಿನ ಶಸ್ತ್ರದಿಂದ ಅವನ ಶಿರಸ್ಸನ್ನು ಕಡಿದನು. ಈ ಪ್ರಕಾರ ದ್ರೋಣನ ಅಂತ್ಯವಾಯಿತು.

ಧೃಷ್ಟದ್ಯುಮ್ನನು ದ್ರೋಣನನ್ನು ಕೊಂದು ಸಿಂಹನಾದವನ್ನು ಮಾ ಡುತ್ತ ರಣಾಂಗಣದಲ್ಲಿ ಜಿಗಿದದ್ದನ್ನು ದ್ರೋಣನ ಸೈನಿಕರು ನೋಡಿ ಸಮ ರಾಂಗಣವನ್ನು ಬಿಟ್ಟು ಓಡಿ ಹೋಗಲಿಕ್ಕೆ ಆರಂಭ ಮಾಡಿದರು. ಶಲ್ಯ, ಶಕುನಿ, ದುರ್ಯೋಧನ, ಕರ್ಣರು ಭಯದಿಂದ ಯುದ್ಧ ಬಿಟ್ಟು ತಿರುಗಿ ಹೊರ ಟರು. ಅಶ್ವತ್ಥಾಮನು ಯುದ್ಧ ಮಾಡಲಿಕ್ಕೆ ನಿಂತುಕೊಂಡ ಎಡಪಾರ್ಶ್ವದ ಸೈನ್ಯದ ಜನರು ಸಹ ಓಡಿ ಹೋಗಲಿಕ್ಕೆ ಹತ್ತಿದರು. ಇದನ್ನು ನೋಡಿ ಅಶ್ವ ತ್ಥಾಮನು ಆಶ್ಚರ್ಯದಿಂದ ದುರ್ಯೋಧನನ ಕಡೆಗೆ ಹೋಗಿ ಈ ಪ್ರಕಾರ ಏಕೆ ಆಯಿತೆಂದು ಕೇಳಿದನು. ಆಗ ಅವನು ಅಲ್ಲಿ ನಡೆದ ಯಾವತ್ತು ವೃತ್ತಾಂ ತವನ್ನು ಹೇಳಲು ಅಶ್ವತ್ಥಾಮನಿಗೆ ಅಂಗಾಲಿನಿಂದ ನಡುನೆತ್ತಿಯ ತನಕ ರಂಜಕ ಒರಸಿದಂತೆ ಆಯಿತು. ಬಳಿಕ ಅವನು--“ಧರ್ಮನು ಅಧರ್ಮದಿಂದ ನನ್ನ ತಂದೆಯನ್ನು ಕೊಲ್ಲಿಸಿದನೇ? ನಾನು ಜೀವಂತ ಇರಲು ಆ ಕ್ಷುದ್ರ ಧೃಷ್ಟದ್ಯು ಮ್ನನು ನನ್ನ ಪೂಜ್ಯನಾದ ಪಿತನ ಚಂಡಿಕೆಯನ್ನು ಹಿಡಿದು ಅವನ ರುಂಡ ವನ್ನು ಕತ್ತರಿಸಿದನೇ? ಯುದ್ಧದಲ್ಲಿ ಜಯಾಪಜಯ ಬರುವದು ಈಶಾಧೀನವಿ ರುವದು. ಆದರೆ ನನ್ನ ಪಿತನು ತನ್ನ ಶಸ್ತ್ರವನ್ನು ಕೆಳಗೆ ಇಟ್ಟಿರುವಾಗ ಅವನಿಗೆ ಇಂಥ ಅಗೌರವದ ಮರಣವು ಬಂದದ್ದು ದೊಡ್ಡ ದುರ್ಭಾಗ್ಯವೇ ಸರಿ. ಇರಲಿ. ನೀನು ಹೆದರಬೇಡ. ಅರ್ಜುನನಿಗೂ ವಾಸುದೇವನಿಗೂ ಸಹ ಬಾರದೆ ಇರು ವಂಥ ಅಸ್ತ್ರಪ್ರಯೋಗಗಳನ್ನು ನಾನು ಬಲ್ಲೆನು. ನಾನು ಇವತ್ತಿನ ದಿವಸ ಧೃಷ್ಟದ್ಯುಮ್ನನನ್ನೂ ಧರ್ಮನನ್ನೂ ಸಂಹಾರ ಮಾಡುತ್ತೇನೆ” ಎಂದು

ಹೇಳಿ ಆವೇಶದಿಂದ ರಣಾಂಗಣದ ಮುಂದೆ ಬಂದನು. ಆಗ ಯಾವತ್ತು ಕೌರವ ಸೈನಿಕರು ಜಯಸಂಪಾದನೆಯ ಆಶೆಯಿಂದ ಪುನಃ ವೀರಾವೇಶವುಳ್ಳವರಾಗಿ ಯುದ್ಧ ಮಾಡಲಿಕ್ಕೆ ತಿರುಗಿ ಕೂಡಿದರು. ಕೌರವರು ಆನಂದದಿಂದ ಊದಿದ ಶಂಖಧ್ವನಿಯನ್ನು ಕೇಳಿ ಪಾಂಡವರಿಗೆ ಆಶ್ಚರ್ಯವೆನಿಸಿತು. "ಕೌರವರ ಸೈನ್ಯವು ಪರಾಜಿತವಾಗಿ ಓಡಿ ಹೋಗುತ್ತಿದ್ದುದನ್ನು ಯಾರು ತಿರುಗಿ ತೆಗೆದು ಕೊಂಡು ಬರುತ್ತಿರುವರು?" ಎಂದು ಯುಧಿಷ್ಠಿರನು ಅರ್ಜುನನಿಗೆ ಕೇಳಲಾಗಿ ಅರ್ಜುನನು--"ಧೃಷ್ಟದ್ಯುಮ್ನನು ನನ್ನ ಶಸ್ತ್ರಾಸ್ತ್ರ ಗುರುವಾದ ದ್ರೋಣ ನನ್ನು ಅಧರ್ಮದಿಂದ ಕೊಂದದ್ದಕ್ಕಾಗಿ ಅವನ ಮಗನಾದ ಅಶ್ವತ್ಥಾಮನು ಸಿಂಹಗರ್ಜನೆಯನ್ನು ಮಾಡುತ್ತ ಅವನ ಮೇಲೆ ಸಾಗಿ ಬರುತ್ತಿದ್ದಾನೆ. ನೀನು ಧರ್ಮದ ವೇಷವನ್ನು ಹಾಕಿಕೊಂಡು ಅಧರ್ಮದಿಂದ ದ್ರೋಣನನ್ನು ವಂಚಿ ಸಿದೆ. ನಿನಗೆ ಧೃಷ್ಟದ್ಯುಮ್ನನನ್ನು ಉಳಿಸಿಕೊಳ್ಳುವದು ಶಕ್ಯವಿದ್ದರೆ ನೀನೇ ಉಳಿಸಿಕೋ. ರಾಜ್ಯಲೋಭದ ಸಲುವಾಗಿ ನಾನು ನನ್ನ ವೃದ್ಧ ಗುರು ವನ್ನು ಘಾತಪಡಿಸುವದಕ್ಕಿಂತ ನಾನೇ ಹತನಾಗಿದ್ದರೆ ನೆಟ್ಟಗಾಗುತ್ತಿತ್ತು" ಎಂದು ತನ್ನ ಕಣ್ಣೊಳಗಿಂದ ಟಪಟಪನೆ ಕಣ್ಣೀರಿನ ಹನಿಗಳನ್ನು ಸುರಿಸಿದನು. ಆದಕ್ಕೆ ಭೀಮ ಮತ್ತು ಧೃಷ್ಟದ್ಯುಮ್ನರು ಅರ್ಜುನನಿಗೆ ದ್ರೋಣನ ಅಧರ್ಮ ಕೃತಿಯನ್ನು ವಿವರಿಸಿ ಹೇಳಿ ಅರ್ಜುನನ ಮೇಲೆ ಸಿಟ್ಟಿಗೆದ್ದರು. ಅರ್ಜುನ ನಂತೆ ದ್ರೋಣನ ಕೈಯಲ್ಲಿ ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿತಂಥ ಸಾತ್ಯಕಿಯು ಧೃಷ್ಟದ್ಯುಮ್ನನ ಮೇಲೆ ಸಿಟ್ಟಿಗೆದ್ದು ತನ್ನ ಕೈಯೊಳಗಿನ ಗದೆಯನ್ನು ಮೇ ಲಕ್ಕೆ ಎತ್ತಿ ಧೃಷ್ಟದ್ಯುಮ್ನನನ್ನು ಹೊಡೆಯಲಿಕ್ಕೆ ಹೋಗಲು ಶ್ರೀಕೃಷ್ಣನು ಭೀಮನ ಮಧ್ಯಸ್ತಿಕೆಯಿಂದ ಅವರ ಜಗಳವನ್ನು ಅಷ್ಟಕ್ಕೇ ಬಿಡಿಸಿದನು.

ಈ ಪ್ರಕಾರ ಪಾಂಡವ ವೀರರು ತಮ್ಮೊಳಗೆ ಜಗಳಾಡುತ್ತಿರುವಾಗ ಅಶ್ವತ್ಥಾಮನು ಪಾಂಡವ ಸೈನ್ಯದ ಮೇಲೆ ನಾರಾಯಣಾಸ್ತ್ರವನ್ನು ಪ್ರಯೋಗ ಮಾಡಿದನು. ಇದರಿಂದ ಸಾವಿರಾರು ಶಸ್ತ್ರಾಸ್ತ್ರಗಳು ಪಾಂಡವ ಸೈನ್ಯದ ಮೇಲೆ ಬೀಳಲಾಗಿ ಅವುಗಳನ್ನು ಪ್ರತೀಕಾರ ಮಾಡಿದ ಪಾಂಡವ ವೀರರು ಸತ್ತು ನೆಲ ದ ಮೇಲೆ ಬೀಳಹತ್ತಿದರು. ಇದನ್ನು ಅರ್ಜುನನು ಕಣ್ಣಿಂದ ನೋಡಿದರೂ ತನ್ನ ಧನುಷ್ಯವನ್ನು ಎತ್ತದೆ ಸುಮ್ಮನೆ ನಿಂತಿದ್ದನು. ಇದನ್ನು ನೋಡಿ ಧರ್ಮ

ನಿಗೆ ಬಹಳ ಕೆಡಕೆನಿಸಿ—“ ಧೃಷ್ಟದ್ಯುಮ್ನಾ, ನೀನು ರಣಭೂಮಿಯನ್ನು ಬಿಟ್ಟು ನಿನ್ನ ದೇಶಕ್ಕೆ ಹೋಗು. ಸಾತ್ಯಕೀ, ನೀನೂ ದ್ವಾರಕೆಗೆ ಹೋಗು. ಇತರ ರಾಜರೇ, ನೀವೂ ರಣಭೂಮಿಯನ್ನು ಬಿಟ್ಟು ತೆರಳಿರಿ. ವಾಸುದೇವನು ಜಗತ್ತಿನ ಕಲ್ಯಾಣಕರ್ತನು ಇರುವದರಿಂದ ಅವನೂ ತನಗೆ ಉಚಿತ ಮಾರ್ಗವನ್ನು ಸ್ವೀಕಾರ ಮಾಡಲಿ. ನಾನು ನನ್ನ ಬಂಧುಗಳನ್ನು ಕೂಡಿಕೊಂಡು ಈ ರಣಭೂಮಿಯ ಮೇಲೆ ಬಿದ್ದು ಪ್ರಾಣ ಕೊಡುವೆನು” ಎಂದು ನಿರಾಶೆಯಿಂದ ಹೇಳಿದನು. ಧರ್ಮನು ಮಾಡಿದ ಈ ನಿರಾಶೆಯ ಭಾಷಣವನ್ನು ಕೇಳಿ ಭೀಮನು ಬಹಳ ಸಂತಾಪದಿಂದ ತನ್ನ ಗದೆಯನ್ನು ತೆಗೆದುಕೊಂಡು ಅಶ್ವತ್ಥಾಮನ ಮೇಲೆ ಸಾಗಿ ಹೋಗುವದಕ್ಕಾಗಿ ಹೊರಟನು. ಆಗ ಶ್ರೀಕೃಷ್ಣನು —“ ಎಲೈ ಯಾವತ್ತು ರಾಜರೇ, ವೀರರೇ, ನೀವು ಈ ನಾರಾಯಣಾಸ್ತ್ರಕ್ಕೆ ನಮಸ್ಕಾರ ಮಾಡಿರಿ. ಯಾರೂ ಇದನ್ನು ಪ್ರತೀಕಾರ ಮಾಡಬೇಡಿರಿ. ನೀವು ಇದನ್ನು ಪ್ರತೀಕಾರ ಮಾಡಿದರೆ ಸತ್ತು ಹೋದೀರಿ” ಎಂದು ಕೂಗಿ ಹೇಳಿದನು. ಭೀಮನು ಶ್ರೀಕೃಷ್ಣನ ಮಾತಿಗೆ ಸಹ ಕಿವಿಗೊಡದೆ ಮುಂದೆ ಸಾಗಲಿಕ್ಕೆ ಹತ್ತಿದ್ದನು. ಆಗ ಅರ್ಜುನನು—“ ಭೀಮಾ! ಭೀಮಾ! ನಾರಾಯಣಾಸ್ತ್ರದ ಮುಂದೆಯೂ, ಬ್ರಾಹ್ಮಣರ ಮುಂದೆಯೂ, ಗೋವುಗಳ ಮುಂದೆಯೂ ನಾನು ನನ್ನ ಗಾಂಡೀವ ಧನುಷ್ಯವನ್ನು ಕೆಳಗೆ ಇಡುತ್ತೇನೆ. ನೀನು ಸರ್ವಥಾ ಯುದ್ಧ ಮಾಡಬೇಡ” ಎಂದು ಭೀಮನಿಗೆ ಹೇಳಿದನು. ಆಗ ಯಾವತ್ತರು ತಮ್ಮ ತಮ್ಮ ಶಸ್ತ್ರಗಳನ್ನು ಕೆಳಗೆ ಇಟ್ಟು ನಾರಾಯಣಾಸ್ತ್ರಕ್ಕೆ ನಮಸ್ಕಾರ ಮಾಡಿದರು. ಇದರಿಂದ ಆ ಅಸ್ತ್ರವು ತನ್ನಿಂದ ತಾನೇ ಶಾಂತವಾಯಿತು. ಇದನ್ನು ಕಂಡು ಅಶ್ವತ್ಥಾಮನಿಗೆ ಮತ್ತಷ್ಟು ಸಿಟ್ಟು ಬಂತು. ಆಗ ಅವನು ಅಗ್ನಿಶಿರ ಅಸ್ತ್ರವನ್ನು ಪಾಂಡವ ಸೈನ್ಯದ ಮೇಲೆ ಒಗೆದನು. ಈ ಅಗ್ನಿಯ ಪ್ರಚಂಡವಾದ ಜ್ವಾಲೆಯಿಂದ ಪಾಂಡವರು ಭಯಂಕರವಾಗಿ ಸುಟ್ಟು ಹೋಗಲಿಕ್ಕೆ ಹತ್ತಿದರು. ನಾಲ್ಕೂ ಕಡೆಗೆ ಅಗ್ನಿಜ್ವಾಲೆಯ ಹೊರತಾಗಿ ಏನೂ ಕಾಣಿಸಲಿಲ್ಲ. ಸಾವಿರಾರು ಜನರು ಸುಟ್ಟು ಹೋದರು. ಆದರೆ ಶ್ರೀಕೃಷ್ಣನೂ ಅರ್ಜುನನೂ ಮಾತ್ರ ತಮ್ಮ ರಥದ ಮೇಲೆ ಸುರಕ್ಷಿತವಾಗಿ ಇರುವದನ್ನು ನೋಡಿ ಅಶ್ವತ್ಥಾಮನು—“ ಧಿಕ್ಕಾರ, ಧಿಕ್ಕಾರ” “ ಅಸತ್ಯ, ಅಸತ್ಯ ” ಎಂದು ಅನ್ನುತ್ತ ತನ್ನ ರಥದ ಕೆಳಗೆ ಜಿಗಿದು ದುಃಖದಿಂದ ಉಸುರುಗಳೆಯುತ್ತ ರಣಭೂಮಿಯನ್ನು ಬಿಟ್ಟು ಹೊರಟು ಹೋದನು.

ಆ ದಿವಸ ಅಂದರೆ ಯುದ್ಧದ ಹದಿನಾರನೇ ದಿವಸ ಮಧ್ಯಾಹ್ನದ ಎರಡು ಘಂಟೆಯ ಸುಮಾರಕ್ಕೆ ಎರಡೂ ಸೈನ್ಯದವರು ಪುನಃ ರಣಭೂಮಿಗೆ ಬಂದರು. ಎರಡೂ ಕಡೆಯವರಲ್ಲಿ ಉತ್ಸಾಹವಿದ್ದಿಲ್ಲ. ಪಾಂಡವರು ಧೃಷ್ಟದ್ಯುಮ್ನನ ನಿಂದ್ಯ ಕೃತ್ಯದಗೋಸ್ಕರ ತಮ್ಮ ತಮ್ಮೊಳಗೆ ಮನಸ್ತಾಪ ಮಾಡಿಕೊಂಡಿದ್ದರು. ಇದಲ್ಲದೆ ಅವರ ಸೈನ್ಯದಲ್ಲಿ ಅಗ್ನ್ಯಸ್ತ್ರದಿಂದ ಭಯಂಕರ ಹಾನಿಯಾಗಿತ್ತು. ಇತ್ತ ಕಡೆಗೆ ಕೌರವರು ದ್ರೋಣನ ಮರಣದಿಂದ ಮತ್ತು ಅಶ್ವತ್ಥಾಮನಿಗಾದ ನಿರಾಶೆಯಿಂದ ಬಹಳ ಶೋಕಾಕುಲರಾಗಿದ್ದರು. ಆದುದರಿಂದ ಎರಡೂ ಸೈನ್ಯ ದವರು ಅವತ್ತಿನ ಮಧ್ಯಾಹ್ನವನ್ನು ಮತ್ತು ಇಡೀ ರಾತ್ರಿಯನ್ನು ಬಹಳ ದುಃಖದಿಂದ ಕಳೆದ ತರುವಾಯ ಮರುದಿವಸ ಮುಂಜಾನೆ ಎದ್ದು ನಿತ್ಯಸಾಂಪ್ರ ದಾಯದಂತೆ ಅಗ್ನಿಯ ಮತ್ತು ಸೂರ್ಯನ ಉಪಾಸನೆಯನ್ನು ಮಾಡಿ ರಣಭೂ ಮಿಗೆ ಬಂದರು. ಕರ್ಣನು ಪಾಂಡವರನ್ನು ಸಂಹಾರ ಮಾಡುವನೆಂಬ ವಿಶ್ವಾಸ ವು ದುರ್ಯೋಧನನಿಗೆ ಮೊದಲಿನಿಂದಲೂ ಇದ್ದುದರಿಂದ ದುರ್ಯೋಧನನು ಕರ್ಣನಿಗೆ ವಿಧಿಯುಕ್ತವಾಗಿ ಸೇನಾಧಿಪತ್ಯದ ಅಭಿಷೇಕವನ್ನು ಮಾಡಿದನು. ಆ ಮೇಲೆ ಕರ್ಣನು ತಾನು ಇಂದೇ ಪಾಂಡವರನ್ನು ಪರಾಜಯ ಮಾಡಿ ಕೊ ಲ್ಲುತ್ತೇನೆಂದು ಅಗ್ಗಳಿಕೆಯ ಮಾತುಗಳನ್ನಾಡುತ್ತ ಅನೇಕ ಶಸ್ತ್ರ, ಧನುಷ್ಯ, ಬಾಣ ಮುಂತಾದ ಆಯುಧಗಳನ್ನು ತನ್ನ ರಥದಲ್ಲಿ ತುಂಬಿಕೊಂಡು ರಣಾಂಗಣ ಕ್ಕೆ ಬಂದು ಮಕರ ವ್ಯೂಹವನ್ನು ರಚಿಸಿ ಪಾಂಡವರ ಮೇಲೆ ಸಾಗಿಹೋದನು. ಪಾಂಡವರ ಸೈನ್ಯವಾದರೂ ಸಜ್ಜಾಗಿ ನಿಂತಿತ್ತು. ಆ ದಿವಸ ಪುನಃ ದೆವ್ವ, ನರಿ, ತೋಳ ಮುಂತಾದವುಗಳಿಗೆ ಆನಂದವನ್ನುಂಟುಮಾಡುವ ಯುದ್ಧವು ಆರಂಭ ವಾಗಿ ಆನೆ, ರಥ, ಕುದುರೆಗಳ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದ ಸಾವಿ ರಾರು ಮಂದಿ ಪಾಂಡವ ವೀರರು ಸ್ವರ್ಗದಿಂದ ಪುಣ್ಯಕ್ಷೀಣರು ಬೀಳುವಂತೆ ಭೂಮಿಯ ಮೇಲೆ ಬೀಳಹತ್ತಿದರು. ಮಹಾರಥಿಕನಾದ ಕರ್ಣನು ಒಂದು ಕ್ಷಣ ದಲ್ಲಿ ಒಂದು ಕಡೆಗೆ, ಇನ್ನೊಂದು ಕ್ಷಣದಲ್ಲಿ ಇನ್ನೊಂದು ಕಡೆಗೆ, ಈ ಪ್ರಕಾರ ಯಾವತ್ತು ರಣಾಂಗಣದಲ್ಲಿ ವಿದ್ಯುತ್ತೇಜದಂತೆ ಪ್ರಕಾಶಮಾನನಾಗಿ ಅಡ್ಡಾಡು ತ್ತಿದ್ದನು. ಕೆಲವು ಹೊತ್ತು ಕರ್ಣನೂ ಅರ್ಜುನನೂ ದ್ವೈರಥ ಯುದ್ಧವನ್ನು ಅಂದರೆ ರಥದ ಮೇಲೆ ಕುಳಿತು ದ್ವಂದ್ವ ಯುದ್ಧವನ್ನು ಮಾಡಿದರು. ಇಬ್ಬರೂ

ಸಮವಾದ ಹುದ್ದರಿಗಳು ಇದ್ದುದರಿಂದ ಒಬ್ಬರು ಇನ್ನೊಬ್ಬರಿಗೆ ಸೊಪ್ಪು ಹಾಕಲಿಲ್ಲ. ಇ ಪ್ರಕಾರ ಹಗಲೆಲ್ಲ ಯುದ್ಧವು ನಡೆದಾಗ್ಯೂ ಯಾರೂ ಪರಾಜಯವನ್ನು ಹೊಂದಲಿಲ್ಲ. ರಾತ್ರಿಯ ಹೊತ್ತಿನಲ್ಲಿ ಯುದ್ಧ ಮಾಡುವದು ಭಯಂಕರವೆಂದು ಇಬ್ಬರಿಗೂ ಚೆನ್ನಾಗಿ ಅನುಭವಕ್ಕೆ ಬಂದಿತ್ತು. ಆದುದರಿಂದ ಎರಡೂ ಸೈನ್ಯದವರು ಪರಾಜಯವನ್ನು ಪಡೆಯದೆ ತಮ್ಮ ಯುದ್ಧವನ್ನು ನಿಲ್ಲಿಸಿ ತಮ್ಮ ತಮ್ಮ ಶಿಬಿರುಗಳಿಗೆ ಹೊರಟು ಹೋದರು.

ಎರಡನೇ ದಿವಸ ಅಂದರೆ ಯುದ್ಧದ ಹದಿನೇಳನೇ ದಿವಸ ಮುಂಜಾನೆ ಕರ್ಣನು ದುರ್ಯೋಧನನಿಗೆ—“ ಇವತ್ತಿನ ದಿವಸ ನಾನು ನಿಶ್ಚಯವಾಗಿ ಅರ್ಜುನನನ್ನು ಕೊಲ್ಲುತ್ತೇನೆ. ಪರಶುರಾಮನು ಇಂದ್ರನ ಸಲುವಾಗಿ ಉತ್ಪನ್ನ ಮಾಡಿ ನನಗೆ ಕೊಟ್ಟಂಥ ವಿಜಯ ಧನುಷ್ಯವನ್ನು ನಾನು ನನ್ನ ಸಂಗಡ ತಂದಿರುತ್ತೇನೆ. ಅದು ಅರ್ಜುನನ ಗಾಂಡೀವ ಧನುಷ್ಯಕ್ಕಿಂತ ಬಹಳ ಶ್ರೇಷ್ಠವಾದದ್ದು ಇರುತ್ತದೆ. ಆದರೆ ನನಗೊಂದು ಕೊರತೆಯುಂಟು. ಅರ್ಜುನನಿಗೆ ಯಾವ ಪ್ರಕಾರ ಕೃಷ್ಣನು ಕುಶಲನಾದ ಸಾರಥಿಯು ಇರುತ್ತಾನೋ ಆದ ರಂತೆ ನನಗೆ ಕುಶಲನಾದ ಶಲ್ಯನನ್ನು ಸಾರಥಿಯಾಗಿ ಕೊಡು ” ಎಂದು ಹೇಳಿದನು. ಆಗ ದುರ್ಯೋಧನನು ಶಲ್ಯನ ಬಳಿಗೆ ಹೋಗಿ ಕರ್ಣನ ಸಾರಥಿಯಾಗೆಂದು ಬೇಡಿಕೊಂಡನು. ಆದಕ್ಕೆ ಶಲ್ಯನು—“ ನಾನು ಅಭಿಷಿಕ್ತ ರಾಜನಿದ್ದೇನೆ. ನಾನು ಸ್ವತಃ ಪರಾಕ್ರಮಿಯು ಮತ್ತು ಅನೇಕ ಮಹಾಯಜ್ಞಗಳನ್ನು ಮಾಡುವವನು ಇದ್ದು, ಸೂತಪುತ್ರನ ಸಾರಥಿಯಾಗಬೇಕೇ? ” ಎಂದು ಮೊದಲಿಗೆ ಸಿಟ್ಟಿಗೆದ್ದನು. ಮುಂದೆ ದುರ್ಯೋಧನನು ಅವನಿಗೆ ಬಹಳ ಹೇಳಿಕೊಳ್ಳಲಾಗಿ ಶಲ್ಯನು ಕಾರ್ಯದ ಮಹತ್ವದ ಕಡೆಗೆ ಲಕ್ಷ್ಯಕೊಟ್ಟು— “ ನಾನು ಕರ್ಣನಿಗೆ ಬೇಕಾದ್ದು ಮಾತಾಡಿದರೂ ಅವನು ನನಗೆ ತಿರುಗಿ ಮಾತಾಡಬಾರದು. ನಾನು ಎಂದಿಗೂ ಅವನಿಗೆ ಅಂಕಿತನಾಗಿ ನಡೆಯಲಿಕ್ಕಿಲ್ಲ ” ಎಂದು ದುರ್ಯೋಧನನ ಕೂಡ ಕಟ್ಟು ಮಾಡಿಕೊಂಡು ಕರ್ಣನ ಸಾರಥಿಯಾಗಲಿಕ್ಕೆ ಒಪ್ಪಿಕೊಂಡನು. ಆ ಮೇಲೆ ಶಲ್ಯನು ಕರ್ಣನ ರಥವನ್ನು ಭರದಿಂದ ಒಯ್ದು ಅರ್ಜುನನ ರಥದ ಮೇಲೆ ಸಾಗಿಸಿದನು. ಸ್ವಲ್ಪ ವೇಳೆಯಲ್ಲಿ ಅರ್ಜುನನು ಶ್ರೀಕೃಷ್ಣನ ಉತ್ಸಾಹಜನಕ ಭಾಷಣದಿಂದ ಉತ್ತೇಜನ ಹೊಂದಿ

ವೀರಾವೇಶದಿಂದ ತನ್ನ ಗಾಂಡೀವ ಧನುಷ್ಯದ ಹುರಿಯ ಠಣತ್ಕಾರವನ್ನು ಮಾಡುತ್ತ ಕರ್ಣನಿಗೆ ಎದುರಾಗಿ ನಿಂತು ರಥದ ಮೇಲಿನ ದ್ವಂದ್ವ ಯುದ್ಧವನ್ನು ಆರಂಭಮಾಡಿದನು.

ಎರಡನೇ ಕಡೆಗೆ ಭೀಮ ದುಶ್ಶಾಸನರ ಭಯಂಕರ ಯುದ್ಧವು ನಡೆದು ಭೀಮನು ದುಶ್ಶಾಸನನ್ನು ಕೊಂದು ತನ್ನ ಪ್ರತಿಜ್ಞೆಯ ಪ್ರಕಾರ ದುಶ್ಶಾಸನನ ಕುತ್ತಿಗೆಯೊಳಗಿನ ಬಿಸಿ ಬಿಸಿ ರಕ್ತವನ್ನು ಕುಡಿದನು. ಕರ್ಣನು ಈ ವರ್ತಮಾನವನ್ನು ಕೇಳಿ ಬಹಳ ದ್ವೇಷ ಹೊಂದಿ ಅರ್ಜುನನ ಮೇಲೆ ಸಾಗಿ ಹೋದನು. ಕರ್ಣನು ಇವತ್ತಿನ ದಿವಸ ತಾನು ನಿಶ್ಚಯವಾಗಿ ಅರ್ಜುನನನ್ನು ಕೊಲ್ಲುತ್ತೇನೆಂದು ತಿಳಿದು ರಣಭೇರಿಯನ್ನು ಬಾರಿಸಿದನು. ಪಾಂಡವರ ಕಡೆಯವರು ಅರ್ಜುನನಿಗೆ ಪ್ರೋತ್ಸಾಹನವನ್ನು ಕೊಡುವದಕ್ಕಾಗಿ ಶಂಖವನ್ನು ಊದಿ ರಣವಾದ್ಯಗಳನ್ನು ಬಾರಿಸಿದರು. ಇವರಿವರೊಳಗೆ ಎಷ್ಟೋ ತಾಸುಗಳ ಪರಿಯಂತರ ದ್ವಂದ್ವ ಯುದ್ಧವು ನಡೆಯಿತು. ಒಬ್ಬರ ಮೇಲೊಬ್ಬರು ಅನೇಕ ಅಸ್ತ್ರಗಳನ್ನು ಒಗೆದರು. ಒಬ್ಬರು ಒಂದು ಅಸ್ತ್ರವನ್ನು ಒಗೆದ ಕೂಡಲೆ ಇನ್ನೊಬ್ಬರು ಅದಕ್ಕೆ ಪ್ರತಿಯಾಗಿ ಇನ್ನೊಂದು ಬಲವಾದ ಅಸ್ತ್ರವನ್ನು ಒಗೆಯುತ್ತಿದ್ದರು. ಇಬ್ಬರೂ ಬ್ರಹ್ಮಾಸ್ತ್ರವನ್ನು ಬಲ್ಲವರಿದ್ದರು. ಆದುದರಿಂದ ಒಬ್ಬರದು ಇನ್ನೊಬ್ಬರಿಗಿಂತ ಯಾವದರಲ್ಲಿಯೂ ಹೆಚ್ಚಾಗಲಿಲ್ಲ. ಕೊನೆಗೆ ಕರ್ಣನು ಒಂದು ಸರ್ಪಮುಖದ ಬಾಣವನ್ನು ಹೊರಗೆ ತೆಗೆದು ಅರ್ಜುನನ ಕುತ್ತಿಗೆಯನ್ನು ಸೀಳುವದಕ್ಕಾಗಿ ಅದನ್ನು ಅರ್ಜುನನ ಮೇಲೆ ಒಗೆದನು. ಆದರೆ ಅದು ಅರ್ಜುನನ ಕುತ್ತಿಗಿಗೆ ತಾಕದೆ ಅವನ ಕಿರೀಟಕ್ಕೆ ತಾಕಿದ್ದರಿಂದ ಅವನ ಕಿರೀಟವು ಮುರಿದು ತುಂಡು ತುಂಡಾಗಿ ನೆಲದ ಮೇಲೆ ಬಿತ್ತು. ಆಗ ಅರ್ಜುನನು ತನ್ನ ತಲೆಗೆ ಉತ್ತರೀಯ (ವಸ್ತ್ರ) ವನ್ನು ಸುತ್ತಿಕೊಂಡು ಯುದ್ಧವನ್ನು ಮುಂದೆ ಸಾಗಿಸಿದನು. ಒಮ್ಮೆ ಕರ್ಣನು ಅರ್ಜುನನಿಗಿಂತ ಮಿಗಿಲಾಗುತ್ತಿದ್ದನು. ಒಮ್ಮೆ ಅರ್ಜುನನು ಕರ್ಣನಿಗಿಂತ ಮಿಗಿಲಾಗುತ್ತಿದ್ದನು. ಈ ಪ್ರಕಾರ ಆಗುತ್ತ ಆಗುತ್ತ ಕರ್ಣನ ರಥದ ಎಡಗಡೆಯ ಗಾಲಿಯು ಮುರಿದು ಒಂದು ತಗ್ಗಿನಲ್ಲಿ ಆಳವಾಗಿ ಸಿಕ್ಕಿದ್ದರಿಂದ ರಥವು ಒಗ್ಗಾಲಿಯಾಯಿತು. ಇಷ್ಟರಲ್ಲಿ ಕರ್ಣನಿಗೆ ತನ್ನ ಅಸ್ತ್ರಗಳ ನೆನಪು ಸಹ ಆಗದಂತಾಯಿತು. ಈ ಪ್ರಕಾರ ಕರ್ಣ

ನಿಗೆ ಸಂಕಟವು ಒದಗಲು ಅವನು ಸಿಟ್ಟಿನಿಂದ ರಥದ ಕೆಳಗೆ ಇಳಿದು ತನ್ನ ರಥದ ಗಾಲಿಯನ್ನು ಮೇಲೆ ಎತ್ತಲಿಕ್ಕೆ ಹತ್ತಿದನು. ಆದರೆ ಅರ್ಜುನನು ಕರ್ಣನ ಮೇಲೆ ಬಿಟ್ಟೂ ಬಿಡದೆ ಬಾಣಗಳನ್ನು ಒಗೆದದ್ದರಿಂದ ಅವನಿಗೆ ತನ್ನ ಕೈಯನ್ನು ಮುಂದೆ ಮಾಡಲಿಕ್ಕೆ ಆಗಲಿಲ್ಲ. ಆಗ ಅವನು ಖಿನ್ನಮನಸ್ಕನಾಗಿ-- "ಅರ್ಜುನಾ, ನಾನು ಈಗ ನನ್ನ ಶಸ್ತ್ರವನ್ನು ಕೆಳಗೆ ಇಟ್ಟು ನನ್ನ ರಥದ ಗಾಲಿಯನ್ನು ಮೇಲಕ್ಕೆ ಎಬ್ಬಿಸುವಲ್ಲಿ ತೊಡಗಿರುತ್ತೇನೆ. ಅದುದರಿಂದ ದಯಮಾಡಿ ಸ್ವಲ್ಪ ಹೊತ್ತು ತಡೆ. ಧರ್ಮಯುದ್ಧದ ನಿಯಮಕ್ಕನುಸರಿಸಿ ನಾನು ನನ್ನ ಗಾಲಿಯನ್ನು ಮೇಲಕ್ಕೆ ಎತ್ತಿ ಇಡುವ ತನಕ ನನ್ನ ಮೇಲೆ ಬಾಣವನ್ನು ಒಗೆಯಬೇಡ" ಎಂದು ಹೇಳಿದನು. ಆಗ ಶ್ರೀಕೃಷ್ಣನು ಕರ್ಣನಿಗೆ-"ಕರ್ಣಾ, ಈಗ ಮಾತ್ರ ನಿನಗೆ ಧರ್ಮವು ಚೆನ್ನಾಗಿ ನೆನಪಾಗಿರುತ್ತದೆ. ಏಕವಸ್ತ್ರವನ್ನು ಧರಿಸಿದ ದ್ರೌಪದಿಯನ್ನು ದುಶ್ಶಾಸನನ ಕಡೆಯಿಂದ ನಿಮ್ಮ ಸಭೆಯಲ್ಲಿ ಎಳಿಸಿ ತರುವಾಗ್ಗೆ, ಶಕುನಿಯ ಕಡೆಯಿಂದ ಕಪಟ ದ್ಯೂತವನ್ನಾಡಿಸಿ ಧರ್ಮನನ್ನು ವನವಾಸಕ್ಕೆ ಕಳಿಸಿದಾಗ್ಗೆ ಮತ್ತು ಹಸುಳನಾದ ಅಭಿಮನ್ಯುವನ್ನು ನೀವು ಆರು ಮಂದಿ ವೀರರು ಸುತ್ತುಗಟ್ಟಿ ಕೊಂದಾಗ್ಗೆ ನಿನ್ನ ಧರ್ಮವು ಎಲ್ಲಿ ಅಡಗಿ ಹೋಗಿತ್ತು? ಈಗ ಮಾತ್ರ ಧರ್ಮ ಧರ್ಮವೆಂದು ಗಂಟಲ ಒಣಗಿಸಿಕೊಳ್ಳುವಲ್ಲಿ ಉಪಯೋಗವೇನು?" ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಕರ್ಣನು ನಾಚಿಕೆಯಿಂದ ತಲೆಬಾಗಿಸಿ ಸುಮ್ಮನಾಗಿ ಸಿಟ್ಟಿನಿಂದ ಹಲ್ಲು ತುಟಿಗಳನ್ನು ಕಚ್ಚುತ್ತ ಒಗ್ಗಾಲಿಯಾದ ರಥವನ್ನು ತಿರುಗಿ ಏರಿ ಧನುಷ್ಯ ಬಾಣಗಳನ್ನು ತೆಗೆದುಕೊಂಡು ಯುದ್ಧ ಮಾಡಹತ್ತಿದನು. ಹಾಗೂ ಬ್ರಹ್ಮಾಸ್ತ್ರದಿಂದ ಅರ್ಜುನನ ಮೇಲೆ ಶರವೃಷ್ಟಿಯನ್ನು ಮಾಡಿ ತಿರುಗಿ ರಥದಿಂದ ಕೆಳಗೆ ಇಳಿದು ಅದರ ಗಾಲಿಯನ್ನು ಮೇಲೆ ಎತ್ತಲಿಕ್ಕೆ ಹತ್ತಿದನು. ಇಷ್ಟರಲ್ಲಿ ಅರ್ಜುನನು ಬ್ರಹ್ಮಾಸ್ತ್ರದಿಂದ ಬ್ರಹ್ಮಾಸ್ತ್ರದ ಪ್ರತೀಕಾರವನ್ನು ಮಾಡಿ ಒಂದು ಅತಿ ತೀಕ್ಷ್ಣವಾದ ಬಾಣದಿಂದ ಕರ್ಣನ ಶಿರಸ್ಸನ್ನು ಹಾರಿಸಿದನು. ಈ ಪ್ರಕಾರ ಈ ಇಬ್ಬರ ಭಯಂಕರವಾದ ಯುದ್ಧವು ಮುಗಿಯಲಾಗಿ ಕರ್ಣನ ಸಾರಥಿಯಾದ ಶಲ್ಯನು ಕರ್ಣನ ಶ್ರವವನ್ನು ಅಲ್ಲಿಯೇ ಬಿಟ್ಟುಕೊಟ್ಟು ತನ್ನ ಮುರಿದ ರಥವನ್ನು ಮಾತ್ರ ತೆಗೆದುಕೊಂಡು ದುರ್ಯೋಧನನ ಬಳಿಗೆ ಹೋಗಿ ಇಲ್ಲಿ ನಡೆದ ಯಾವತ್ತು ವೃತ್ತಾಂತವನ್ನು

ಅವನಿಗೆ ಹೇಳಿದನು. ಆದರೆ ಇತ್ತಲಾ ಪಾಂಡವರಿಗೆ ಅತ್ಯಾನಂದವಾಗಿ ಹೋಯಿತು. ಯುಧಿಷ್ಠಿರನು ಆನಂದದಿಂದ ದೀವಟಿಗೆಯನ್ನು ಹಿಡಕೊಂಡು ಕರ್ಣನ ಹೆಣವು ಬಿದ್ದದ್ದನ್ನು ನೋಡಿಕೊಂಡು ಶ್ರೀಕೃಷ್ಣನ ಕಡೆಗೆ ಬಂದು ಅವನಿಗೆ ಪ್ರೇಮಾಲಿಂಗನವನ್ನು ಕೊಟ್ಟು—"ಗೋವಿಂದಾ! ಇವತ್ತಿನ ದಿವಸ ನಾನು ನಿನ್ನ ಕೃಪೆಯಿಂದ ರಾಜನಾದೆನು. ನನ್ನ ಬಂಧುಸಹವರ್ತಮಾನ ನನಗೆ ಈ ಪೃಥ್ವಿಯ ರಾಜ್ಯವು ದೊರಕಿತು. ಜನಾರ್ದನಾ, ನಿನ್ನ ಸಹಾಯದಿಂದಲೇ ಅರ್ಜುನನು ಈ ಅಪ್ರತಿಮ ವೀರನನ್ನು ಕೊಂದನು. ನಿನ್ನ ಪ್ರಸಾದದಿಂದಲೇ ನಮಗೆ ಯಾವತ್ತು ಸಂಗತಿಗಳು ಅನುಕೂಲವಾಗುವವು. ಈದಿನ ರಾತ್ರಿ ನಾನು ಗಾಢನಿದ್ರೆಯನ್ನು ಮಾಡುವೆನು" ಎಂದು ಹೇಳಿ ಯಾವತ್ತು ಪಾಂಡವ ವೀರರನ್ನೂ ಶ್ರೀಕೃಷ್ಣನನ್ನೂ ಕರಕೊಂಡು ತನ್ನ ಶಿಬಿರಕ್ಕೆ ಹೊರಟು ಬಂದನು.

ಆ ಮೇಲೆ ಕೌರವರ ಕಡೆಯ ಅನೇಕ ಮಂದಿ ವೀರರು ಶೋಕದಿಂದಲೂ, ಭಯದಿಂದಲೂ, ವೈರಾಗ್ಯದಿಂದಲೂ ಸಮರಾಂಗಣವನ್ನು ಬಿಟ್ಟು ಹಿಮಾಲಯದ ಶಿಖರದ ಹತ್ತರವಿರುವ ಸರಸ್ವತಿ ನದಿಗೆ ಹೋಗಿ ಅದರ ಪುಣ್ಯಜಲದ ಸ್ನಾನಪಾನಾದಿಗಳನ್ನು ಶಾಂತಚಿತ್ತದಿಂದ ಮಾಡಿದರು. ಈ ಸಮಯಕ್ಕೆ ಕೃಪಾಚಾರ್ಯನು ತನ್ನ ಪಕ್ಷದ ದುರ್ದೈವವನ್ನೂ ದೈನ್ಯಾವಸ್ಥೆಯನ್ನೂ ಕಂಡು ಕನಿಕರಪಟ್ಟು—"ಪಾಂಡವರ ಕೂಡ ಧೃತರಾಷ್ಟ್ರನ ಅಥವಾ ಶ್ರೀಕೃಷ್ಣನ ಮಧ್ಯಸ್ತಿಕೆಯಿಂದ ಇನ್ನಾದರೂ ಒಡಂಬಡಿಕೆಯನ್ನು ಮಾಡಿಕೋ" ಎಂದು ದುರ್ಯೋಧನನಿಗೆ ಉಪದೇಶ ಮಾಡಿದನು. ಅದಕ್ಕೆ ಅವನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ಹಿಂದುಗಡೆ—"ಗುರುಗಳೇ, ನೀವು ಪ್ರೇಮದಿಂದ ಹೇಳಿದ್ದನ್ನು ಕೇಳಿಕೊಂಡೆನು. ಇವತ್ತಿನ ತನಕ ನಾನು ಎಲ್ಲ ರಾಜರ ಶಿರೋಭಾಗದಲ್ಲಿ ಪ್ರಕಾಶಿಸುತ್ತಾ ಇದ್ದುಕೊಂಡು ಈಗ ನಾನು ಯುಧಿಷ್ಠಿರನ ಉಗುಳು ನೆಕ್ಕುತ್ತ ಅವನ ಬೆನ್ನು ಹತ್ತಲಿಯಾ? ನಾನು ಕೃಷ್ಣನ ಅನಂತ ಅಪರಾಧಗಳನ್ನು ಮಾಡಿ ಈಗ ಅವನ ಮಧ್ಯಸ್ತಿಕೆಯ ಸಲುವಾಗಿ ಹೋಗಲಿಯಾ? ನನ್ನ ಸಲುವಾಗಿ ಸಾವಿರಾರು ಮಂದಿ ವೀರರನ್ನು ಕೊಂದು ನಾನೊಬ್ಬನೇ ನನ್ನ ಜೀವವನ್ನು ಬದುಕಿಸಿಕೊಳ್ಳಲಿಯಾ? ಭೀಷ್ಮ, ದ್ರೋಣ, ಕರ್ಣ, ದುಶ್ಶಾಸನರು

ಸತ್ತರು. ಇವರೆಲ್ಲರು ಹೋದ ಬಳಿಕ ನಾನು ಈ ರಾಜ್ಯವನ್ನು ದೊರಕಿಸಿದರೂ ಅದರಿಂದ ನನಗೇನು ಸುಖವಾದೀತು? ಕ್ಷತ್ರಿಯರು ಮನೆಯಲ್ಲಿ ಹಾಸಿಗೆಯ ಮೇಲೆ ಬೇನೆಯಿಂದ ಮಲಗಿಕೊಂಡು ಸಾಯುವದಕ್ಕಿಂತ ರಣಾಂಗಣದಲ್ಲಿ ಅಥವಾ ಅರಣ್ಯದಲ್ಲಿ ಬಿದ್ದು ಸಾಯುವದು ವಾಸಿ. ನನಗೆ ಈ ಜಗತ್ತಿನ ಅಪೇಕ್ಷೆಯು ಏನೂ ಇಲ್ಲ. ನನ್ನ ಸಲುವಾಗಿ ರಣಾಂಗಣದಲ್ಲಿ ತಮ್ಮ ದೇಹವನ್ನು ಇಟ್ಟಂಥ ಲಕ್ಷಾವಧಿ ಜನರ ಋಣವನ್ನು ತೀರಿಸುವದಕ್ಕಾಗಿ ನಾನು ರಣಾಂಗಣದಲ್ಲಿ ನನ್ನ ದೇಹವನ್ನು ಇಟ್ಟು ಸ್ವರ್ಗಕ್ಕೆ ಹೋಗುವೆನು" ಎಂದು ಹೇಳಿದನು. ಇದನ್ನು ಕೇಳಿ ಎಲ್ಲ ಕ್ಷತ್ರಿಯರು ಪುನಃ ಯುದ್ಧವನ್ನು ಮಾಡಬೇಕೆಂದು ಉತ್ತೇಜನವನ್ನು ಹೊಂದಿ ಆ ಅಮವಾಸ್ಯದ ರಾತ್ರಿಯಲ್ಲಿ ತಮ್ಮ ಶಿಬಿರದೊಳಗೆ ಸ್ವಸ್ಥವಾಗಿ ಮಲಗಿಕೊಂಡರು. ಮರುದಿವಸ ಬೆಳಗಾದ ಮೇಲೆ ಅವರು ನಿತ್ಯ ಸಾಂಪ್ರದಾಯಕ್ಕನುಸರಿಸಿ ತಮ್ಮ ಸ್ನಾನಾದಿ ಕರ್ಮಗಳನ್ನು ತೀರಿಸಿದ ಬಳಿಕ ಅಗ್ನಿಯ ಮತ್ತ ಸೂರ್ಯನ ಉಪಾಸನೆಯನ್ನು ಮಾಡಿ ರಣಾಂಗಣಕ್ಕೆ ಬಂದು ಶಲ್ಯನನ್ನು ತಮ್ಮ ಸೇನಾಧಿಪತಿಯಾಗಿ ನೇಮಿಸಿಕೊಂಡರು. ಆ ದಿವಸ ಶಲ್ಯನು ಅವರೆಲ್ಲರಿಗೆ—"ಇವತ್ತಿನ ದಿವಸ ನೀವೆಲ್ಲರೂ ಸಮೂಹಿಕ ಯುದ್ಧವನ್ನು ಮಾಡಿರಿ. ಯಾರೂ ದ್ವಂದ್ವ ಯುದ್ಧವನ್ನು ಮಾಡಬೇಡಿರಿ" ಎಂದು ಅಪ್ಪಣೆಯನ್ನು ಮಾಡಿದನು. ಆ ದಿವಸ ಕೌರವರ ಕಡೆಗೆ ೧೧,೦೦೦ ರಥಗಳು, ೧೦೭೦ ಆನೆಗಳು, ೨ ಲಕ್ಷ ರಾಹುತರು ಮತ್ತು ಕೆಲವು ಕಾಲಬಲವು ಉಳಿದಿದ್ದವು. ಹಾಗೂ ಪಾಂಡವರ ಕಡೆಗೆ ೬೦೦೦ ರಥಗಳು, ೬೦೦೦ ಆನೆಗಳು, ೧೦,೦೦೦ ರಾಹುತರು ಮತ್ತು ಕೆಲವು ಕಾಲಬಲವು ಉಳಿದಿದ್ದವು. ಆದರೆ ಪಾಂಡವರ ಕಡೆಯ ಸೈನ್ಯವು ಕಡಿಮೆ ಇದ್ದಾಗ್ಯೂ ಅವರ ಕಡೆಗೆ ಅರ್ಜುನ, ಭೀಮ, ಸಾತ್ಯಕಿ ಮತ್ತು ಧೃಷ್ಟದ್ಯುಮ್ನ ಈ ನಾಲ್ಕು ಮಂದಿ ಬಲಾಢ್ಯ ವೀರರು ಅಗ್ರಗಾಮಿಗಳಾಗಿ ವೀರಾವೇಶದಿಂದ ಹೋರಾಡಲಾಗಿ ಮಧ್ಯಾಹ್ನದ ಸುಮಾರಕ್ಕೆ ಕೌರವರ ಸೇನಾಧಿಪತಿಯಾದ ಶಲ್ಯನು ಯುಧಿಷ್ಠರನ ಕೈಯಿಂದ ಹತನಾದನು. ಆ ಬಳಿಕ ದುರ್ಯೋಧನನು ಯುದ್ಧ ಮಾಡುವ ಜನರ ಗುಂಪಿನೊಳಗೆ ತನ್ನ ರಥವನ್ನು ನಡೆಸಿ ಪಾಂಡವರ ಮುಂದೆ ನಿಂತುಕೊಂಡು ಅವರ ಮೇಲೆ ಅಭಿಯೋಗ ಮಾಡಿದನು. ಶಕುನಿಯು ಕಂದಹಾರದ ಕುದುರೆಗಳ ಸೈನ್ಯವನ್ನು ತೆಗೆದುಕೊಂಡು ಪಾಂಡವರ ಹಿಂದೆ ನಿಂತು

ಪಾಂಡವರ ಮೇಲೆ ಅಭಿಯೋಗ ಮಾಡಿದನು. ಈ ಅಭಿಯೋಗವನ್ನು ಅರ್ಜುನನು ಮುಂಭಾಗದಿಂದಲೂ, ಸಹದೇವನು ಹಿಂಭಾಗದಿಂದಲೂ ನಾಶಪಡಿಸಿದರು. ಅರ್ಜುನನು ದುರ್ಯೋಧನನ ಸಾರಥಿಯನ್ನೂ ಕುದುರೆಯನ್ನೂ ಕೊಂದು ಅವನ ರಥವನ್ನು ಮುರಿದುಬಿಟ್ಟನು. ಸಹದೇವನು ಶಕುನಿಯನ್ನೂ ಅವನ ಮಗನಾದ ಉಲೂಕನನ್ನೂ ಕೊಂದನು. ದುರ್ಯೋಧನನ ಸಾರಥಿಯೂ ಕುದುರೆಯೂ ಸತ್ತು ಅವನ ರಥವು ಸಹ ಮುರಿದದ್ದರಿಂದ ಅವನು ತನ್ನ ಕೈಯಲ್ಲಿ ಗದೆಯನ್ನು ಹಿಡಕೊಂಡು ಆ ಯುದ್ಧ ಮಾಡುವ ಜನರ ಗುಂಪಿನೊಳಗಿಂದ ಹೊರಬಿದ್ದು ಎಲ್ಲಿಯೋ ಹೋಗಿಬಿಟ್ಟನು. ಅವನು ಸಮರಾಂಗಣದೊಳಗೆ ಎಲ್ಲಿಯೂ ಕಾಣಿಸಲಿಲ್ಲ. ಆಗ ಕೌರವರ ಕಡೆಯ ಹೇಡಿಯೋಧರು ಓಡಿ ಹೋದರು. ಆದರೆ ಅವರಲ್ಲಿಯ ಶೂರರು ಮಾತ್ರ ಜೀವದ ಹಂಗು ಬಿಟ್ಟು ಕಾದಾಡಿದರು. ಆದರೂ ಕೊನೆಗೆ ಅವರು ಯುದ್ಧದಲ್ಲಿ ಬಿದ್ದು ಹೋದರು. ಇದರಿಂದ ಕೌರವ ಸೈನ್ಯವು ನಿಂತುಕೊಂಡಿದ್ದ ಭಾಗವೆಲ್ಲ ಬಟ್ಟ ಬಯಲಾಯಿತು. ದುರ್ಯೋಧನನೊಬ್ಬನೇ ರಣಾಂಗಣದಿಂದ ದೂರ ಹೊರಟು ಹೋಗಿ ಮಧ್ಯಾಹ್ನದ ೩ ಘಂಟೆಯ ಸುಮಾರಕ್ಕೆ ಸಂಜಯನ ಕೈಯಿಂದ ಧೃತರಾಷ್ಟ್ರನಿಗೆ ಕಡೆಯ ನಿರೂಪವನ್ನು ಕಳಿಸಿಕೊಟ್ಟು ಒಂದು ಸರೋವರದಲ್ಲಿ ಅಡಗಿಕೊಂಡನು. ಇತ್ತಲಾ ಅಶ್ವತ್ಥಾಮ, ಕೃಪಾಚಾರ್ಯ ಮತ್ತು ಕೃತವರ್ಮ ಈ ಮೂರು ಮಂದಿ ದುರ್ಯೋಧನನನ್ನು ಹುಡುಕುತ್ತ ಅವನು ಅಡಗಿಕೊಂಡಿದ್ದ ಸ್ಥಳಕ್ಕೆ ಹೋಗಿ –"ನಾವು ಇನ್ನೂ ಜೀವಂತವಿರುತ್ತೇವೆ. ನಾವು ಇನ್ನು ಪಾಂಡವರ ಸಂಗಡ ಯುದ್ಧ ಮಾಡೋಣ. ನಮ್ಮ ಕೂಡ ಹೊರಟು ಬಾ" ಎಂದು ಹೇಳಿದನು. ಆಗ ದುರ್ಯೋಧನನು ಸರೋವರದ ನೀರೊಳಗಿಂದಲೇ—"ನಾನು ಈವೊತ್ತು ಬಹಳ ದಣಿದಿದ್ದೇನೆ. ನಾಳೆ ನಾವು ನಿಶ್ಚಯದಿಂದ ಯುದ್ಧ ಮಾಡೋಣ" ಎಂದು ಉತ್ತರ ಕೊಟ್ಟನು. ಈ ಸಂಭಾಷಣವನ್ನು ಆ ಸರೋವರದಲ್ಲಿ ಮೀನ ಹಿಡಿಯಲಿಕ್ಕೆ ಬಂದಿದ್ದ ಜನರು ಕೇಳಿಕೊಂಡು ಅದನ್ನು ಪಾಂಡವರ ಕಡೆಗೆ ಹೋಗಿ ತಿಳಿಸಿದರು. ಆಗ ಪಾಂಡವರು ಉತ್ಸಾಹದಿಂದ ಆ ಸರೋವರಕ್ಕೆ ಹೋಗಿ ದುರ್ಯೋಧನನಿಗೆ ಜರಿದು ಮಾತಾಡಲಾಗಿ ಅವನು ಸಿಟ್ಟಿನಿಂದ ಅದರ ನೀರೊಳಗಿಂದ ಹೊರಗೆ ಬಂದು--"ನಾನು ಒಬ್ಬನೇ ಇದ್ದೇನೆ. ನೀವು ಅನೇಕ ಮಂದಿ ಇರುತ್ತೀರಿ.

ನಾನು ಪಾದಚಾರಿ ಇದ್ದೇನೆ. ನೀವು ರಥದಲ್ಲಿ ಕುಳಿತಿರುತ್ತೀರಿ. ನೀವು ಧರ್ಮಯುದ್ಧವನ್ನು ಮಾಡುತ್ತಿದ್ದರೆ ನಾನು ಒಬ್ಬೊಬ್ಬರ ಕೂಡ ಗದಾಯುದ್ಧವನ್ನು ಮಾಡುತ್ತೇನೆ" ಎಂದು ಹೇಳಿದನು. ಇದಕ್ಕೆ ವಿಜಯದಿಂದ ಉನ್ಮತ್ತನಾದ ಯುಧಿಷ್ಠಿರನು ಅವನಿಗೆ--"ದುರ್ಯೋಧನಾ, ನೀನು ಒಬ್ಬನಿದ್ದರೂ ಹೆದರಬೇಡ. ನಮ್ಮಲ್ಲಿ ಬೇಕಾದವರೊಬ್ಬರ ಕೂಡ ದ್ವಂದ್ವ ಯುದ್ಧ ಮಾಡು. ಈ ದ್ವಂದ್ವ ಯುದ್ಧದಲ್ಲಿ ನೀನು ಗೆದ್ದರೆ ನೀನೇ ರಾಜ್ಯವನ್ನು ಆಳೆಂದು ನಿನಗೆ ಈ ಹೆಚ್ಚಿನ ಸೌಲಭ್ಯವನ್ನು ಕೊಡುತ್ತೇನೆ" ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಶ್ರೀಕೃಷ್ಣನು ದ್ವೇಷದಿಂದ ಮತ್ತು ದುಃಖದಿಂದ—"ಧರ್ಮಾ, ಇದೇನು ಮಾತಾಡುತ್ತೀ? ಪಾಂಡು ಮತ್ತು ಕುಂತಿಯ ಸಂತತಿಯ ಹಣೇಬರಹದಲ್ಲಿ ನಿರಂತರ ವನವಾಸ ಮಾಡಬೇಕೆಂದು ಬರೆದಿರುತ್ತದೋ? ಇಷ್ಟು ಪ್ರಾಣಹಾನಿಯನ್ನು ಮಾಡಿ ನಿನ್ನ ತಮ್ಮಂದಿರು ಪರಾಕ್ರಮ ಮಾಡಿರುವದನ್ನು ನೀನು ಒಂದು ದ್ವಂದ್ವ ಯುದ್ಧದಲ್ಲಿ ಕಳಕೊಳ್ಳಬೇಕೆನ್ನುತ್ತೀಯಾ? ಹಾಗೂ ಅವನಿಗೆ ಬೇಕಾದವರ ಕೂಡ ದ್ವಂದ್ವ ಯುದ್ಧ ಮಾಡಲಿಕ್ಕೆ ಹೇಳುತ್ತೀಯಾ? ಹಣೇಬರಹ ನಿಮ್ಮದು. ನೀನೇನು ಮಾಡುವಿ?" ಎಂದು ಅಂದನು. ಇದನ್ನು ಕೇಳಿ ದುರ್ಯೋಧನನು ಸೊಕ್ಕಿನಿಂದ--"ಕೃಷ್ಣಾ, ನಾನು ಈ ಗದೆಯಿಂದ ಭೀಮನ ಕೂಡ ಯುದ್ಧ ಮಾಡುತ್ತೇನೆ. ಅವನು ನನ್ನ ಸಮಾನ ಹುದ್ದರಿಯು ಇರುತ್ತಾನೆ. ಇದಕ್ಕಾದರೂ ನಿನ್ನ ಒಪ್ಪಿಗೆಯುಂಟಷ್ಟೇ?" ಎಂದು ಕೇಳಿದನು. ಆಗ ಭೀಮನು—"ಗೋವಿಂದಾ, ನೀನು ಹೆದರಬೇಡ, ನಾನು ದುರ್ಯೋಧನನ ಜೀವ ತೆಗೆದುಕೊಳ್ಳದೆ ಬಿಡುವದಿಲ್ಲ" ಎಂದು ಹೇಳಿ ದುರ್ಯೋಧನನ ಕೂಡ ಗದಾಯುದ್ಧ ಮಾಡಲಿಕ್ಕೆ ಅವನ ಎದುರಾಗಿ ನಿಂತುಕೊಂಡನು. ಅಲ್ಲಿ ಕೂಡಿದ ಯಾವತ್ತು ಜನರು ಈಗ ಈ ಗದಾಯುದ್ಧವನ್ನು ನೋಡಲಿಕ್ಕೆ ಕುಳಿತುಕೊಂಡರು. ಇಷ್ಟರಲ್ಲಿ ಬಲರಾಮನು ತೀರ್ಥಯಾತ್ರೆಯನ್ನು ಮಾಡಿಕೊಂಡು ಅಲ್ಲಿಗೆ ಬಂದನು. ಬಲರಾಮನು ತೀರ್ಥಯಾತ್ರೆಯನ್ನು ಮಾಡಲಿಕ್ಕೆ ಪುಷ್ಯ ನಕ್ಷತ್ರದ ದಿವಸ ದ್ವಾರಕೆಯಿಂದ ಹೊರಟು ನಾಲ್ವತ್ತೆರಡು ದಿವಸಗಳಾಗಿದ್ದವು. ಅವನು ತನ್ನ ತೀರ್ಥಯಾತ್ರೆಯನ್ನು ಮಾಡುತ್ತ ಸರಸ್ವತಿ ಯಾತ್ರೆಗೆ ಬಂದಾಗ ಸರಸ್ವತಿ ನದಿಯ ತೀರದಲ್ಲಿ ಕೆಲವು ಬ್ರಾಹ್ಮ

ಣರು ಅವನಿಗೆ ಭೀಮ ದುರ್ಯೋಧನರ ಯುದ್ಧವಾಗುವದೆಂದು ಹೇಳಿದ ಕಾರಣ ಅವನೂ ಆ ಸಮಯಕ್ಕೆ ಬಂದು ಕುಳಿತನು. ಆಗ ಅವರೆಲ್ಲರ ಮುಂದೆ ಭೀಮ ದುರ್ಯೋಧನರ ಗದಾಯುದ್ಧವು ಆರಂಭವಾಯಿತು. ಇಬ್ಬರೂ ತಮ್ಮ ಮೈಯಲ್ಲಿ ಕವಚವನ್ನು ತೊಟ್ಟುಕೊಂಡು ತಲೆಯ ಮೇಲೆ ಗಟ್ಟಿಯಾದ ಮುಕುಟವನ್ನು ಹಾಕಿದ್ದರು. ಈ ಇಬ್ಬರೂ ಪ್ರಚಂಡ ಶಕ್ತಿಯವರು ಇದ್ದು ಗದಾಯುದ್ಧದಲ್ಲಿ ಸಮವಾಗಿಯೇ ಪ್ರವೀಣರಿದ್ದರು. ಇವರು ಒಬ್ಬರ ಮುಂದೊಬ್ಬರು ನಿಂತು, ಕೈಮುಟ್ಟಿ ವಂದನೆಗಳನ್ನು ಮಾಡಿ, ಪುನಃ ದೂರ ನಿಂತುಕೊಂಡು, ಮಂಡಲಾಕಾರವಾಗಿ ತಿರಗುತ್ತ, ವೇಗದಿಂದ ತಮ್ಮ ತಮ್ಮ ಗದೆಯನ್ನು ಒಬ್ಬರಮೇಲೊಬ್ಬರು ಧುಪ್ಪ ಧುಪ್ಪ ಎಂದು ಹೊಡೆಯಹತ್ತಿದರು. ಈ ಇಬ್ಬರು ಪ್ರಚಂಡ ಬಲಶಾಲಿಗಳ ಗದಾಯುದ್ಧದ ಪರಿಣಾಮವು ಏನಾಗುವದೆಂದು ನೋಡಲಿಕ್ಕೆ ಪ್ರೇಕ್ಷಕರು ಏನೂ ಉಸುರು ಆಡಿಸದೆ ಮತ್ತು ತಮ್ಮ ಕಣ್ಣಿನ ಎವೆಗಳನ್ನು ಸಹ ಪಿಳುಕಿಸದೆ ಕುಳಿತುಕೊಂಡಿದ್ದರು. ಆಗ ಅರ್ಜುನನು ಉತ್ಕಂಠತೆಯಿಂದ ಹೌರಗೆ "ಯಾರು ಗೆದಿಯುತ್ತಾರೆ?" ಎಂದು ಶ್ರೀಕೃಷ್ಣನನ್ನು ಕೇಳಿದನು. ಅದಕ್ಕೆ ಶ್ರೀಕೃಷ್ಣನು—"ಧರ್ಮಯುದ್ಧ ಮಾಡಿದರೆ ದುರ್ಯೋಧನನೇ ಗೆದ್ದಾನು. ಇದರಿಂದ ಧರ್ಮರಾಜನು ಮಾಡಿದ ಮೂರ್ಖತನವು ನಿಮ್ಮ ನಿರಂತರವಾದ ದುರ್ಗತಿಗೆ ಕಾರಣವಾದೀತು. ಆದುದರಿಂದ ಭೀಮನು ದುರ್ಯೋಧನನ ತೊಡೆಯ ಮೇಲೆ ತನ್ನ ಗದೆಯಿಂದ ಹೊಡೆಯಬೇಕು. ಅಂದರೆ ಭೀಮನು ಗೆದೆಯುವನು. ಇದಲ್ಲದೆ ಈ ಪ್ರಕಾರ ಮಾಡುತ್ತೇನೆಂದು ಅವನು ದ್ರೌಪದಿಗೆ ವಚನವನ್ನು ಕೊಟ್ಟಿರುತ್ತಾನೆ" ಎಂದು ಉತ್ತರ ಕೊಟ್ಟನು. ಈ ಪ್ರಕಾರ ಶ್ರೀಕೃಷ್ಣನು ಹೇಳಿದ್ದನ್ನು ಕೇಳಿ ಅರ್ಜುನನು ಭೀಮನಿಗೆ ಸನ್ನೆಯನ್ನು ಮಾಡಲು ಭೀಮನು ದುರ್ಯೋಧನನ ತೊಡೆಯ ಮೇಲೆ ಗದೆಯಿಂದ ಹೊಡೆದು ಅವನ ತೊಡೆಯನ್ನು ನುಚ್ಚುನುರಿ ಮಾಡಲಾಗಿ ದುರ್ಯೋಧನನು ಮೂರ್ಛೆ ಹೊಂದಿ ಧುಪ್ಪನೆ ಕೆಳಗೆ ಬಿದ್ದನು. ಈ ಪ್ರಕಾರ ಭೀಮ ದುರ್ಯೋಧನರ ಗದಾಯುದ್ಧವು ಮುಗಿಯಲು ಅಲ್ಲಿ ನೆರೆದಿದ್ದ ಪ್ರೇಕ್ಷಕರೆಲ್ಲರು ಪಾಂಡವರ ಕಡೆಯವರಿದ್ದ ಕಾರಣ ಅವರು ಪ್ರಚಂಡವಾದ ಜಯಘೋಷವನ್ನು ಮಾಡಿದರು. ಭೀಮನಾದರೂ ವಿಜಯದ ಸೊಕ್ಕಿನಿಂದ ದುರ್ಯೋಧನನ ತಲೆಯ ಮೇಲೆ ಒದ್ದನು. ಆದರೆ ಗದಾಯುದ್ಧ ಪ್ರವೀಣನೂ, ದುರ್ಯೋಧನನ ಪ್ರೇಮಿ

ಯೂ ಆದ ಬಲರಾಮನು ಸಿಟ್ಟಿನಿಂದ-“ ದುಷ್ಟ ಭೀಮಾ, ಗದಾಯುದ್ಧ ಮಾಡುವವರು ಟೊಂಕದ ಕೆಳಗೆ ಗದೆಯಿಂದ ಹೊಡೆಯಬಾರದೆಂಬ ನಿಯಮವಿರುತ್ತಿದ್ದು ನೀನು ಅಧರ್ಮದಿಂದ ಅವನ ತೊಡೆಗೆ ಹೊಡೆದು ಪುನಃ ಅವನ ತಲೆಗೆ ಒದೆಯುತ್ತಿಯಾ? ” ಎಂದು ಭೀಮನಿಗೆ ತನ್ನ ನೇಗಿಲದಿಂದ ಹೊಡೆಯುವದಕ್ಕಾಗಿ ಅವನ ಮೈಮೇಲೆ ಸಾಗಿ ಹೋದನು. ಆಗ ಶ್ರೀಕೃಷ್ಣನು ಬಲರಾಮನಿಗೆ—“ ಅಣ್ಣಾ, ಕೌರವರು ಮೊದಲಿನಿಂದಲೇ ಪಾಂಡವರ ಕೂಡ ಅಧರ್ಮದಿಂದ ನಡೆಯುತ್ತ ಬಂದಿರುತ್ತಾರೆ. ದುರ್ಯೋಧನನು ದ್ರೌಪದಿಯನ್ನು ಸಭೆಗೆ ಕರೆಸಿ ಅವಳಿಗೆ ತನ್ನ ತೊಡೆಯನ್ನು ತೋರಿಸಿ ಅವಳ ಅವಮಾನ ಮಾಡಿದಾಗ್ಗೆ ಭೀಮನು ದುರ್ಯೋಧನನ ತೊಡೆಯನ್ನು ಮುರಿದು ಹಾಕುತ್ತೇನೆಂದು ಅದೇ ವೇಳೆಗೆ ಪ್ರತಿಜ್ಞೆಯನ್ನು ಮಾಡಿದ್ದನು. ಆ ಪ್ರತಿಜ್ಞೆಯನ್ನು ಅವನು ಈಗ ಪೂರ್ಣ ಮಾಡಿದನು. ಇದನ್ನು ವಿಚಾರ ಮಾಡಲು ಭೀಮನು ಮಾಡಿದ್ದು ಅಧರ್ಮವೆನಿಸಲಾರದು. ಮೇಲಾಗಿ ಈಗ ಕಲಿಯುಗದ ಆರಂಭವಾಗಿರುತ್ತದೆಂದು ತಿಳಿದುಕೊಂಡು ಪಾಂಡವರನ್ನು ಕ್ಷಮಿಸು. ಅವರೂ ನಿನ್ನ ಆಪ್ತರಿದ್ದಾರೆ. ಅವರ ಉತ್ಕರ್ಷವು ನಿನ್ನ ಉತ್ಕರ್ಷವೆಂದು ತಿಳಿದುಕೋ ” ಎಂದು ಬಹಳ ಕಕ್ಕುಲತೆಯಿಂದ ಸಮಾಧಾನ ಮಾಡಿದನು. ಆಗ ಬಲರಾಮನು ನಿರುಪಾಯದಿಂದ ಸುಮ್ಮನಾಗಿ ತನ್ನ ರಥದಲ್ಲಿ ಕುಳಿತು ದ್ವಾರಕೆಯ ಕಡೆಗೆ ಹೊರಟು ಹೋದನು. ಇತ್ತಲಾ ಪಾಂಡವರೂ ಶ್ರೀಕೃಷ್ಣನೂ ದುರ್ಯೋಧನನು ಸತ್ತನೆಂದು ತಿಳಿದು ಅವನ ಹೆಣವನ್ನು ಅಲ್ಲಿಯೇ ಬಿಟ್ಟುಕೊಟ್ಟು ಕೌರವರ ಶಿಬಿರಕ್ಕೆ ಹೋಗುವದಕ್ಕಾಗಿ ಹೊರಟರು. ಅಲ್ಲಿಂದ ಯಾವತ್ತು ಕೌರವ ಸ್ತ್ರೀಯರು ತಮ್ಮ ಆಳುಮಂದಿಯ ಕೈಯಲ್ಲಿ ತಮ್ಮ ಸಂಪತ್ತೆಲ್ಲ ಬಿಟ್ಟು ಕೊಟ್ಟು ಹಸ್ತನಾಪುರಕ್ಕೆ ಮೊದಲೇ ಓಡಿ ಹೋಗಿದ್ದರು. ಇದರಿಂದ ಅಲ್ಲಿ ಪಾಂಡವರಿಗೆ ಅಗಣಿತ ರತ್ನಗಳೂ ಅಮೌಲ್ಯವಾದ ಸಾಮಾನುಗಳೂ ಸಿಕ್ಕವು. ಪಾಂಡವರ ಕಡೆಯ ವೀರರು ಸಾಯಂಕಾಲದಲ್ಲಿ ಆ ಕೌರವರ ಶಿಬಿರದಲ್ಲಿಯೇ ಬಂದು ಇಳಿದುಕೊಂಡರು. ಆದರೆ ಶ್ರೀಕೃಷ್ಣನ ಸೂಚನೆಯ ಪ್ರಕಾರ ಐದು ಮಂದಿ ಪಾಂಡವರು ದ್ರೌಪದಿಯನ್ನೂ ಶ್ರೀಕೃಷ್ಣನನ್ನೂ ಸಾತ್ಯಕಿಯನ್ನೂ ಕೂಡಿಕೊಂಡು ಆ ಶಿಬಿರದಿಂದ ದೂರ ಇದ್ದ ಸರಸ್ವತಿ ನದಿಯ ತೀರಕ್ಕೆ ಮುಂಗ

ಲಸ್ಥಾನಕ್ಕಾಗಿ ಹೋಗಿ ಅಲ್ಲಿಯೇ ನಿಂತುಕೊಂಡರು. ಸೂರ್ಯಾಸ್ತವಾದ ನಂತರ ಮೂರ್ಛೆಯಿಂದ ಬಿದ್ದಿದ್ದ ದುರ್ಯೋಧನನು ಎಚ್ಚರಿಕೆಯ ಮೇಲೆ ಬಂದು ತನ್ನ ತೊಡೆಗೆ ಆದ ನೋವಿನಿಂದ ನರಳಲಿಕ್ಕೆ ಹತ್ತಿದನು. ಇಷ್ಟರಲ್ಲಿ ಸಂಜಯನು ಅಲ್ಲಿಗೆ ಬರಲಾಗಿ ದುರ್ಯೋಧನನು ಅವನ ಮುಂದೆ ತನ್ನ ಸ್ಥಿತಿಯನ್ನು ನೆನೆಸಿಕೊಂಡು ಬಹಳ ಆಕ್ರೋಶ ಮಾಡಿದನು. ಇಷ್ಟರಲ್ಲಿ ಅಶ್ವತ್ಥಾಮ, ಕೃಪ ಮತ್ತು ಕೃತವರ್ಮರು ದುರ್ಯೋಧನನು ಜೀವಂತವಿರುತ್ತಾನೆಂಬ ಸುದ್ದಿಯನ್ನು ಕೇಳಿ ಅಲ್ಲಿಗೆ ಬಂದರು. ಅಶ್ವತ್ಥಾಮನು ದುರ್ಯೋಧನನ ಆಕ್ರೋಶವನ್ನು ಕೇಳಿ ಹಾಗೂ ಅವನ ಭಯಂಕರವಾದ ಅವಸ್ಥೆಯನ್ನು ನೋಡಿ ಸಿಟ್ಟಿನಿಂದ ಹಲ್ಲು ತುಟಿಗಳನ್ನು ಕಚ್ಚುತ್ತ—“ ಎಲೈ ನರಶಾರ್ದೂಲನೇ, ನೀನು ಇಡೀ ಭೂಮಂಡಲದ ಮಹಾ ಧರ್ಮಶಾಲಿಯಾದ ಗಂಡನು. ಹೀಗಿದ್ದು ನೀನು ಈ ಪ್ರಕಾರ ನಿನ್ನ ಶತ್ರುಗಳ ಅಧರ್ಮದಿಂದ ನಿನ್ನ ತೊಡೆಯನ್ನು ಮುರಕೊಂಡು ನರಳುತ್ತ ಮಣ್ಣುಕಲ್ಲಲ್ಲಿ ಹೊರಳಾಡಬೇಕಾಯಿತೇ? ಈ ನಿನ್ನ ದುರ್ಧರ ಅವಸ್ಥೆಯನ್ನು ನೋಡಿ ಲಕ್ಷ್ಮಿಯು ನಿಶ್ಚಯವಾಗಿಯೂ ಚಂಚಲಳೆಂದು ಯಾರೂ ಹೇಳದಿರಲಾರರು” ಎಂದು ಹೇಳಿದನು. ಆಗ ದುರ್ಯೋಧನನು ತನ್ನ ಕಣ್ಣು ಒರಿಸಿಕೊಂಡು—“ ಅಶ್ವತ್ಥಾಮಾದಿ ಸ್ನೇಹಿತರೇ, ಪರಮೇಶ್ವರನು ಇದೇ ರೀತಿಯುಳ್ಳ ಜಗತ್ತನ್ನು ನಿರ್ಮಾಣ ಮಾಡಿರುತ್ತಾನೆ. ಎಲ್ಲರು ಕಾಲಾನುಸಾರವಾಗಿ ನಾಶವನ್ನು ಹೊಂದುವವರೇ. ನಿಮ್ಮ ಕಣ್ಣ ಮುಂದೆ ಆ ಕಾಲವು ನನಗೆ ಈಗ ಒದಗಿರುತ್ತದೆ. ದುಃಖದಲ್ಲಿ ಸಮಾಧಾನವೇನಂದರೆ, ನಾನು ಕ್ಷಾತ್ರಧರ್ಮಕ್ಕನುಸರಿಸಿ ಯುದ್ಧವನ್ನು ಮಾಡಿದೆನು. ಅದನ್ನು ಎಂದೂ ನಿರಾಕರಿಸಲಿಲ್ಲ. ಆದರೆ ದುಷ್ಟರು ನನ್ನನ್ನು ಛಲದಿಂದ ವಧಿಸಿದರು. ನನ್ನ ಸ್ನೇಹಿತರಾದ ನೀವು ದುಃಖ ಮಾಡಬೇಡಿರಿ. ನೀವೂ ನಿಮ್ಮ ಕರ್ತವ್ಯಕ್ಕನುಸರಿಸಿ ಉತ್ತಮ ಪರಾಕ್ರಮವನ್ನು ಮಾಡಿದಿರಿ. ದೈವವು ವಿಪರೀತವಿರುವಾಗ ನೀವೂ ನಾನೂ ಮಾಡುವದೇನದೆ?” ಎಂದು ಉತ್ತರ ಕೊಟ್ಟನು. ಈ ಪ್ರಕಾರ ದುರ್ಯೋಧನನು ಭಾಷಣ ಮಾಡಿದ್ದನ್ನು ಕೇಳಿ ಅಶ್ವತ್ಥಾಮನು—“ ರಾಜಾ, ಶತ್ರುಗಳು ಕೇವಲ ಅಧರ್ಮದಿಂದ ನಮ್ಮನ್ನು ಗೆದ್ದರು. ಅವರು ನನ್ನ ತಂದೆಯನ್ನು ಅಧರ್ಮದಿಂದ ಕೊಂದದ್ದರಿಂದ ನನಗೆ ಉಂಟಾದ

ಸಿಟ್ಟಿನಕಿಂತ ಹೆಚ್ಚಿನ ಸಿಟ್ಟು ನಿನ್ನನ್ನು ಅಧರ್ಮದಿಂದ ಹೊಡೆದದ್ದನ್ನು ನೋಡಿ ಆಗಿರುತ್ತದೆ. ನೀನು ಅಪ್ಪಣೆಯನ್ನು ಕೊಟ್ಟರೆ ನಾನು ಈಗಲೂ ಆ ಪಾಂಚಾಲ ಪಾಂಡವರನ್ನು ಕೊಂದು ಬಿಡುವೆನು" ಎಂದು ಹೇಳಿದನು. ಇದನ್ನು ಕೇಳಿ ದುರ್ಯೋಧನನು ಆನಂದಪಟ್ಟು ಕೃಪಾಚಾರ್ಯನಿಗೆ--"ಗುರುಗಳೇ, ಬೇಗನೆ ಉದಕವನ್ನು ತನ್ನಿರಿ. ನನ್ನ ಜೀವವಿರುವದರೊಳಗಾಗಿ ಈ ಅಶ್ವತ್ಥಾಮನಿಗೆ ನನ್ನ ಸೇನಾಪತಿಯ ಅಭಿಷೇಕವನ್ನು ಮಾಡಿರಿ" ಎಂದು ಹೇಳಲು ಕೃಪಾಚಾರ್ಯನು ಸರಸ್ವತೀ ನದಿಯ ನೀರನ್ನು ತಂದು ಅಶ್ವತ್ಥಾಮನಿಗೆ ಅಭಿಷೇಕ ಮಾಡಿದನು. ಆಗ ದುರ್ಯೋಧನನು ಅಶ್ವತ್ಥಾಮನಿಗೆ--"ರಾಜಾಜ್ಞೆಯ ಪ್ರಕಾರ ಪ್ರತಿಯೊಬ್ಬರು ಅವಶ್ಯವಾಗಿ ಯುದ್ಧ ಮಾಡತಕ್ಕದ್ದು. ವಿಶೇಷವಾಗಿ ಕ್ಷಾತ್ರ ಧರ್ಮದಿಂದ ಇರುವ ಬ್ರಾಹ್ಮಣರು ಅವಶ್ಯವಾಗಿ ಯುದ್ಧ ಮಾಡತಕ್ಕದ್ದು. ಆದುದರಿಂದ ನೀನು ನನ್ನ ಸಲುವಾಗಿ ಯುದ್ಧಂಮಾಡು" ಎಂದು ಹೇಳಿ ತನ್ನ ಕಣ್ಣು ಮುಚ್ಚಿ ಕ್ಷಣಾರ್ಧದಲ್ಲಿ ಭೂತಪಿಶಾಚಿಗಳಿಗೆ ಸಹ ಭಯಂಕರವಾಗಿದ್ದ ಕಲ್ಪನಾತೀತ ಅಂಧಃಕಾರದ ಪ್ರದೇಶದಲ್ಲಿ ಪ್ರವೇಶ ಮಾಡಿದನು.

ಈ ಮೇರೆಗೆ ಸೂರ್ಯಾಸ್ತ ಸಮಯಕ್ಕೆ ದುರ್ಯೋಧನನು ಅಸ್ತನಾದನು. ಆ ಬಳಿಕ ಅಶ್ವತ್ಥಾಮ, ಕೃಪ ಮತ್ತು ಕೃತವರ್ಮ ಈ ಮೂರು ಮಂದಿ ವೀರರು ರಣಭೂಮಿಯನ್ನು ಬಿಟ್ಟು ರಥದಲ್ಲಿ ಕುಳಿತು ದಕ್ಷಿಣ ಕಡೆಯಲ್ಲಿದ್ದ ಒಂದು ಅರಣ್ಯದೊಳಗೆ ಹೋಗಿ, ಒಂದು ದೊಡ್ಡ ಆಲದ ಮರದ ಕೆಳಗೆ ಒಂದು ನೀರಿನ ಮಡವು ಇದ್ದದ್ದನ್ನು ಕಂಡು, ಅಲ್ಲಿ ತಮ್ಮ ಕುದುರೆಗಳನ್ನು ಬಿಟ್ಟು, ಸಂಧ್ಯಾವಂದನಾದಿ ಕರ್ಮಗಳನ್ನು ತೀರಿಸಿಕೊಂಡು ವಿಶ್ರಾಂತಿಯನ್ನು ತೆಗೆದುಕೊಳ್ಳುವದಕ್ಕಾಗಿ ನೆಲಕ್ಕೆ ಬೆನ್ನು ಹಚ್ಚಿ ಅಡ್ಡಾದರು. ಇಡೀ ದಿವಸದ ಆಯಾಸದಿಂದ ದಣಿದಿದ್ದ ಕೃಪನಿಗೂ ಕೃತವರ್ಮನಿಗೂ ಬೇಗನೆ ನಿದ್ರೆಯು ಬಂತು. ಆದರೆ ಅಶ್ವತ್ಥಾಮನು ದಣಿದಿದ್ದರೂ ಅವನಿಗೆ ಸಂತಾಪವು ಹೆಚ್ಚು ಆಗಿದ್ದರಿಂದ ಅವನಿಗೆ ನಿದ್ರೆಯು ಹತ್ತಲಿಲ್ಲ. ಅವನು ತನ್ನ ಮೈಯಲ್ಲಿಯ ಕವಚವನ್ನು ಸಹ ತೆಗೆಯದೆ ಆಕಾಶದ ಕಡೆಗೆ ಮೋರೆ ಮಾಡಿ ವಿಚಾರ ಮಾಡುತ್ತ ಬಿದ್ದುಕೊಂಡನು. ಅವನು ತನ್ನ ಮನಸ್ಸಿನಲ್ಲಿ--"ನಾನಂತೂ ಪಾಂಡವರನ್ನು ನಾಶ ಮಾಡುವೆನೆಂದು ದುರ್ಯೋಧನನಿಗೆ ವಚನ ಕೊಟ್ಟು

ಬಂದೆನು. ಆದರೆ ಜಯದ ಗರ್ವದಿಂದ ಮೆರೆಯುವ ಪಾಂಡವರನ್ನು ಬಹಿರಂಗ ವಾದ ಯುದ್ಧದಲ್ಲಿ ಗೆಲೆಯುವದು ಅಶಕ್ಯವಿರುತ್ತದೆ. ಆದುದರಿಂದ ಇನ್ನು ಮುಂದೆ ಏನು ಮಾಡಬೇಕು? ” ಎಂದು ಚಿಂತಿಸಹತ್ತಿದನು. ಇಷ್ಟರಲ್ಲಿ ಒಂದು ದೊಡ್ಡ ಗೂಗೆಯು ಸಿಳ್ಳು ಸ್ವರದಿಂದ ಚೀರಾಡುತ್ತ ಅವನು ಯಾವ ಗಿಡದ ಕೆಳಗೆ ಅಡ್ಡಾಗಿದ್ದನೋ ಆ ಗಿಡದ ಒಂದು ಟೊಂಗೆಯ ಮೇಲೆ ಮಲಗಿಕೊಂಡಿದ್ದ ಕಾಗೆಗಳ ಮೇಲೆ ಅಕಸ್ಮಾತ್ ಹಾರಿ ಬಂದು ಅವುಗಳ ಕುತ್ತಿಗೆಯನ್ನು ಮುರಿದು ಅವುಗಳ ರಕ್ತ ಕುಡಿದು ಅವುಗಳ ರೆಕ್ಕೆ ಮತ್ತು ಕಾಲುಗಳನ್ನು ಕೆಳಗೆ ಒಗಿಯು ಲಿಕ್ಕೆ ಹತ್ತಿದ್ದನ್ನು ಕಂಡನು. ಆಗ ಅವನ ಮನಸ್ಸಿನಲ್ಲಿ ತಾನೂ ಈ ಗೂಗೆಯಂತೆ ಜಯದ ಮಬ್ಬಿನಿಂದ ತಮ್ಮ ಶಿಬಿರದಲ್ಲಿ ಮಲಗಿಕೊಂಡಿದ್ದ ಪಾಂಡವರನು ಕೊಂದು ಹಾಕಬೇಕೆಂಬ ವಿಚಾರವು ಬಂತು. ಆ ಕೂಡಲೆ ಅವನು ತನ್ನ ಹತ್ತರ ಮಲಗಿಕೊಂಡಿದ್ದ ತನ್ನ ಮಾವನಾದ ಕೃಪಾಚಾರ್ಯನನ್ನು ಎಬ್ಬಿಸಿ ಅವನಿಗೆ ಈ ತನ್ನ ವಿಚಾರವನ್ನು ತಿಳಿಸಿದನು. ಆಗ ಅವನು ಮೊದಲಿಗೆ ಇದು ಮಹಾ ಪಾಪವೆಂದು ಒಪ್ಪಿಕೊಳ್ಳಲಿಲ್ಲ. ಆದರೆ ಅಶ್ವತ್ಥಾಮನು—“ನನ್ನ ತಂದೆ ಯನ್ನು ಅಧರ್ಮದಿಂದ ಕೊಂದಂಥ ಹಾಗೂ ದುರ್ಯೋಧನ ರಾಜನ ತೊಡೆ ಯನ್ನು ಅಧರ್ಮದಿಂದ ಮುರಿದಂಥ ದುಷ್ಟರಿಗೆ ಅವರು ನಿದ್ರಾವಸ್ಥೆಯಲ್ಲಿದ್ದಾಗ ಕೊಲ್ಲುವದರಿಂದ ನನಗೆ ಕ್ಷುದ್ರ ಕೀಟಕದ ಅಥವಾ ಪತಂಗದ ಜನ್ಮವು ಬಂದ ರೂ ಅಡ್ಡಿ ಇಲ್ಲ. ಸುಮ್ಮನೆ ವಾದ ಮಾಡುವದರಿಂದ ವೇಳೆಯು ಹೋಗುತ್ತದೆ. ಇಗೋ, ನಾನು ಹೊರಟೆನು. ನಿಮಗಿಬ್ಬರಿಗೂ ಬರತಕ್ಕದ್ದಿದ್ದರೆ ನೀವು ನನ್ನ ಸಂಗಡ ಬನ್ನಿರಿ ” ಎಂದು ಹೇಳಿ ಅಶ್ವತ್ಥಾಮನು ತನ್ನ ರಥಕ್ಕೆ ಕುದುರೆಯನ್ನು ಹೂಡಿದನು. ಆಗ ನಿರುಪಾಯದಿಂದ ಕೃಪಾಚಾರ್ಯನು ಕೃತವರ್ಮನನ್ನು ಎಬ್ಬಿ ಸಿದ ಬಳಿಕ ಈ ಮೂರೂ ಮಂದಿ ವೀರರು ಪ್ರದೀಪ್ತವಾದ ಅಗ್ನಿಯಂತೆ ಪಾಂಡ ವರನ್ನು ಕೊಲ್ಲುವದಕ್ಕಾಗಿ ಅವರ ಶಿಬಿರಕ್ಕೆ ಹೊರಟರು. ಈ ಮೂವ್ವರೂ ಪಾಂಡವರ ಶಿಬಿರಕ್ಕೆ ಹೋಗಿ ಮುಟ್ಟಿದ ನಂತರ ಅಶ್ವತ್ಥಾಮನು ಕೃಪಾಚಾ ರ್ಯನನ್ನೂ ಕೃತವರ್ಮನನ್ನೂ ಶಿಬಿರದ ಮುಖ್ಯ ದ್ವಾರದ ಹತ್ತರ ನಿಲ್ಲಿಸಿ ತಾನು ಒಂದು ಅಡ್ಡ ದಾರಿಯಿಂದ ಆ ಶಿಬಿರದೊಳಗೆ ಪ್ರವೇಶ ಮಾಡಿ ಒಂದು ದೊಡ್ಡ ಡೇರೆಯಲ್ಲಿ ಮಂಚದ ಮೇಲೆ ಮಲಗಿಕೊಂಡು ನಿದ್ರೆ ಮಾಡುತ್ತಿದ್ದ ಧೃಷ್ಟ

ದ್ಯುಮ್ನನ ಎದೆಯ ಮೇಲೆ ಕುಳಿತು ಅವನ ಕುತ್ತಿಗೆ ಹಿಚಿಕಿ ಅವನು ಆ ಆ
ಎಂದು ಒದರುತ್ತಿರುವಾಗಲೇ ಅವನನ್ನು ಕೊಂದು ಬಿಟ್ಟನು. ಧೃಷ್ಟದ್ಯುಮ್ನ
ನು ಸಾಯುವ ಮುಂದೆ ಒದ್ದಾಡಿದ ಸಪ್ಪಳವನ್ನು ಕೇಳಿ ಅವನ ಸೇವಕರೂ
ಹೆಂಗಸರೂ ಎಚ್ಚರಾದರು. ಅವರನ್ನೂ ಅಶ್ವತ್ಥಾಮನು ತನ್ನ ಕತ್ತಿಯಿಂದ
ಕೊಂದನು. ಇದೇ ಪ್ರಕಾರ ಅವನು ಎರಡನೇ ಡೇರೆಗಳಲ್ಲಿ ಹೊಕ್ಕು ಅಲ್ಲಿ
ಮಲಗಿಕೊಂಡವರ ಕುತ್ತಿಗೆಯನ್ನು ಮುರಿದನು. ಹಾಗೂ ಎಚ್ಚರಾಗಿ ತನ್ನನ್ನು
ಅಡ್ಡಿ ಮಾಡಿದವರನ್ನು ಕತ್ತಿಯಿಂದ ಕೊಂದನು. ಈ ಪ್ರಕಾರ ಒಂದು ಕ್ಷಣ
ದಲ್ಲಿ ಎಲ್ಲ ಕಡೆಗೆ ಗದ್ದಲವು ಎದ್ದಿತು. ಭೂತವೋ, ಪಿಶಾಚಿಯೋ, ರಾಕ್ಷಸ
ವೋ ತಮ್ಮ ಶಿಬಿರದಲ್ಲಿ ಸೇರಿಕೊಂಡಿರುತ್ತದೆಂದು ಅಂಜಬುರುಕರು ಹೊರಗೆ
ಓಡಿ ಬರಲಾಗಿ ಅವರನ್ನು ಕೃಪನೂ ಕೃತವರ್ಮನೂ ಕೊಂದು ಬಿಟ್ಟರು.
ಶೂರರಿದ್ದವರು ಅಶ್ವತ್ಥಾಮನ ಕೂಡ ಯುದ್ಧ ಮಾಡಿದರು. ಆದರೆ ಅವನು
ಅವರನ್ನು ಅಸ್ತ್ರಗಳಿಂದಲೂ ಶಸ್ತ್ರಗಳಿಂದಲೂ ಯಮಲೋಕಕ್ಕೆ ಅಟ್ಟಿದನು.
ಈ ಭಯಂಕರ ಕೊಲೆಯಿಂದ ತಪ್ಪಿಸಿಕೊಂಡು ಹೋದ ಒಬ್ಬಿಬ್ಬ ಗೃಹಸ್ಥರು
ಈ ವರ್ತಮಾನವನ್ನು ಧರ್ಮರಾಜನಿಗೆ ಹೋಗಿ ಹೇಳಲು, ಅವನು ಬಹಳ
ದುಃಖ ಮಾಡುತ್ತ ಶ್ರೀಕೃಷ್ಣ, ಅರ್ಜುನ, ಭೀಮ ಮತ್ತು ಸಹದೇವರನ್ನು ಕರ
ಕೊಂಡು ತಮ್ಮ ಶಿಬಿರದಲ್ಲಿ ಬಿದ್ದ ಪ್ರೇತಗಳನ್ನು ನೋಡಲಿಕ್ಕೆ ಪಾದಚಾರಿಯಾ
ಗಿ ಹೋದನು. ನಕುಲನು ದ್ರೌಪದಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹಿಂದಿ
ನಿಂದ ಹೋದನು. ಅಲ್ಲಿ ದ್ರೌಪದಿಯು ಬಂದು ಅಶ್ವತ್ಥಾಮನು ತನ್ನ ಮಕ್ಕ
ಳನ್ನೂ ಅಣ್ಣ ತಮ್ಮಂದಿರನ್ನೂ ನಿರ್ದಯದಿಂದ ಕೊಂದದ್ದನ್ನು ಕಂಡು ಬಹಳ
ಸಂಕಟಪಟ್ಟು ಅವರಿಗೆ-"ನೀವು ಆ ದುಷ್ಟ ದ್ರೋಣಪುತ್ರನನ್ನು ವಧ ಮಾಡಿ
ದ ಹೊರತಾಗಿ ನನ್ನ ಶೋಕವು ಶಾಂತವಾಗಲಾರದು" ಎಂದು ಹೇಳಿದಳು.
ಹಾಗೂ ಭೀಮನಿಗೆ--"ನಿನ್ನ ಪ್ರೇಮವು ನನ್ನ ಮೇಲೆ ಇರುತ್ತಿದ್ದರೆ ನೀನು ಆ
ದುಷ್ಟನನ್ನು ಕೊಂದು ಅವನ ತಲೆಯ ಮೇಲಿನ ದಿವ್ಯಮಣಿಯನ್ನು ತೆಗೆದು
ಕೊಂಡು ಬಾ. ಅಲ್ಲಿಯ ತನಕ ನಾನು ಅನ್ನವನ್ನು ತೆಗೆದುಕೊಳ್ಳಲಾರೆನು"
ಎಂದು ಸತ್ಯಾಗ್ರಹ ಮಾಡಿದಳು. ಆಗ ಶೀಘ್ರಕೋಪಿಯಾದ ಭೀಮನು ತನ್ನ
ಧನುಷ್ಯ, ಬಾಣ ಮತ್ತು ಗದೆ ಇವುಗಳನ್ನು ತೆಗೆದುಕೊಂಡು ರಥದಲ್ಲಿ ಕುಳಿ

ತು ಅಶ್ವತ್ಥಾಮನನ್ನು ಹುಡುಕುತ್ತ ಶೀಘ್ರವಾದ ವೇಗದಿಂದ ಹೊರಟ
ನು. ಭೀಮ ಅಶ್ವತ್ಥಾಮರ ಕದನದಲ್ಲಿ ಏನು ಅನರ್ಥವು ಸಂಭವಿಸುವದೋ
ಎಂಬ ಅಂಜಿಕೆಯಿಂದ ಶ್ರೀಕೃಷ್ಣನು ಅರ್ಜುನನನ್ನೂ ಧರ್ಮನನ್ನೂ ತನ್ನ
ರಥದಲ್ಲಿ ಕುಳ್ಳಿರಿಸಿಕೊಂಡು ಭೀಮನ ಹಿಂದಿನಿಂದ ಹೋದನು. ಭೀಮನು
ಯಮುನಾ ನದಿಯ ತೀರವನ್ನು ದಾಟಿ ಬಂದ ಬಳಿಕ ಭಾಗೀರಥಿ ತೀರದ ಮೇ
ಲೆ ವ್ಯಾಸಮಹರ್ಷಿಗಳ ಆಶ್ರಮದಲ್ಲಿ ಅಶ್ವತ್ಥಾಮನು ಇರುತ್ತಾನೆಂದು ಅವ
ನಿಗೆ ತಿಳಿದುಬಂತು. ಆಗ ಅವನು ಅಲ್ಲಿಗೆ ಹೋಗಲಾಗಿ ಭಾಗೀರಥಿ ತೀರದ
ಮೇಲೆ ವ್ಯಾಸಮಹರ್ಷಿಗಳು ತಮ್ಮ ಋಷಿಪರಿವಾರದೊಡನೆ ಕುಳಿತುಕೊಂಡಿ
ದ್ದರು. ಅವರ ಸಮೀಪದಲ್ಲಿ ಅಶ್ವತ್ಥಾಮನು ಕುಳಿತಿದ್ದನು. ಅವನು ಮಲೀನ
ವಸ್ತ್ರಗಳನ್ನು ಧರಿಸಿದ್ದನು. ಅವನ ಮೈಯೆಲ್ಲ ಧೂಳು ಮುಸುಕಿತ್ತು. ಅವನನ್ನು
ಭೀಮನು ದೂರಿಂದಲೇ ಗುರುತು ಹಿಡಿದು—“ ದುಷ್ಟಾ, ನಿಲ್ಲು. ಓಡಿ ಹೋಗ
ಬೇಡ ” ಎಂದು ಅನ್ನುತ್ತ ಅವನ ಮೇಲೆ ಸಾಗಿ ಹೋದನು. ಆಗ ಅಶ್ವತ್ಥಾ
ಮನು ಸಂತಾಪದಿಂದಲೂ, ತನ್ನ ಪ್ರಾಣದ ಅಂಜಿಕೆಯಿಂದಲೂ, ದರ್ಭವನ್ನು
ತೆಗೆದುಕೊಂಡು ಅದಕ್ಕೆ ಬ್ರಹ್ಮಶಿರಾಸ್ತ್ರವನ್ನು ಮಂತ್ರಿಸಿ “ ಎಲ್ಲ ಪಾಂಡವರು
ಸತ್ತು ಹೋಗಲಿ ” ಎಂದು ನುಡಿದು ಆ ದರ್ಭವನ್ನು ಭೀಮನ ಮೇಲೆ ಒಗೆದನು.
ಅಷ್ಟರಲ್ಲಿ ಅಲ್ಲಿಗೆ ಬಂದು ಮುಟ್ಟಿದ್ದ ಶ್ರೀಕೃಷ್ಣನು ಅರ್ಜುನನಿಗೆ—“ ಅರ್ಜುನಾ,
ನಿನಗೆ ದ್ರೋಣನು ಇದೇ ಅಸ್ತ್ರವನ್ನು ಕಲಿಸಿದ್ದಾನೆ. ನೀನು ಅದರಿಂದ ಇದ
ನ್ನು ಪ್ರತೀಕಾರ ಮಾಡು ” ಎಂದು ಹೇಳಲಾಗಿ ಅರ್ಜುನನು ತನ್ನ ರಥದ ಕೆಳಗೆ
ಇಳಿದು “ ಸಕಲ ಜನರಿಗೂ ಕಲ್ಯಾಣವಾಗಲಿ ” ಎಂದು ಸಕಲ ಜನರ ಅಭೀಷ್ಟ
ಚಿಂತನ ಮಾಡಿ ಬ್ರಹ್ಮಶಿರಾಸ್ತ್ರವನ್ನು ಒಗೆದನು. ಈ ಪ್ರಕಾರ ಈ ಎರಡೂ
ಅಸ್ತ್ರಗಳು ಒಂದಕ್ಕೊಂದು ತಾಕಲಾಡಿದ್ದರಿಂದ ಭಯಂಕರವಾದ ಅಗ್ನಿಜ್ವಾಲೆ
ಯು ಹೊರಡಹತ್ತಿತು. ಆಗ ವ್ಯಾಸರು ಅಶ್ವತ್ಥಾಮನಿಗೆ—“ ನಿನ್ನ ಅಸ್ತ್ರವನು
ತಿರುಗಿ ತೆಗೆದುಕೋ. ಇಲ್ಲದಿದ್ದರೆ ಈ ಸ್ಥಳದಲ್ಲಿ ಹನ್ನೆರಡು ವರ್ಷ ದುಷ್ಕಾಳವು
ಬೀಳುವದು. ಇದಲ್ಲದೆ ನೀನು ಧರ್ಮನಿಗೆ ಶರಣು ಹೋಗಿ ನಿನ್ನ ತಲೆಯ ಮೇ
ಲಿನ ದಿವ್ಯ ಮಣಿಯನ್ನು ತೆಗೆದು ಕೊಡು ” ಎಂದು ಹೇಳಿದನು. ಅದಕ್ಕೆ ಅವನು
‘ ಹೂ ’ ‘ ಇಲ್ಲ ’ ಅನ್ನುತ್ತ ನೊಂಡತನದಿಂದ ತನ್ನ ಅಸ್ತ್ರವನ್ನು ಉತ್ತರೆಯ

ಗರ್ಭದಲ್ಲಿದ್ದ ಭಾವೀ ಪಾಂಡವ ವಂಶದ ಮೇಲೆ ಒಗೆದು, ಹಿಂದುಗಡೆ ತನ್ನ ತಲೆಯು ಮೇಲಿನ ದಿವ್ಯ ಮಣಿಯನ್ನು ಭೀಮನಿಗೆ ತೆಗೆದುಕೊಟ್ಟನು. ಆಗ ಶ್ರೀ ಕೃಷ್ಣನು ಅಶ್ವತ್ಥಾಮನನ್ನು ಉದ್ದೇಶಿಸಿ--“ ಅಶ್ವತ್ಥಾಮಾ, ನೀನು ಮಾಡಿದ ಈ ಅತ್ಯಂತ ನೀಚ ಕೆಲಸದ ಸಲುವಾಗಿ ನಿನಗೆ ಯೋಗ್ಯ ಶಿಕ್ಷೆಯು ಆಗದೆ ಇರ ಲಾರದು. ಯುದ್ಧವು ನಡೆಯುವಾಗ ಧರ್ಮಾಧರ್ಮ ವಿಚಾರ ಮಾಡದಿದ್ದರೆ ವಿಶೇಷ ಅಪರಾಧವೆನಿಸಲಿಕ್ಕಿಲ್ಲ. ಆದರೆ ಯುದ್ಧವು ಮುಗಿದ ಬಳಿಕ ನಿಶ್ಯಸ್ತ್ರರೂ ನಿದ್ರಿಸ್ಥರೂ ಆಗಿದ್ದ ಬಾಲ-ತರುಣ-ವೃದ್ಧರನ್ನು ನೀನು ಕೊಂದದ್ದು ಅತ್ಯಂತ ನಿಂದ್ಯವಾದ ಪಾಪವಿರುತ್ತದೆ. ಆದುದರಿಂದ ನೀನು ಪೃಥ್ವಿಯಲ್ಲಿ ಮೂರುಸಾವಿರ ವರ್ಷಗಳ ತನಕ ಒಬ್ಬನೇ ಅಡ್ಡಾಡುವೆ. ನಿನ್ನನ್ನು ಯಾರೂ ಎಂದೂ ತಮ್ಮ ಬಳಿ ಯಲ್ಲಿ ನಿಲ್ಲಗೊಡಲಾರರು. ನಿನ್ನ ತಲೆಯಲ್ಲಿ ಹುಳಗಳು ಬಿದ್ದು ನಿನ್ನ ಮೈತುಂಬ ಹುಣ್ಣುಗಳಾಗಿ ನೀನು ದುರ್ಗಂಧ ನಾರುತ್ತ ತಲೆಕೆಟ್ಟು ಅರಣ್ಯಗಳಲ್ಲಿ ಅಡ್ಡಾ ಡುತ್ತ ಜೀವಿಸಬೇಕಾಗುವದು ” ಎಂದು ಹೇಳಿದನು. ಇದನ್ನು ಕೇಳಿ ಅಶ್ವತ್ಥಾ ಮನು ಖಿನ್ನ ಮನಸ್ಸಿನಿಂದ ಎಲ್ಲರ ಸಮಕ್ಷ ಅರಣ್ಯಕ್ಕೆ ಹೊರಟು ಹೋದನು.

ಆ ಮೇಲೆ ಯುಧಿಷ್ಠಿರ, ಅರ್ಜುನ, ಮತ್ತು ಭೀಮ ಈ ಮೂರು ಜನರು ಶ್ರೀಕೃಷ್ಣನನ್ನು ಕೂಡಿಕೊಂಡು ತಮ್ಮ ತಮ್ಮ ರಥದಲ್ಲಿ ಕುಳಿತು ಸಾಯಂ ಕಾಲದ ಸುಮಾರಕ್ಕೆ ದ್ರೌಪದಿಯ ಹತ್ತರ ಬಂದ ಬಳಿಕ ಭೀಮನು ಯುಧಿ ಷ್ಠಿರನ ಅಜ್ಞೆಯ ಮೇರೆಗೆ ಆ ಮಣಿಯನ್ನು ದ್ರೌಪದಿಗೆ ಕೊಟ್ಟನು. ಆಗ ದ್ರೌಪದಿಯು--“ ಈ ಮಣಿಯನ್ನು ಧರ್ಮರಾಜನ ಕಿರೀಟಕ್ಕೆ ಕಟ್ಟಿರಿ. ಅಂ ದರೆ ನಾನು ನನ್ನ ಮಗನ ಋಣವನ್ನು ತೀರಿಸಿದಂತೆ ಆದೀತು ” ಎಂದು ನುಡಿ ದಳು. ಆ ಪ್ರಕಾರ ಧರ್ಮರಾಜನು ದ್ರೌಪದಿಯ ಸಮಾಧಾನಾರ್ಥವಾಗಿ ಆ ಮಣಿಯನ್ನು ತನ್ನ ಕಿರೀಟಕ್ಕೆ ಕಟ್ಟಿಕೊಂಡನು.

ಈ ಪ್ರಕಾರ ಭಾರತ ಯುದ್ಧವು ಮುಗಿದು ಪಾಂಡವರ ಏಳು ಅಕ್ಷೌ ಹಿಣಿ ಸೈನ್ಯದಲ್ಲಿ ಏಳು ಮಂದಿ ಮಾತ್ರ ಜೀವದಿಂದ ಉಳಿದರು. ಕೌರವ ಕಡೆ ಯ ಹನ್ನೊಂದು ಅಕ್ಷೌಹಿಣಿ ಸೈನ್ಯದಲ್ಲಿ ಹನ್ನೊಂದು ಮಂದಿ ಮಾತ್ರ ಜೀವ ದಿಂದ ಉಳಿದರು. ಈ ಪ್ರಕಾರ ಪೃಥ್ವಿಯ ಭಾರವನ್ನು ಕಡಿಮೆ ಮಾಡುವ ಅವತಾರ ಕೃತ್ಯವನ್ನು ಶ್ರೀಕೃಷ್ಣನು ಮಾಡಿದನು. ಆ ಮೇಲೆ ಐದು ಮಂದಿ

ಪಾಂಡವರು, ಶ್ರೀಕೃಷ್ಣನು ಮತ್ತು ಸಾತ್ಯಕಿಯು ಕೂಡಿಕೊಂಡು ಹಸ್ತಿನಾ ಪುರಕ್ಕೆ ಹೋಗಲು ಹೊರಟರು. ಅಷ್ಟರಲ್ಲಿ ಧೃತರಾಷ್ಟ್ರನು ಸಂಜಯ ವಿದುರರನ್ನೂ, ಗಾಂಧಾರಿ ಕುಂತಿ ಸಹಿತ ಎಲ್ಲ ಸ್ತ್ರೀಯರನ್ನೂ, ಕರಕೊಂಡು ಅಲ್ಲಿಗೆ ಬಂದನು. ಆಗ ಧರ್ಮನು ಧೃತರಾಷ್ಟ್ರನಿಗೆ ಎದುರಾಗಿ ಹೋಗಿ ಅವನಿಗೆ ವಂದನೆಯನ್ನು ಮಾಡಿದನು. ಧೃತರಾಷ್ಟ್ರನು ಪುತ್ರಶೋಕದಿಂದ ಸಂತಪ್ತವಾದ ತನ್ನ ಮನಸ್ಸನ್ನು ಹಾಗೂ ಹೀಗೂ ಗಟ್ಟಿ ಮಾಡಿಕೊಂಡು ಧರ್ಮನಿಗೆ ಆಲಿಂಗನವನ್ನು ಕೊಟ್ಟನು. ಆ ಮೇಲೆ ಭೀಮನು ಅವನಿಗೆ ವಂದನೆಯನ್ನು ಮಾಡಿದನು. ಆಗ ಧೃತರಾಷ್ಟ್ರನ ಕ್ರೋಧಾನಲವು ಪ್ರಜ್ವಲಿತವಾಗಿ, ಅವನ ಮೋರೆಯ ಮೇಲೆ ಹುಚ್ಚು ಕಳೆಯು ಸುರಿಯಲಿಕ್ಕೆ ಹತ್ತಿ, ಅವನ ಮಾತಿನ ಸ್ವರವು ವಿಪರೀತವಾಗಿ "ಭೀಮಾ ಬಾ, ನನಗೆ ಆಲಿಂಗನ ಕೊಡು" ಎಂದು ಮುಂದಕ್ಕೆ ಸರಿದನು. ಆ ಕೂಡಲೆ ಶ್ರೀಕೃಷ್ಣನು ಧೃತರಾಷ್ಟ್ರನ ಉದ್ದೇಶವನ್ನು ಕಂಡುಹಿಡಿದು ಭೀಮನನ್ನು ಓರಿಗೆ ಸರಿಸಿ ದುರ್ಯೋಧನನು ತನ್ನ ಗದಾಯುದ್ಧದ ಅಭ್ಯಾಸಕ್ಕಾಗಿ ತನ್ನ ಕೈಯಿಂದ ಮಾಡಿಟ್ಟಂಥ ಭೀಮನ ಕಬ್ಬಿಣದ ಪ್ರತಿಮೆಯನ್ನು ಧೃತರಾಷ್ಟ್ರನ ಮುಂದೆ ಸರಿಸಿದನು. ಆಗ ಧೃತರಾಷ್ಟ್ರನು ಆ ಪ್ರತಿಮೆಯನ್ನುಗಟ್ಟಿಯಾಗಿ ಅಪ್ಪಿಕೊಂಡದ್ದರಿಂದ ಒಳಗೆ ಪೊಳ್ಳು ಇದ್ದ ಆ ಮೂರ್ತಿಯು ಒಡೆದು ಪುಡಿಪುಡಿಯಾಯಿತು. ಇದರಿಂದ ಧೃತರಾಷ್ಟ್ರನ ಎದೆಗೆ ನೋವು ಆಗಿ ಅವನು ರಕ್ತವನ್ನು ಕಾರಿಕೊಂಡು ಮೂರ್ಛಿತನಾಗಿ ನೆಲದ ಮೇಲೆ ಬಿದ್ದು ಕೆಲವು ಹೊತ್ತಿನ ಮೇಲೆ—"ಭೀಮನಿಗೆ ಅಪಾಯವಾಗಲಿಲ್ಲವಷ್ಟೇ?" ಎಂದು ಕೇಳಿ ಡಾಂಭಿಕತನದಿಂದ ದುಃಖ ಮಾಡಹತ್ತಿದನು. ಆಗ ಶ್ರೀಕೃಷ್ಣನು ಧೃತರಾಷ್ಟ್ರನಿಗೆ-"ನೀನು ವ್ಯರ್ಥವಾಗಿ ನಿನ್ನ ಜೀವಕ್ಕೆ ಕಷ್ಟ ಮಾಡಿಕೊಳ್ಳಬೇಡ. ಮುರಿದು ಪುಡಿ ಪುಡಿಯಾದದ್ದು ಭೀಮನ ಕಬ್ಬಿಣದ ಪ್ರತಿಮೆಯು ಇರುತ್ತದೆ. ಅದು ಪ್ರತ್ಯಕ್ಷ ಭೀಮನಲ್ಲ. ನೀನು ಪುತ್ರಶೋಕದಿಂದ ಸಂತಪ್ತನಾಗಿದ್ದನ್ನು ಕಂಡು ನಾನೇ ಭೀಮನನ್ನು ಓರಿಗೆ ಸರಿಸಿ ಅವನನ್ನು ಜೀವದಿಂದ ಬದುಕಿಸಿದೆನು. ಅವನನ್ನು ನೀನು ಕೊಂದಿದ್ದರೆ ನಿನ್ನ ಸತ್ತು ಹೋದ ಮಕ್ಕಳು ತಿರುಗಿ ಬದುಕುತ್ತಿದ್ದರೇ? ಆದದ್ದೆಲ್ಲ ಒಳಿತಾಯಿತೆಂದು ತಿಳಕೊಂಡು ಸಮಾಧಾನದಿಂದಿರು. ನಿನ್ನ ಅಪರಾಧಗಳೇ ಅನೇಕವಿರುತ್ತಿದ್ದು ನೀನು ಪಾಂಡವರ ಮೇಲೆ ಸಿಟ್ಟಾಗುವದು

ಅನ್ಯಾಯವಿರುತ್ತದೆ. ನೀನು ಪಾಂಡವರ ಮೇಲಿನ ಸಿಟ್ಟನ್ನು ಬಿಟ್ಟು ಅವರನ್ನು ನಿನ್ನ ಹೊಟ್ಟೆಯ ಮಕ್ಕಳೆಂದು ತಿಳಕೊಂಡು ನಡೆ" ಎಂದು ಹೇಳಿದನು. ಅದಕ್ಕೆ ಧೃತರಾಷ್ಟ್ರನು ಒಪ್ಪಿಕೊಂಡು—"ಈಗ ನನ್ನ ಕ್ರೋಧವು ಶಾಂತವಾಯಿತು. ನನ್ನ ಮೇಲೆ ಅವಿಶ್ವಾಸ ಮಾಡದೆ ನನ್ನ ಕಡೆಗೆ ಭೀಮನನ್ನು ತಂದು ನನಗೆ ಅವನ ಆಲಿಂಗನವನ್ನು ಕೊಡಿಸಿರಿ" ಎಂದು ಹೇಳಿದನು. ಆಗ ಭೀಮನು ಅವನ ಮುಂದೆ ಹೋಗಿ ನಿಲ್ಲಲಾಗಿ ಧೃತರಾಷ್ಟ್ರನು ಅವನಿಗೆ ಆಲಿಂಗನವನ್ನು ಕೊಟ್ಟನು. ಆ ಮೇಲೆ ಯುಧಿಷ್ಠಿರನು ಗಾಂಧಾರಿಗೆ ವಂದನೆಯನ್ನು ಮಾಡಲಿಕ್ಕೆ ಹೋದನು. ಆಗ ಅವಳು ಸಿಟ್ಟಿನಿಂದ ಅವನಿಗೆ ಶಾಪ ಕೊಡಲಿಕ್ಕೆ ಉದ್ಯುಕ್ತಳಾದಳು. ಇಷ್ಟರಲ್ಲಿ ಯುಧಿಷ್ಠಿರನು ಅವಳಿಗೆ—"ತಾಯೀ, ಈ ಹತಭಾಗ್ಯನಾದ ನನಗೆ ನೀನು ಬೇಕಾದಷ್ಟು ಶಾಪ ಕೊಡು. ನನ್ನ ಅಜ್ಜಂದಿರು, ಮುತ್ಯಂದಿರು, ಗುರುಗಳು, ಅಣ್ಣತಮ್ಮಂದಿರು, ಬೀಗರು; ಬಿಜ್ಜರು ಈ ಪ್ರಕಾರ ಎಲ್ಲರನ್ನು ನಾಶ ಮಾಡಿ ಸಂಪಾದಿಸಿದ ರಾಜ್ಯವು ನನಗೆ ನರಕದಂತೆ ತೋರುತ್ತದೆ. ಕಿಂಬಹುನಾ ನನಗೆ ನನ್ನ ಜೀವವು ಬೇಡಾಗಿರುತ್ತದೆ. ನಿನ್ನ ಶಾಪದಿಂದ ನಾನು ಈ ದುಃಖ ಸಮುದ್ರದಿಂದ ಮುಕ್ತನಾದೇನು!" ಎಂದು ಹೇಳಿದನು. ಈ ಅವನ ದೈನ್ಯ ನುಡಿಯನ್ನು ಕೇಳಿ ಗಾಂಧಾರಿಯು ಅವನಿಗೆ ಏನೂ ಮಾತಾಡಲಿಲ್ಲ. ಆದರೆ ಯುಧಿಷ್ಠಿರನು ಅವಳಿಗೆ ನಮಸ್ಕಾರ ಮಾಡುವಾಗ ಅವನ ಉಗುರುಗಳ ಮೇಲೆ ಅವಳ ಕೋಪದ ದೃಷ್ಟಿಯು ಬಿದ್ದ ಕಾರಣ ಅವನ ಉಗುರುಗಳು ಉಚ್ಚಿ ಹೋಗಿ ಅವನ ಕೈ ಬೆರಳುಗಳು ವಿದ್ರೂಪವಾದವು. ಆ ಮೇಲೆ ಎಲ್ಲ ಪಾಂಡವರು ಕುಂತಿಗೆ ವಂದನೆಗಳನ್ನು ಮಾಡಲು ಅವಳು ಅವರೆಲ್ಲರನ್ನು ಅವಚಿಕೊಂಡು ಬಹಳ ಶೋಕ ಮಾಡಿದಳು. ದ್ರೌಪದಿಯು ತನ್ನ ಇಬ್ಬರೂ ಅತ್ತೆಯಂದಿರಿಗೆ ನಮಸ್ಕಾರ ಮಾಡಿ ತನ್ನ ಸತ್ತ ಮಕ್ಕಳನ್ನೂ, ಅಣ್ಣತಮ್ಮಂದಿರನ್ನೂ ನೆನಪುಮಾಡಿಕೊಂಡು ಅಳಲಿಕ್ಕೆ ಹತ್ತಲಾಗಿ ಗಾಂಧಾರಿಯು ಅವಳಿಗೆ—"ಸೊಸೆಯೇ, ನನ್ನ ಕಡೆಗೆ ನೋಡಿ ನಿನ್ನ ಶೋಕವನ್ನು ಶಾಂತ ಮಾಡಿಕೋ" ಎಂದು ಹೇಳಿದಳು. ಈ ಪ್ರಕಾರ ಎಲ್ಲರು ಒಬ್ಬರಿಗೊಬ್ಬರು ಮಾತಾಡಿದ ತರುವಾಯ ಅಲ್ಲಿಂದ ಹೊರಟು ಮೆಲ್ಲ ಮೆಲ್ಲನೆ ಭಾಗೀರಥಿಗೆ ಹೋಗಿ ಎಲ್ಲ ಮೃತರಿಗೆ ತರ್ಪಣವನ್ನು ಕೊಟ್ಟರು.

# ೮. ಉತ್ತರಪರ್ವ.



ಯಶಸ್ವಿಯಾದ ಯುಧಿಷ್ಠಿರನು ಮೃತರಿಗೆ ಭಾಗೀರಥಿಯಲ್ಲಿ ತರ್ಪಣವನ್ನು ಕೊಟ್ಟು ತನ್ನ ಮಕ್ಕಳ ಸೂತಕವನ್ನು ಪಾಲಿಸುವದಕ್ಕೋಸ್ಕರ ಅಲ್ಲಿಯೇ ಒಂದು ತಿಂಗಳದವರೆಗೆ ನಿಂತುಕೊಂಡನು. ತಾಯಿಯಾದ ಕುಂತಿಯು ಅವನಿಗೆ—“ ನೀವು ಭೀಷ್ಮ, ದ್ರೋಣ ಮುಂತಾದ ಶತ್ರುಗಳೊಂದಿಗೆ ಕೊಂದಂಥ ಕರ್ಣನು ನಿಮ್ಮ ಅಣ್ಣನು ” ಎಂದು ಹೇಳಿದಾಗಂತೂ ಅವನ ದುಃಖವು ಮೇರೆದಪ್ಪಿ ಹೋಯಿತು. ಆಗ ಅವನು ಒಂದು ದಿವಸ ಅರ್ಜುನನಿಗೆ—“ ಅರ್ಜುನಾ, ಲೋಭದ ಸಲುವಾಗಿ ನಮ್ಮಿಂದ ಅನೇಕ ಪಾಪಗಳು ಘಟಿಸಿ ನನಗೆ ಈ ಭಯಂಕರ ಅವಸ್ಥೆಯು ಪ್ರಾಪ್ತವಾಯಿತು. ಅರಣ್ಯದಲ್ಲಿ ವಾಸಿಸುವ ಮುನಿಗಳು ಕ್ಷಮೆ, ವೈರಾಗ್ಯ, ನಿರ್ಮಾತ್ಸರ್ಯ, ಅಹಿಂಸಾ, ಸತ್ಯವಚನ ಮುಂತಾದವುಗಳಿಂದ ಕೂಡಿರುವ ಕಾರಣ ನಾನು ಮುನಿಯಾಗಿ ಅರಣ್ಯಕ್ಕೆ ಹೋಗುವೆನು. ನೀನೇ ರಾಜ್ಯವನ್ನು ಆಳು ” ಎಂದು ಹೇಳಿದನು. ಅದಕ್ಕೆ ಅರ್ಜುನನು ಅವನಿಗೆ—“ ರಾಜಾ, ಇದು ನಿನಗೆ ಶೋಭಿಸುವದಿಲ್ಲ. ದ್ರವ್ಯವನ್ನು ಸಂಪಾದಿಸಿ ಅಶ್ವಮೇಧದಂಥ ಯಜ್ಞವನ್ನು ಮಾಡುವದೂ, ಪ್ರಜರನ್ನು ಪಾಲನ ಮಾಡುವದೂ ರಾಜಧರ್ಮವಿರುತ್ತದೆ. ದಾಶರಥಿ ರಾಮಚಂದ್ರನನ್ನು ಮೊದಲ್ಗೊಂಡು ಈ ಉತ್ತಮ ಮಾರ್ಗವು ನಡೆದುಕೊಳ್ಳುತ್ತ ಬಂದಿದ್ದು ಈಗ ನೀನು ಅದನ್ನು ಬಿಟ್ಟು ಎರಡನೇ ಮಾರ್ಗವನ್ನು ಹಿಡಿಯಬೇಡ. ನೀರು, ಮಣ್ಣು, ಹಣ್ಣು ಇವುಗಳಲ್ಲಿ ಸಹ ನೂರಾರು ಜಂತುಗಳು ಇರುತ್ತಿದ್ದು ಇವುಗಳ ಹಿಂಸೆಯನ್ನು ಪ್ರತಿಯೊಬ್ಬರು ದಿನಾಲು ಮಾಡುವದಿಲ್ಲವೇ? ಹಿಂಸೆಯನ್ನು ಮಾಡದೆ ಅಥವಾ ಬಿಕ್ಕಟ್ಟಾದ ಕರ್ಮವನ್ನು ಮಾಡದೆ ಉತ್ಕರ್ಷವು ಅಥವಾ ಲಕ್ಷ್ಮಿಯು ಪ್ರಾಪ್ತವಾಗುವ ಬಗೆ ಹೇಗೆ? ಇದಲ್ಲದೆ ಲೋಕಕಲ್ಯಾಣಕ್ಕಾಗಿ ಹಿಂಸೆಯನ್ನು ಮಾಡುವ ಪ್ರಸಂಗವು ಬಂದರೆ ಅದು ಹಿಂಸೆಯೆನಿಸಲಾರದು. ಎಲ್ಲ ರೀತಿಯಿಂದ ಗುಣವಾದ ವಸ್ತುವು ಅಥವಾ ಎಲ್ಲ ರೀತಿಯಿಂದ ಒಳ್ಳೇದಾದ ಕರ್ಮ

ವು ಈ ಜಗತ್ತಿನಲ್ಲಿ ಒಂದೂ ಇರುವದಿಲ್ಲ. ಆದುದರಿಂದ ಈ ಮಿಶ್ರವಾದ ಜಗತ್ತಿನ ವ್ಯವಹಾರದಲ್ಲಿ ನ್ಯಾಯಶಾಲಿಗಳಾದ ಜನರು ಮೊದಲನಿಂದ ಮಾಡುತ್ತ ಬಂದಿರುವದನ್ನೇ ನೀನು ಮಾಡು" ಎಂದು ಉತ್ತರ ಕೊಟ್ಟನು. ಆಗ ಯುಧಿಷ್ಠಿರನು ತಿರುಗಿ ಅರ್ಜುನನಿಗೆ—"ನೀನು ಅಸಂತೋಷ, ಮೋಹ, ಬಲ, ಅಹಂಕಾರ ಇತ್ಯಾದಿ ಪಾಪಗುಣಗಳ ಅಧೀನದಲ್ಲಿ ಸಿಕ್ಕಿರುವದರಿಂದ ನಿನಗೆ ರಾಜ್ಯದ ಬುಭುಕ್ಷೆಯು ವಿಶೇಷವುಂಟಾಗಿರುತ್ತದೆ. ಆದರೆ ಅದರಲ್ಲಿ ನಿನಗೆ ಏನೂ ಸುಖವಾಗಲಾರದು. ಜೀವನ್ಮುಕ್ತನಾದ ಜನಕನು ಮಿಥಿಲಾ ನಗರವು ಸುಟ್ಟದ್ದನ್ನು ನೋಡಿ ತನ್ನಲ್ಲಿ ಯತ್ಕಿಂಚಿತ್ತಾದರೂ ದ್ರವ್ಯವು ಇಲ್ಲದೆ ಇದ್ದಾಗ್ಯೂ ಆ ಇಲ್ಲದೆ ಇದ್ದ ದ್ರವ್ಯದಲ್ಲಿಯೇ ಅನಂತ ದ್ರವ್ಯವು ಇರುತ್ತದೆಂತಲೂ, ಮಿಥಿಲಾ ನಗರವು ಸುಡುತ್ತಿದ್ದಾಗ್ಯೂ ತನ್ನದು ಏನೂ ಸುಡುತ್ತಿರುವದಿಲ್ಲವೆಂತಲೂ ನುಡಿದದ್ದನ್ನು ನೀನು ಲಕ್ಷ್ಯಕ್ಕೆ ತೆಗೆದುಕೊಂಡು ಬಾ. ಆದುದರಿಂದ ನಾನು ನನ್ನ ಮನಸ್ಸನ್ನು ನನ್ನ ಆತ್ಮದ ಕಲ್ಯಾಣಕ್ಕಾಗಿ ಹಚ್ಚಿ, ನನ್ನ ಆಶೆ ಮೋಹಗಳನ್ನು ಯೋಗ್ಯ ಬಂಧನದಲ್ಲಿಟ್ಟು, ಕರ್ಮಪರಂಪರೆಯನ್ನು ಮಾಡುವೆನು. ಹಾಗೂ ನಿರಾತಂಕವಾಗಿ ಸುಖವನ್ನು ಪಡೆಯುವೆನು" ಎಂದು ಹೇಳಿದನು. ಭೀಮ, ದ್ರೌಪದಿ, ಅರ್ಜುನ ಈ ಮೂವರು ಧರ್ಮನಿಗೆ ಎಷ್ಟು ತಿಳಿಸಿ ಹೇಳಿದಾಗ್ಯೂ ವಿರಕ್ತಿ ಹೊಂದಿದ ಅವನ ಮನಸ್ಸು ರಾಜ್ಯದ ಕಡೆಗೆ ತಿರುಗಲಿಲ್ಲ. ಯುದ್ಧಕ್ಕಿಂತ ಮುಂಚೆ ಅರ್ಜುನನಿಗೆ ಯಾವ ಪ್ರಕಾರ ವೈರಾಗ್ಯವೃತ್ತಿಯು ಹುಟ್ಟಿತ್ತೋ ಅದೇ ಪ್ರಕಾರ ಯುಧಿಷ್ಠಿರನಿಗೆ ಯುದ್ಧದ ತರುವಾಯ ಹುಟ್ಟಿತು. ಇದನ್ನು ನೋಡಿ ಶ್ರೀ ಭಗವಾನ್ ವ್ಯಾಸರು ಅವನಿಗೆ—"ಧರ್ಮಾ, ನೀನು ಗೃಹಸ್ಥಾಶ್ರಮವನ್ನು ಬಿಟ್ಟು ಅರಣ್ಯಕ್ಕೆ ಹೋಗಲಿಕ್ಕೆ ಧರ್ಮಶಾಸ್ತ್ರದ ಪ್ರಕಾರ ಇನ್ನೂ ಯೋಗ್ಯನಾಗಿಲ್ಲ. ಯಜ್ಞ, ವಿದ್ಯೆ, ಉದ್ಯೋಗ, ಸಂಪತ್ತಿಯ ಬಗ್ಗೆ ಅಸಂತೋಷ, ಪ್ರಜಾಪಾಲನ ಮತ್ತು ದಂಡಧಾರಣ ಇವುಗಳು ರಾಜನ ಕರ್ತವ್ಯಗಳಿರುತ್ತವೆ. ಆದುದರಿಂದ ನೀನು ನಿನ್ನ ಬಂಧುಗಳನ್ನೊಡಗೊಂಡು ಧರ್ಮ-ಅರ್ಥ-ಕಾಮಗಳನ್ನು ಯಥಾಶಾಸ್ತ್ರವಾಗಿ ಉಪಭೋಗ ಮಾಡು. ನೀನು ಮುಂಚೆ ನಿನ್ನ ಕರ್ತವ್ಯವನ್ನು ಮಾಡು. ಆ ಬಳಿಕ ನೀನು ಅರಣ್ಯಕ್ಕೆ ಹೋಗು. ಮನುಷ್ಯನು ಧರ್ಮದಿಂದ ನಡೆಯುವಾಗ ಅವನಿಗೆ ಪ್ರಾಪ್ತವಾದ ಸುಖದುಃಖ

ಗಳನ್ನೂ, ಪ್ರಿಯ ಅಪ್ರಿಯ ಫಲಗಳನ್ನೂ ಧೈರ್ಯದಿಂದ ಅನುಭೋಗಿಸತಕ್ಕದ್ದು. ನಿನ್ನ ಅಪೇಕ್ಷೆಯಿಲ್ಲದೆ ನಿನಗೆ ಈ ಘೋರ ಕರ್ಮವನ್ನು ಮಾಡುವ ಪ್ರಸಂಗವು ಬಂದಿದ್ದರೆ ಅದಕ್ಕಾಗಿ ಸಂತಾಪ ಮಾಡಿಕೊಳ್ಳಬೇಡ. ನಿನಗೆ ಪೃಥ್ವಿಯ ರಾಜ್ಯವು ನಿನ್ನ ಪರಾಕ್ರಮದಿಂದ ದೊರಕಿರುತ್ತದೆ. ಅದನ್ನು ಶಾಸ್ತ್ರರೀತಿಯಿಂದ ಪಾಲನ ಮಾಡು. ಯಾವ ನಿನ್ನ ಮಾಂಡಲಿಕ ಅರಸರು ಸತ್ತಿರುತ್ತಾರೋ ಅವರ ಗಂಡುಮಕ್ಕಳನ್ನು ಸಮಾಧಾನಪಡಿಸಿ, ಅವರನ್ನು ಅವರ ಪಟ್ಟದ ಮೇಲೆ ಕೂಡ್ರಿಸು. ಗಂಡುಮಕ್ಕಳಿಲ್ಲದಲ್ಲಿ ಹೆಣ್ಣುಮಕ್ಕಳನ್ನು ಕೂಡ್ರಿಸು. ಈ ಪ್ರಕಾರ ನೀನು ಸರ್ವ ರಾಷ್ಟ್ರವನ್ನು ವ್ಯವಸ್ಥಿತವಾಗಿ ಮಾಡಿದ ಬಳಿಕ ಅಶ್ವಮೇಧ ಯಜ್ಞವನ್ನು ಮಾಡು. ಅಂದರೆ ನಿನ್ನ ಹಿಂಸೆಯಿಂದ ಉಂಟಾದ ಪಾಪಗಳು ನಾಶವಾಗುವವು" ಎಂದು ಹೇಳಿದರು. ಅದಕ್ಕೆ ಧರ್ಮರಾಜನು ಶ್ರೀ ವ್ಯಾಸರಿಗೆ—"ಮಹರ್ಷಿಗಳೇ! ರಾಜ್ಯ ಮತ್ತು ಧರ್ಮಾಚರಣ ಇವುಗಳ ನಡುವೆ ನಿತ್ಯದಲ್ಲಿ ವಿರೋಧವು ಬರುವದು. ಅಧರ್ಮದ ಹೊರತಾಗಿ ರಾಜ್ಯ ನಡೆಸುವದು ಶಕ್ಯವಿಲ್ಲ. ನಾನು ತಿರು ತಿರುಗಿ ವಿಚಾರ ಮಾಡಿದರೂ ಈ ನನ್ನ ಅಭಿಪ್ರಾಯವು ತಿರುಗಲೊಲ್ಲದು. ಆದುದರಿಂದ ಈ ನನ್ನ ಮೋಹವನ್ನು ದೂರ ಮಾಡಿರಿ" ಎಂದು ಬೇಡಿಕೊಂಡನು. ಅದಕ್ಕೆ ಶ್ರೀ ವ್ಯಾಸರು ಧರ್ಮರಾಜನಿಗೆ—"ನಿನ್ನ ವೃದ್ಧ ಪಿತಾಮಹನಾದ ಭೀಷ್ಮನು ರಾಜಧರ್ಮವನ್ನೂ, ಮೋಕ್ಷಧರ್ಮವನ್ನೂ ಚೆನ್ನಾಗಿ ಬಲ್ಲನು. ನಿನಗೆ ಈ ಧರ್ಮರಹಸ್ಯದ ಬಗ್ಗೆ ಏನಾದರೂ ಸಂಶಯವುಂಟಾಗಿದ್ದರೆ ನೀನು ಅವನಲ್ಲಿ ಹೋಗಿ ಕೇಳಿಕೋ" ಎಂದು ಹೇಳಿದರು. ಆಗ ಧರ್ಮರಾಜನು—"ನಾನು ನನ್ನ ವೃದ್ಧ ಪಿತಾಮಹನನ್ನು ಅಧರ್ಮದಿಂದ ಘಾತ ಮಾಡಿ ಅಂಥವನ ಕಡೆಯಿಂದ ಧರ್ಮವನ್ನು ಹೇಗೆ ಕೇಳಿಕೊಳ್ಳಲಿ?" ಎಂದು ಸಂಶಯ ತೆಗೆದುಕೊಂಡನು. ಅದಕ್ಕೆ ಶ್ರೀಕೃಷ್ಣನು ಧರ್ಮರಾಜನಿಗೆ—"ಧರ್ಮಾ, ನೀನು ಶೋಕವನ್ನು ಬಿಟ್ಟು ಭಗವಾನ್ ವ್ಯಾಸರು ಹೇಳಿದಂತೆ ಮಾಡಿ ನನ್ನನ್ನು ಮೊದಲ್ಗೊಂಡು ಯಾವತ್ತು ಮಿತ್ರರಿಗೂ ದ್ರೌಪದಿಗೂ ಆನಂದವನ್ನುಂಟು ಮಾಡಿ ಲೋಕಕಲ್ಯಾಣ ಮಾಡು" ಎಂದು ಹೇಳಿದನು. ಈ ಪ್ರಕಾರ ಶ್ರೀಕೃಷ್ಣನು ಹೇಳಿದ್ದನ್ನು ಕೇಳಿದ ಕೂಡಲೆ ಧರ್ಮರಾಜನು ರಾಜ್ಯವನ್ನು ಸ್ವೀಕಾರ ಮಾಡಲಿಕ್ಕೆ ಒಪ್ಪಿಕೊಂಡನು. ಆಗ ಪ್ರಜಾ

ಜನರು ಉತ್ಸಾಹದಿಂದ ತಮ್ಮ ನಗರವನ್ನು ಶೃಂಗರಿಸಿ ಧರ್ಮರಾಜನನ್ನು ಉತ್ಸವದಿಂದ ನಗರದೊಳಗೆ ಕರೆದುಕೊಂಡು ಬಂದರು. ಧೃತರಾಷ್ಟ್ರನು ಕುಳಿತಿದ್ದ ಪಲ್ಲಕ್ಕಿಯು ಆ ಮೆರವಣಿಗೆಯಲ್ಲಿ ಎಲ್ಲಕ್ಕೂ ಮುಂದೆ ಇತ್ತು. ಅದರ ಹಿಂದಿಂದೆ ಯುಧಿಷ್ಠಿರನು (ಧರ್ಮರಾಜನು) ಹದಿನಾರು ದೊಡ್ಡ ದೊಡ್ಡ ಬಿಳೀ ಎತ್ತುಗಳು ಹೂಡಿದಂಥ ಒಂದು ಹೊಸ ರಥದಲ್ಲಿ ಕುಳಿತಿದ್ದನು. ಭೀಮನು ಧರ್ಮರಾಜನ ಸಾರಥಿಯಾಗಿದ್ದನು. ಅರ್ಜುನನು ಅವನ ಮೇಲೆ ಶ್ವೇತಛತ್ರ (ಬಿಳೀಚತ್ತರಿಗೆ) ಹಿಡಿದಿದ್ದನು. ನಕುಲನು ಚೌರಿಯನ್ನೂ, ಸಹದೇವನು ಬೀಸಣಿಕೆಯನ್ನೂ ಬೀಸುತ್ತಿದ್ದರು. ಧರ್ಮರಾಜನ ರಥದ ಹಿಂದೆ ಶ್ರೀಕೃಷ್ಣನು ಸಾತ್ಯಕಿಯೊಡನೆ ಒಂದು ಸುವರ್ಣ ರಥದಲ್ಲಿ ಕುಳಿತಿದ್ದನು. ಶ್ರೀಕೃಷ್ಣನ ರಥದ ಹಿಂದೆ ಗಾಂಧಾರಿ, ಕುಂತಿ, ದ್ರೌಪದಿ ಮತ್ತು ಇತರ ಕುರುವಂಶದ ಸ್ತ್ರೀಯರು ಒಂದಕ್ಕಿಂತ ಇನ್ನೊಂದು ಹೆಚ್ಚಿಗೆ ಸುಂದರವಾದಂಥ ಬೇರೆ ಬೇರೆ ರಥಗಳಲ್ಲಿ ಕುಳಿತಿದ್ದರು. ಅವರ ಹಿಂದೆ ನೂರಾರು ಮಂದಿ ಸರದಾರರು ಆನೆಗಳ ಮೇಲೂ ಕುದುರೆಗಳ ಮೇಲೂ ಕುಳಿತಿದ್ದರು. ಮಾರ್ಗದಲ್ಲೆಲ್ಲ ಮಂಗಲಕರವಾದ್ಯಗಳು ಮೊಳಗಿದ್ದವು. ಹಾಗೂ ಮೇಲಿಂದ ಮೇಲೆ ಪ್ರಜಾಜನರು ಪ್ರಚಂಡವಾದ ಜಯಘೋಷವನ್ನು ಮಾಡುತ್ತಿದ್ದರು. ಈ ಪ್ರಕಾರ ಸಡಗರದಿಂದಲೂ ಉತ್ಸಾಹದಿಂದಲೂ ಹೊರಟ ಮೆರವಣಿಗೆಯು ಅರಮನೆಗೆ ಹೋಗಿ ಮುಟ್ಟಲಾಗಿ ಧೌಮ್ಯ ಋಷಿಗಳು ಧರ್ಮರಾಜನನ್ನೂ ದ್ರೌಪದಿಯನ್ನೂ ಒಂದು ಸುವರ್ಣಖಚಿತ ಸಿಂಹಾಸನದ ಮೇಲೆ ಕುಳ್ಳಿರಿಸಿ ಅವರಿಗೆ ಪೃಥ್ವಿಯ ಸಾಮ್ರಾಜ್ಯದ ಅಭಿಷೇಕವನ್ನು ಮಾಡಿದರು. ಆ ಬಳಿಕ ಧರ್ಮರಾಜನು ಭೀಮನನ್ನು ಯುವರಾಜನಾಗಿಯೂ, ಅರ್ಜುನನನ್ನು ಪರರಾಜ್ಯದ ಮತ್ತು ದುಷ್ಟನಿಗ್ರಹದ ಮಂತ್ರಿಯಾಗಿಯೂ, ನಕುಲನನ್ನು ಸೇನಾಧಿಪತಿಯಾಗಿಯೂ, ಸಹದೇವನನ್ನು ತನ್ನ ಸಮೀಪಸ್ಥ ಕಾರ್ಯನಿರ್ವಾಹಕನಾಗಿಯೂ ನೇಮಿಸಿಕೊಂಡು, ವಿದುರ, ಸಂಜಯ, ಕೃಪ ಮೊದಲಾದ ಜನರಿಗೆ ಅವರವರ ಯೋಗ್ಯತಾನುಸಾರವಾಗಿ ರಾಜ್ಯದಾಡಳಿತೆಯ ಉದ್ಯೋಗಗಳನ್ನು ಹಂಚಿಕೊಟ್ಟನು. ಈ ಪ್ರಕಾರ ವ್ಯವಸ್ಥೆಯನ್ನು ಮಾಡಿದ ಬಳಿಕ ಧರ್ಮರಾಜನು ಶ್ರೀಕೃಷ್ಣನನ್ನು ಕೂಡಿಕೊಂಡು ಶರಪಂಜರದ ಮೇಲೆ ಬಿದ್ದಿದ್ದ ಭೀಷ್ಮನ ಬಳಿಗೆ ಬಂದನು. ಆ ಭೀಷ್ಮನ ಸುತ್ತುಮುತ್ತಲು ಅನೇಕ ಮಂದಿ ಮುನಿಗಳು

ಕುಳಿತಿದ್ದರು. ಆಗ ಇವರೆಲ್ಲರು ಕೈಮುಗಿದುಕೊಂಡು ಭೀಷ್ಮನ ಹತ್ತರ ಹೋಗಿ ಅವನಿಗೆ ನಮಸ್ಕಾರ ಮಾಡಿ ಕುಳಿತ ಬಳಿಕ ಶ್ರೀಕೃಷ್ಣನು "ಭೀಷ್ಮಾ, ನೀನು ಯಾವಾಗಲು ಇರುವ ಮೇರೆಗೆ ಶಾಂತ ಮತ್ತು ಪ್ರಸನ್ನ ಮನಸ್ಸುಳ್ಳವನಾಗಿಯೂ, ಉಜ್ವಲವಾದ ಜ್ಞಾನವುಳ್ಳವನಾಗಿಯೂ ಇರುವಿಯಷ್ಟೇ. ನಿನ್ನಂಥವನನ್ನು ಈ ಜಗತ್ತಿನಲ್ಲಿ ನಾನು ಎಲ್ಲಿಯೂ ನೋಡಲಿಲ್ಲ ಅಥವಾ ಕೇಳಲಿಲ್ಲ. ಯುಧಿಷ್ಠಿರನು ತನ್ನ ಜ್ಞಾತಿಯ ಭಯಂಕರ ನಾಶದ ಬಗ್ಗೆ ಸಂತಪ್ತನಾಗಿ ನಿನ್ನ ಬಾಯಿಂದ ಚಾತುರ್ವರ್ಣ್ಯ ಮತ್ತು ಚಾತುರಾಶ್ರಮಗಳ ಧರ್ಮವನ್ನು ಕೇಳಿಕೊಳ್ಳುವ ಕುತೂಹಲದಿಂದ ಬಂದಿರುತ್ತಾನೆ. ನೀನು ಅವನಿಗೆ ದಯಮಾಡಿ ಧರ್ಮವನ್ನು ಉಪದೇಶಿಸಿ ಅವನ ಶೋಕವನ್ನು ಶಾಂತಪಡಿಸು" ಎಂದು ಹೇಳಿದನು. ಆಗ ಭೀಷ್ಮನು ಅವನಿಗೆ—"ಶ್ರೀಕೃಷ್ಣಾ, ನಿನ್ನ ಕೃಪೆಯಿಂದ ನಾನು ಸ್ವಸ್ಥನಾಗಿಯೂ, ಸುಖಿಯಾಗಿಯೂ ಇದ್ದೇನೆ. ನನ್ನ ಮನಸ್ಸು ಮತ್ತು ವಾಣಿಯು ದೃಢವಿರುತ್ತವೆ. ನನಗೆ ಯಾವತ್ತು ರಾಜಧರ್ಮ ಮತ್ತು ಮೋಕ್ಷಧರ್ಮಗಳು ಪ್ರತ್ಯಕ್ಷವಾಗಿರುತ್ತವೆ. ನೀನು ಯಾವತ್ತು ಧರ್ಮದ ಪ್ರವರ್ತಕನಾದ ಪ್ರತ್ಯಕ್ಷ ಶ್ರೀವಿಷ್ಣುವು ಇದ್ದು ಯಾವಾಗಲು ಧರ್ಮರಾಜನ ಹತ್ತರ ಇರುತ್ತೀ. ಹೀಗಿದ್ದು ಅವನು ಧರ್ಮವನ್ನು ಕೇಳಿಕೊಳ್ಳುವದಕ್ಕೆ ನನ್ನ ಬಳಿಗೆ ಬಂದಿರುವದು ಆಶ್ಚರ್ಯವಲ್ಲೇ? ನೀನು ಪರಬ್ರಹ್ಮನು, ಸೂರ್ಯನು, ಚಂದ್ರನು, ಸತ್ಯಸ್ವರೂಪಿಯು, ಧರ್ಮಸ್ವರೂಪಿ ಪರಮೇಶ್ವರನು, ಜೀವಸ್ವರೂಪಿ ಪರಮಾತ್ಮನು, ಜಾಗೃತ-ಸ್ವಪ್ನ-ಸುಷುಪ್ತಿ ಈ ಮೂರೂ ಅವಸ್ಥೆಗಳಲ್ಲಿರುವ ಆತ್ಮನು, ಮತ್ತು ಸರ್ವಜ್ಞಾನಿಯು ಇರುತ್ತೀ. ಹೇ ವಿಶ್ವಕರ್ಮಾ! ಹೇ ವಿಶ್ವಸಂಭವಾ! ಹೇ ಪಂಚಭೂತಾತ್ಮಕ ಸ್ವಾಮಿಯೇ! ನಿನಗೆ ನನ್ನ ನಮಸ್ಕಾರಗಳು. ನಾನು ಈ ನನ್ನ ವಾಕ್‌ರೂಪೀ ಯಜ್ಞದಿಂದ ನಿನ್ನ ಆರಾಧನೆಯನ್ನು ಮಾಡುತ್ತೇನೆ. ಪ್ರಸನ್ನನಾಗು" ಎಂದು ಶ್ರೀಕೃಷ್ಣನ ಸ್ತವನ ಮಾಡಿದನು. ಇದನ್ನು ಕೇಳಿ ಶ್ರೀಕೃಷ್ಣನು ಸದ್ಗದಿತನಾಗಿ—"ಭೀಷ್ಮಾ, ನಾನು ನಿನ್ನ ಮೇಲೆ ಸಂತುಷ್ಟನಾಗಿರುತ್ತೇನೆ. ನೀನು ಸದ್ಗತಿಗೆ ಹೋಗುವಿಯೆಂಬದರಲ್ಲಿ ತಿಲಮಾತ್ರವಾದರೂ ಸಂಶಯವಿಲ್ಲ. ನೀನೇ ಯುಧಿಷ್ಠಿರನಿಗೆ ರಾಜಧರ್ಮವನ್ನೂ ಮೋಕ್ಷಧರ್ಮವನ್ನೂ ಉಪದೇಶಿಸು. ಗುರುಸ್ಥಾನದಲ್ಲಿರುವ ಈ ರಾಜ

ನಿಗೆ ಉಪದೇಶ ಮಾಡುವ ಅಧಿಕಾರವು ನನಗಿರುವದಿಲ್ಲ. ನಿನ್ನ ಬಾಯಿಂದ ಬರುವ ಉಪದೇಶಾಮೃತವು ಈ ಜಗತ್ತಿನಲ್ಲಿ ಶ್ರುತಿಶಾಸ್ತ್ರದಂತೆ ಆದರಣೀಯು ವಾಗುವದು" ಎಂದು ಹೇಳಿದನು. ಆಗ ಭೀಷ್ಮನು ಆ ಪ್ರಕಾರ ಹೇಳಲಿಕ್ಕೆ ಒಪ್ಪಿ ಕೊಂಡು ಧರ್ಮರಾಜನಿಗೆ ಅವನ ಸಂಶಯಗಳನ್ನು ಕೇಳಿಕೊಳ್ಳಲಿಕ್ಕೆ ತಿಳಿಸಿ ದನು. ಆಗ ಧರ್ಮರಾಜನು ಅವನ ಮುಂದೆ ಸಂಶಯಗಳನ್ನು ಕೇಳಿಕೊಳ್ಳಲು ಭೀಷ್ಮನು ಅವನಿಗೆ ರಾಜಧರ್ಮವನ್ನೂ, ಮೋಕ್ಷಧರ್ಮವನ್ನೂ ಕುರಿತು ಸಾಗ್ರ ವಾಗಿ ಉಪದೇಶ ಮಾಡಿದನು. ಆ ಉಪದೇಶವನ್ನು ಕೇಳಿ ಯಾವತ್ತು ಋಷಿಗ ಳೂ ಪ್ರೇಕ್ಷಕರೂ ರೋಮಾಂಚಿತರಾದರು. ಭೀಷ್ಮನು ಕೊನೆಯಲ್ಲಿ ಧರ್ಮರಾ ಜನಿಗೆ ಹೀಗೆ ಹೇಳಿದನು:—"ಯುಧಿಷ್ಠಿರಾ, ನೀನು ಹಸ್ತಿನಾಪುರಕ್ಕೆ ಹೋಗಿ ನಿನಗೆ ಪ್ರಾಪ್ತವಾಗಿರುವ ಪೃಥ್ವಿಯ ರಾಜ್ಯವನ್ನು ನಡೆಸು. ಹಾಗೂ ಬೇರೆ ಬೇರೆ ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಪಿತೃಗಳ ಮತ್ತು ದೇವತೆಗಳ ಋಣವನ್ನು ತೀರಿಸು. ಪ್ರಜೆಗಳನ್ನು ಎಲ್ಲ ರೀತಿಯಿಂದ ರಂಜನ ಮಾಡಿ ಪ್ರಕೃ ತಿಗಳಿಗೂ ಸುಹೃದಯರಿಗೂ ನಿನ್ನ ದಾನದಿಂದಲೂ ಉದಾತ್ತವಾದ ವರ್ತನದಿಂ ದಲೂ ಸಂತುಷ್ಟಪಡಿಸು" ಎಂದು ಹೇಳಿದನು. ಈ ಪ್ರಕಾರ ಭೀಷ್ಮನು ಆಜ್ಞೆ ಯನ್ನು ಮಾಡಿದ ಮೇಲೆ ಧರ್ಮರಾಜನು ಶ್ರೀಕೃಷ್ಣನೇ ಮೊದಲಾದವರನ್ನು ಕೂಡಿಕೊಂಡು ಹಸ್ತಿನಾಪುರಕ್ಕೆ ತಿರುಗಿ ಬಂದನು. ಆ ಬಳಿಕ ಧರ್ಮರಾಜನು ಶ್ರೀಕೃಷ್ಣನಿಗೆ ಅತ್ಯಂತ ಪ್ರೇಮದಿಂದ ದ್ವಾರಕೆಗೆ ಹೋಗಲಿಕ್ಕೆ ನಿರೂಪ ವನ್ನು ಕೊಟ್ಟನು. ಈ ನಿರೂಪವನ್ನು ಕೊಡುವ ಕಾಲಕ್ಕೆ ಧರ್ಮರಾಜನು ಶ್ರೀಕೃಷ್ಣನಿಗೆ—"ಗೋವಿಂದಾ! ನಿನ್ನ ಕೃಪೆಯಿಂದ ಈ ಪೃಥ್ವಿಯು ನಮಗೆ ದೊರಕಿರುವದು. ಇದರಲ್ಲಿ ನಿನಗೆ ಬೇಕಾದ ರತ್ನಗಳನ್ನು ತೆಗೆದುಕೊಂಡು ಹೋಗು" ಎಂದು ಹೇಳಿದನು. ಅದಕ್ಕೆ ಶ್ರೀಕೃಷ್ಣನು ಅವನಿಗೆ—"ನನಗೆ ರತ್ನಗಳನ್ನು ತೆಗೆದುಕೊಂಡು ಏನು ಮಾಡತಕ್ಕದ್ದದೆ? ನನ್ನಲ್ಲಿರುವ ರತ್ನಗಳು ಸಹ ನಿನ್ನವೇ ಇರುತ್ತವೆ" ಎಂದು ಹೇಳಿ ಎಲ್ಲ ಪಾಂಡವರದೂ ಕುಂತಿಯದೂ ನಿರೂಪವನ್ನು ತೆಗೆದುಕೊಂಡು ಅಶ್ವಮೇಧ ಯಜ್ಞ ಸಮಾರಂಭಕ್ಕಾಗಿ ಬೇಗನೆ ಬರುತ್ತೇನೆಂದು ವಚನವನ್ನು ಕೊಟ್ಟು ದ್ವಾರಕೆಗೆ ಹೊರಟು ಬಂದನು.

ಈ ಪ್ರಕಾರ ಶ್ರೀಕೃಷ್ಣನು ದ್ವಾರಕೆಗೆ ತಿರುಗಿ ಬಂದ ಬಳಿಕ ಯಾದವರು

ಅನಿರುದ್ಧನ ಮದುವೆಗಾಗಿ ಭೋಜಕಟ ನಗರಕ್ಕೆ ಹೋದರು. ಶ್ರೀಕೃಷ್ಣನ ಹೆಂಡತಿಯಾದ ರುಕ್ಮಿಣಿಯು ಆಗ್ರಹದ ಮೇಲಿಂದ ಅವಳ ಮೊಮ್ಮಗನಾದ ಅನಿರುದ್ಧನಿಗೆ ( ಪ್ರದ್ಯುಮ್ನನ ಮಗನಿಗೆ ) ಅವಳ ಅಣ್ಣನಾದ ರುಕ್ಮಿಯ ಮೊಮ್ಮಗಳನ್ನು ( ರೋಚನಾ ಎಂಬವಳನ್ನು ) ಮದುವೆ ಮಾಡಿಕೊಡುವದು ಗೊತ್ತಾಗಿತ್ತು. ರುಕ್ಮಿಯು ಶ್ರೀಕೃಷ್ಣನ ಕಡುವೈರಿಯಾಗಿದ್ದರೂ ತನ್ನ ಅಕ್ಕನಾದ ರುಕ್ಮಿಣಿಯನ್ನು ಸಂತೋಷಪಡಿಸುವ ಸಲುವಾಗಿ ಹಿಂದಕ್ಕೆ ತನ್ನ ಮಗಳನ್ನು ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನಿಗೆ ಕೊಟ್ಟಿದ್ದನು. ಈಗಾದರೂ ಅದೇ ಪರಂಪರೆಯ ಪ್ರಕಾರ ಶರೀರ ಸಂಬಂಧವು ಗೊತ್ತಾಗಿತ್ತು. ಭೋಜಕಟನಗರದಲ್ಲಿ ಅನಿರುದ್ಧನ ಮದುವೆಯು ವಿಜೃಂಭಣೆಯಿಂದ ಯಥಾಸಾಂಗವಾಯಿತು. ಮದುವೆಯಾದ ಬಳಿಕ ಎಲ್ಲ ಬೀಗರು ಕ್ಷತ್ರಿಯ ಸಾಂಪ್ರದಾಯಕ್ಕನುಸರಿಸಿ ದ್ಯೂತವನ್ನು ಆಡಲಿಕ್ಕೆ ಕುಳಿತರು: ಈ ದ್ಯೂತವನ್ನು ಆಡುತ್ತ ಆಡುತ್ತ ರುಕ್ಮಿಯ ಮನಸ್ಸಿನೊಳಗೆ ದುರ್ಯೋಧನನು ಪಾಂಡವರ ಯಾವತ್ತು ಸಂಪತ್ತನ್ನು ದ್ಯೂತದಲ್ಲಿ ಹರಣ ಮಾಡಿದಂತೆ ತಾನೂ ಯಾದವರ ಯಾವತ್ತು ಸಂಪತ್ತನ್ನು ಹರಣ ಮಾಡಬೇಕೆಂಬ ದುಷ್ಟ ವಿಚಾರವು ಬಂದಿತು. ಬಲರಾಮನು ಈ ದ್ಯೂತದಲ್ಲಿ ಪ್ರತಿಯೊಂದು ಸಾರೆ ಸೋತನು. ಆಗ ಅಲ್ಲಿ ಆಟ ನೋಡಲಿಕ್ಕೆ ಕುಳಿತಿದ್ದ ಕಳಿಂಗ ರಾಜನು ನಕ್ಕನು. ಬಲರಾಮನು ದ್ಯೂತವಾಡಲಿಕ್ಕೆ ಕುಳಿತುಕೊಳ್ಳಲು ಅವನ ಮೈಯಲ್ಲಿ ಭೂತಸಂಚಾರವಾದಂತೆ ಆಗಿ ಅವನು ಆವೇಶದಿಂದ ಒಂದು ಸರತಿಗೆ ನೂರು, ಸಾವಿರ, ಹತ್ತುಸಾವಿರ, ಲಕ್ಷ, ಹತ್ತು ಲಕ್ಷ, ಕೋಟಿ ಈ ಪ್ರಕಾರ ಮುದ್ರಿಕೆಗಳನ್ನು ಜಿದ್ದು ಹಚ್ಚಿದನು. ಆದರೆ ಒಂದು ಸಾರೆಯೂ ಅವನು ಗೆದೆಯಲಿಲ್ಲ. ಕಡೆಗೆ ಅವನು ಸಿಟ್ಟಿನಿಂದ ಹತ್ತು ಕೋಟಿ ಮುದ್ರಿಕೆಗಳನ್ನು ಹಚ್ಚಿದನು. ಆದರಲ್ಲಿ ಮಾತ್ರ ಅವನು ಗೆದ್ದನು. ಆದರೆ ರುಕ್ಮಿಯು ಕಪಟದಿಂದ—“ ನಾನು ಗೆದ್ದೆನು. ಬೇಕಾದರೆ ಇಲ್ಲಿ ಕೂತವರನ್ನು ಕೇಳು ” ಎಂದು ಕೂಗಿ ಹೇಳಿದನು. ಅದಕ್ಕೆ ಅವನ ಸಹಾಯಕನಾದ ಕಳಿಂಗನು ನಕ್ಕು— “ ರುಕ್ಮಿಯು ಗೆದ್ದನು ” ಎಂದು ಹೇಳಿದನು. ರುಕ್ಮಿಯು ಮೊದಲಿನಿಂದಲೂ ಗರ್ವಿಷ್ಠನಿದ್ದನು. ಅವನು ಈ ಕಡೇ ದ್ಯೂತದಲ್ಲಿ ಯಾರು ಗೆದ್ದರೆಂಬ ಮಾತಿನ ವಾದವು ಹೊರಟಾಗ್ಗೆ – “ ನೀವು ಯಾದವರು ಹೇಳಿ ಕೇಳಿ ದನಗಾವಿಗಳು.

ನಿಮಗೆ ಲೆತ್ತ ಆಡುವದರಲ್ಲಿ ಏನು ತಿಳಿಯುತ್ತದೆ? ಕ್ಷತ್ರಿಯ ರಾಜರೇ ಮಾತ್ರ ಈ ಆಟವನ್ನು ಆಡಬಲ್ಲರು" ಎಂದು ಯಾದವರನ್ನು ಮನಸೋಕ್ತವಾಗಿ ನಿಂದಿಸಿದನು. ಆಗ ಬಲರಾಮನು ಬಹು ಸಿಟ್ಟಿಗೆದ್ದು ತನ್ನ ಹತ್ತರ ಆಟದ ಸಲುವಾಗಿ ಬಂಗಾರವನ್ನು ತುಂಬಿಟ್ಟಂಥ ಹಸ್ತಿದಂತಿಯ ಮಣಿಯನ್ನು ಎತ್ತಿ ಅದರಿಂದ ರುಕ್ಮಿಯ ತಲೆಗೆ ಹೊಡೆದನು. ಆ ಕೂಡಲೆ ರುಕ್ಮಿಯ ಪ್ರಾಣವು ಹೋಯಿತು. ಅದನ್ನು ನೋಡಿ ಕಳಿಂಗನು ಓಡಿ ಹೋಗಹತ್ತಿದನು. ಬಲರಾಮನು ಅವನ ಬೆನ್ನುಹತ್ತಿ ಹೋಗಿ ಅವನನ್ನು ಹಿಡಿದು ಅವನ ಹಲ್ಲು ಕೆಡವಿದನು. ಪಾಂಡವ ಕೌರವರ ನಡುವೆ ನಡೆದ ದ್ಯೂತದ ಕಾಲಕ್ಕೆ ಆ ದ್ಯೂತದಲ್ಲಿ ಗೆದ್ದಂಥ ದುರ್ಯೋಧನನು ಅದರಲ್ಲಿ ಸೋತಂಥ ಯುಧಿಷ್ಠಿರನ ದುರ್ದಶೆಯನ್ನು ಮಾಡಿದನು. ಆದರೆ ಈಗ ಯಾದವ ಭೋಜರ ನಡುವೆ ನಡೆದ ದ್ಯೂತದ ಕಾಲಕ್ಕೆ ಈ ದ್ಯೂತದಲ್ಲಿ ಸೋತಂಥ ಬಲರಾಮನು ತನ್ನನ್ನು ಗೆದ್ದಂಥ ರುಕ್ಮಿಯ ದುರ್ದಶೆಯನ್ನು ಮಾಡಿದನು. ಈ ಪ್ರಕಾರ ಅನ್ಯಾಯದಿಂದ ಯಾದವರು ತನ್ನ ಅಣ್ಣನನ್ನು ಕೊಂದದ್ದನ್ನು ನೋಡಿ ರುಕ್ಮಿಣಿಯು ತನ್ನ ಅಣ್ಣನ ಮರಣದ ಬಗ್ಗೆ ಬಹಳ ಶೋಕ ಮಾಡಹತ್ತಿದಳು. ಆದರೆ ಶ್ರೀಕೃಷ್ಣನು ಈ ಬಗ್ಗೆ ಬಾಯಿಂದ ಒಂದು ಶಬ್ದ ಸಹ ಮಾತಾಡಲಿಲ್ಲ. ದುಷ್ಟ ಅರಸರಲ್ಲಿ ರುಕ್ಮಿಯೊಬ್ಬನು ಮಾತ್ರ ಜೀವಂತ ಉಳಿದಿದ್ದನು. ಅವನ ಅಂತ್ಯವು ಈ ಪ್ರಕಾರ ಎರಡನೆಯವರ ಕೈಯಿಂದ ಆದದ್ದನ್ನು ನೋಡಿ ಶ್ರೀಕೃಷ್ಣನಿಗೆ ಸಮಾಧಾನವಾಯಿತು. ಆ ಮೇಲೆ ಯಾದವರು ತತ್ಕಾಲವೇ ಅನಿರುದ್ಧನನ್ನೂ, ಅವನ ನವವಧುವಾದ ರೋಚನೆಯನ್ನೂ ಕರಕೊಂಡು ದ್ವಾರಕೆಗೆ ಹೊರಟು ಬಂದರು.

ಸ್ವಲ್ಪ ದಿವಸಗಳಲ್ಲಿಯೇ ಶ್ರೀಕೃಷ್ಣನು ಯಾವತ್ತು ಯಾದವರನ್ನು ಕೂಡಿಕೊಂಡು ಯುಧಿಷ್ಠಿರನ ಅಶ್ವಮೇಧ ಯಜ್ಞಸಮಾರಂಭಕ್ಕಾಗಿ ಹಸ್ತಿನಾಪುರಕ್ಕೆ ತಿರುಗಿ ಬಂದನು. ಐದೂ ಮಂದಿ ಪಾಂಡವರು ಶ್ರೀವ್ಯಾಸ ಮಹರ್ಷಿಗಳ ಸೂಚನೆಯ ಪ್ರಕಾರ ದ್ರವ್ಯಸಂಪಾದನ ಮಾಡುವದಕ್ಕಾಗಿ ಹಿಮಾಲಯಕ್ಕೆ ಹೋದವರು ಇನ್ನು ತಿರುಗಿ ಬಂದಿದ್ದಿಲ್ಲ. ಈ ಪ್ರಕಾರ ಪಾಂಡವರು ಹಸ್ತಿನಾಪುರದಲ್ಲಿ ಇಲ್ಲದಾಗ್ಗೆ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಬಂದ ಬಳಿಕ ಅಭಿಮನ್ಯುವಿನ ಬಸರು ಹೆಂಡತಿಯಾದ ಉತ್ತರೆಯು ಹಡೆದಳು. ಆದರೆ ಭಾರತ ಯುದ್ಧ

ದಲ್ಲಿ ಅಶ್ವತ್ಥಾಮನು ಉತ್ತರೆಯ ಗರ್ಭದ ಮೇಲೆ ಬ್ರಹ್ಮಾಸ್ತ್ರವನ್ನು ಒಗೆದ ದ್ದರಿಂದ ಉತ್ತರೆಯ ಕೂಸು ಗರ್ಭದಲ್ಲಿಯೇ ಸತ್ತು ಹೋಗಿತ್ತು. ಇದು ಕುರು ಸಂತತಿಯಲ್ಲಿ ಹುಟ್ಟಿದ ಕಡೆಯ ಕೂಸು ಇದ್ದು ಈ ಪ್ರಕಾರ ಗರ್ಭದಲ್ಲಿ ಯೇ ಸತ್ತ ಕಾರಣ ಎಲ್ಲ ಕುರು ಸ್ತ್ರೀಯರು ಬಹಳ ಹೊಡಕೊಂಡು ಬಡ ಕೊಂಡು ಆಕ್ರೋಶ ಮಾಡಲಿಕ್ಕೆ ಹತ್ತಿದರು. ಆಗ ಮುದುಕಿಯಾದ ಕುಂತಿ ಯು ಶ್ರೀಕೃಷ್ಣನ ಕಡೆಗೆ ಲಗಬಗೆಯಿಂದ ಹೋಗಿ—“ ಶ್ರೀಕೃಷ್ಣಾ, ನಿನ್ನ ಮೊಮ್ಮಗನು ಹುಟ್ಟಿದ ಕೂಡಲೆ ಸತ್ತನು. ಇನ್ನು ಕುರುವಂಶವು ನಡೆಯುವ ಆಶೆಯು ಕಡಿದು ಹೋಯಿತು ” ಎಂದು ಬಹಳ ದೀನ ಸ್ವರದಿಂದ ಆಕ್ರೋಶ ಮಾಡಹತ್ತಿದಳು. ಕುಂತಿಯು ಹಿಂದಿನಿಂದ ದ್ರೌಪದಿಯೂ ಸುಭದ್ರೆಯೂ ಸಹ ಅಳುತ್ತ ಅಲ್ಲಿಗೆ ಬಂದರು. ಆ ಎಲ್ಲ ಸ್ತ್ರೀಯರು ಶ್ರೀಕೃಷ್ಣನ ಕಾಲುಗಳ ನ್ನು ಗಟ್ಟಿಯಾಗಿ ಹಿಡಿದುಕೊಂಡು—“ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ನಿನ್ನ ಮೊಮ್ಮಗನು ಸತ್ತಿರುತ್ತಾನೆ. ದಯಮಾಡಿ ಅವನನ್ನು ನೋಡು ಮತ್ತು ನಿನ್ನ ಕೃಪಾದೃಷ್ಟಿಯಿಂದ ಬದುಕಿಸು ” ಎಂದು ಬೇಡಿಕೊಂಡರು. ಆಗ ಶ್ರೀಕೃಷ್ಣನಿಗೆ ದಯವು ಹುಟ್ಟಿ ಅವನು ಎದ್ದು ಬಾಣಂತಿಯ ಕೋಣೆಗೆ (ಸೂತಿ ಕಾಗೃಹಕ್ಕೆ) ಬಂದನು. ಆ ಕೂಡಲೆ ಉತ್ತರೆಯು ದ್ರೌಪದಿಯ ಹೇಳಿಕೆಯ ಪ್ರಕಾರ ತ್ವರೆಯಿಂದ ಎದ್ದು ಶ್ರೀಕೃಷ್ಣನಿಗೆ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿ “ ಪುಂಡರೀಕಾಕ್ಷಾ, ನನ್ನ ಮತ್ತು ಅಭಿಮನ್ಯುವಿನ ನಾಶವು ಪೂರ್ಣ ವಾಗಿ ಆಯಿತು. ನನ್ನ ಸಕಲ ಆಶೆಯು ಇವತ್ತಿನ ದಿವಸ ನಷ್ಟವಾಯಿತು ” ಎಂದು ಹೇಳುತ್ತ ಮೂರ್ಛೆ ಬಂದು ನೆಲದ ಮೇಲೆ ಧುಪ್ಪನೆ ಬಿದ್ದಳು. ಆಗ ಆ ಸೂತಿಕಾ ಗೃಹದಲ್ಲಿ ಎಲ್ಲ ಸ್ತ್ರೀಯರು ಪುನಃ ಅಳುವ ರಂಬಾಟವನ್ನು ನಡೆಸಿ ದರು. ಒಂದು ಕ್ಷಣದಲ್ಲಿ ಉತ್ತರೆಯು ಎಚ್ಚರಿಕೆಯ ಮೇಲೆ ಬಂದು-“ ಬಾಲಕಾ, ನೀನು ನಿನ್ನ ಮಧುರಹಾಸ್ಯದಿಂದ ಭಗವಂತನ ಆತಿಥ್ಯವನ್ನು ಮಾಡುವದಿಲ್ಲೇ ನು? ನನ್ನ ಪತಿಪುತ್ರರಿಬ್ಬರೂ ಸತ್ತದ್ದರಿಂದ ನಾನು ಅನಾಥಳಾದೆನು. ಇನ್ನು ನಾನು ಜೀವ ಇಡುವದಿಲ್ಲ ” ಎಂದು ಬಹಳ ಪ್ರಲಾಪ ಮಾಡಹತ್ತಿದಳು. ಆಗ ಶ್ರೀಕೃಷ್ಣನು ಆ ಕೂಸನ್ನು ತನ್ನ ತೊಡೆಯ ಮೇಲೆ ತಕ್ಕೊಂಡು “ ನಾನು ಇವತ್ತಿನ ತನಕ ಚೇಷ್ಟೆಯಲ್ಲಿ ಸಹ ಅಸತ್ಯ ಭಾಷಣವನ್ನು ಮಾಡದೆ ಇದ್ದಲ್ಲಿ

ಮತ್ತು ಯುದ್ಧದೊಳಗೆ ಎಂದೂ ಹಿಂದಿರುಗಿ ಬಾರದೆ ಇದ್ದಲ್ಲಿ ಹಾಗೂ ಧರ್ಮದಿಂದ ವರ್ತಿಸಿ ಧರ್ಮದ ಆಧಾರಿಗಳಾದ ಬ್ರಾಹ್ಮಣರಿಗೆ ಪ್ರಿಯನಾಗಿ ನಡೆದಿದ್ದಲ್ಲಿ ಮತ್ತು ನಾನು ವಿಜಯ ಹೊಂದಿದಾಗ್ಯೂ ಎರಡನೆಯವರ ಕೂಡ ವೈರಭಾವವನ್ನು ಮಾಡದೆ ಇದ್ದಲ್ಲಿ, ಈ ಸತ್ತ ಬಾಲಕನು ತಿರುಗಿ ಜೀವಂತ ನಾಗಲಿ ! " ಎಂದು ಪ್ರತಿಜ್ಞೆಯ ಮೇಲೆ ನುಡಿದನು. ಇಷ್ಟರಲ್ಲಿ ಆ ಕೂಸು ಜೀವಂತವಾಗಿ ಚಿಕ್ಕ ಸ್ವರದಿಂದ ಅಳಲಾರಂಭಿಸಿತು. ಇದನ್ನು ನೋಡಿ ಯಾವತ್ತು ಕುರುಸ್ತ್ರೀಯರು ಆನಂದಪಟ್ಟು ಶ್ರೀಕೃಷ್ಣನಿಗೆ ಧನ್ಯವಾದಗಳನ್ನು ಸಮರ್ಪಿಸಿದರು.

ಒಂದು ತಿಂಗಳದ ತರುವಾಯ ಪಾಂಡವರು ಹಿಮಾಲಯದಿಂದ ಅನಂತ ದ್ರವ್ಯವನ್ನು ತೆಗೆದುಕೊಂಡು ಬಂದರು. ಆ ಬಳಿಕ ಧರ್ಮರಾಜನು ಶ್ರೀಕೃಷ್ಣನ ಅಜ್ಞೆಯ ಮೇರೆಗೆ ಅಶ್ವಮೇಧ ಯಜ್ಞವನ್ನು ನಿಶ್ಚಯಗೊಳಿಸಿ ಅದನ್ನು ಸಾಂಗ ಮಾಡಲಿಕ್ಕೆ ಶ್ರೀ ವ್ಯಾಸಮಹರ್ಷಿಗಳನ್ನೂ, ಅನೇಕ ಮಂದಿ ವಿದ್ವಾನ್ ಬ್ರಾಹ್ಮಣರನ್ನೂ ಕರೆಸಿದನು. ಅವರು ಚೈತ್ರ ಪೌರ್ಣಿಮೆಯ ದಿವಸ ಧರ್ಮರಾಜನಿಗೂ ದ್ರೌಪದಿಗೂ ಯಜ್ಞದೀಕ್ಷೆಯನ್ನು ಮಾಡಿ ಅರ್ಜುನನ ಸಂರಕ್ಷಣದ ಕೆಳಗೆ ಯಜ್ಞದ ಅಶ್ವವನ್ನು ಬಿಟ್ಟರು. ಆ ಮೇಲೆ ಆ ಕುದುರೆಯು ಬೇರೆ ಬೇರೆ ದೇಶಗಳಲ್ಲಿ ಅಡ್ಡಾಡಿ ಒಂದು ವರ್ಷದೊಳಗಾಗಿ ಬಂತು. ಅರ್ಜುನನು ಎಲ್ಲ ರಾಜರನ್ನು ಸಮಾಧಾನದಿಂದ ಒಡಂಬಡಿಸಿ ಅಥವಾ ಪರಾಕ್ರಮದಿಂದ ಗೆದ್ದು ತಿರುಗಿ ಬಂದನು. ಆ ಮೇಲೆ ಯಜ್ಞ ಕಾರ್ಯವು ಶ್ರೀ ವ್ಯಾಸಮಹರ್ಷಿಗಳಿಂದ ನಡೆಸಲ್ಪಟ್ಟ ತರುವಾಯ ಧರ್ಮರಾಜನು (ಯುಧಿಷ್ಠಿರನು) ಶ್ರೀ ವ್ಯಾಸರಿಗೆ-" ಅರ್ಜುನನು ಗೆದ್ದಂಥ ಇಡೀ ಪೃಥ್ವಿಯನ್ನು ನಿಮಗೂ, ಯಾವತ್ತು ಋತ್ವಿಜರಿಗೂ ದಕ್ಷಿಣೆಯಾಗಿ ಕೊಡುತ್ತೇನೆ. ನೀವು ಅದನ್ನು ನಿಮ್ಮೊಳಗೆ ಹಂಚಿಕೊಳ್ಳಿರಿ. ನಾನು ನನ್ನ ಬಂಧುಗಳನ್ನೂ ದ್ರೌಪದಿಯನ್ನೂ ಕೂಡಿಕೊಂಡು ಅರಣ್ಯಕ್ಕೆ ಹೋಗುತ್ತೇನೆ" ಎಂದು ಹೇಳಿದನು. ಅದಕ್ಕೆ ಅವನ ನಾಲ್ಕು ಮಂದಿ ಬಂಧುಗಳು ದ್ರೌಪದಿಯೂ " ಒಪ್ಪಿಗೆ " " ಒಪ್ಪಿಗೆ " ಎಂದು ಹೇಳಿದರು. ಆ ಮೇಲೆ ಶ್ರೀ ವ್ಯಾಸರು--" ಧರ್ಮಾ, ನಮಗೆ ದಾನ ಕೊಟ್ಟ ಪೃಥ್ವಿಯನ್ನು ನಾವು ನಿನಗೆ ತಿರುಗಿ ಕೊಡುತ್ತೇವೆ. ನಮಗೆ ಧನವನ್ನು ಮಾತ್ರ ಕೊ

ಷು ” ಎಂದು ಹೇಳಿದನು. ಆದರಂತೆ ಧರ್ಮರಾಜನು ಶ್ರೀಕೃಷ್ಣನ ಸೂಚನೆ
ಯ ಮೇರೆಗೆ ಅವರೆಲ್ಲರಿಗೆ ಕೋಟಿ ಕೋಟಿ ಮುದ್ರಿಕೆಗಳನ್ನು ಕೊಟ್ಟನು.
ಶ್ರೀ ವ್ಯಾಸರು ತಮಗೆ ದೊರಕಿದ ಕೋಟಿ ಮುದ್ರಿಕೆಗಳನ್ನು ಕುಂತಿಗೆ ಕೊ
ಟ್ಟರು. ಅವಳು ಅದನ್ನು ತೆಗೆದುಕೊಂಡು ಬಡವರಾದ ಯಾಚಕರಿಗೆ ದಾನ
ಧರ್ಮ ಮಾಡಿದಳು.

ಈ ಪ್ರಕಾರ ಈ ಅಶ್ವಮೇಧ ಯಜ್ಞ ಸಮಾರಂಭವು ಮುಗಿದ ಬಳಿಕ
ಶ್ರೀಕೃಷ್ಣನು ದ್ವಾರಕೆಗೆ ಬಂದು ತನ್ನ ಮುಂದಿನ ಆಯುಷ್ಯವನ್ನು ಬಹ್ವಂಶ
ದಿಂದ ಅಲ್ಲಿಯೇ ಕಳೆದನು. ಈ ಅವಧಿಯಲ್ಲಿ ಅವನು ಯಾವಾಗಲು ಜಿಜ್ಞಾ
ಸುಗಳಿಗೆ ಉಪದೇಶ ಮಾಡುವದನ್ನೂ, ಗೋಬ್ರಾಹ್ಮಣರ ಪಾಲನ ಪೋ
ಷಣ ಮಾಡುವದನ್ನೂ ಮಾಡುತ್ತಿದ್ದನು. ಅವನ ಕಡೆಗೆ ಜ್ಞಾನದ ಸಲುವಾಗಿ
ಅಥವಾ ದ್ರವ್ಯದ ಸಲುವಾಗಿ ಸತ್ಪಾತ್ರರಾದ ಯಾಚಕರು ಬಂದರೆ ಅವನು
ಅವರ ಕಾಮನೆಯನ್ನು ಪೂರ್ಣ ಮಾಡದೆ ಅವರನ್ನು ಎಂದಿಗೂ ತಿರುಗಿ ಕಳಿ
ಸುತ್ತಿದ್ದಿಲ್ಲ. ಇಂಥ ಸತ್ಪಾತ್ರರಾದ ಯಾಚಕರಲ್ಲಿ ಸುದಾಮನು ಒಬ್ಬನಾಗಿ
ದ್ದನು. ಶ್ರೀಕೃಷ್ಣನು ಉಜ್ಜನಿಯಲ್ಲಿ ತನ್ನ ಗುರುವಾದ ಸಾಂದಿಪನಿಯೆಂಬ
ವನಲ್ಲಿ ವೇದಭ್ಯಾಸ ಮಾಡುತ್ತಿದ್ದಾಗ್ಗೆ ಸುದಾಮನಾದರೂ ಅದೇ ಗುರುವಿನ
ಬಳಿಯಲ್ಲಿ ಅಭ್ಯಾಸ ಮಾಡುತ್ತಿದ್ದನು. ಆ ಕಾಲಕ್ಕೆ ಅವರಿಬ್ಬರೂ ಅತ್ಯಂತ
ಪ್ರೀತಿಯಿಂದಲೂ ಸ್ನೇಹದಿಂದಲೂ ಇರುತ್ತಿದ್ದರು. ಸುದಾಮನು ತನ್ನ ಗುರು
ಗೃಹವನ್ನು ಬಿಟ್ಟುಹೋದ ಬಳಿಕ ಲಗ್ನ ಮಾಡಿಕೊಂಡು ಬಡತನದಿಂದ ಸಂಸಾ
ರವನ್ನು ಸಾಗಿಸುತ್ತಿದ್ದನು. ಶ್ರೀಕೃಷ್ಣನ ಐಶ್ವರ್ಯವು ಹೆಚ್ಚಾದ ವರ್ತಮಾ
ನವನ್ನು ಕೇಳಿ ಅವನು ಯಾವಾಗಲು ಆನಂದಪಡುತ್ತಿದ್ದನು. ಹಾಗೂ ಅವನು
ತನ್ನ ಹೆಂಡತಿಯ ಮುಂದೆ ತನ್ನ ಮತ್ತು ಶ್ರೀಕೃಷ್ಣನ ಬಾಲ್ಯದಲ್ಲಿ ಸಂಭವಿಸಿದ
ಸಂಗತಿಗಳನ್ನು ಹೇಳುತ್ತಿದ್ದನು. ಈ ಬಡ ಕುಟುಂಬದಲ್ಲಿ ಮಕ್ಕಳು ಮರಿ
ಗಳು ಹುಟ್ಟಿದ್ದರಿಂದ ಇವರಿಗೆ ಮುಪ್ಪಿನ ಕಾಲದಲ್ಲಿ ಸಂಸಾರವನ್ನು ಸಾಗಿಸು
ವದು ಬಹಳ ಜಡವಾಗುತ್ತ ನಡೆಯಿತು. ಆಗ ಒಂದು ದಿವಸ ಸುದಾಮನ
ಹೆಂಡತಿಯು ಸುದಾಮನಿಗೆ–“ ನೀವು ಯಾವಾಗಲು ಶ್ರೀಕೃಷ್ಣನ ನೆನಪು ತೆಗೆ
ಯುತ್ತೀರಿ. ಹಾಗೂ ನಿಮ್ಮದೂ ಶ್ರೀಕೃಷ್ಣನದೂ ಬಹಳ ಸ್ನೇಹವಿರುತ್ತದೆಂ

ದು ಅನ್ನುತ್ತೀರಿ. ಆದುದರಿಂದ ನೀವು ನಮ್ಮ ಒಡಮಕ್ಕಳ ದೈನ್ಯಾವಸ್ಥೆಯನ್ನು ತಪ್ಪಿಸುವದಕ್ಕಾಗಿ ಶ್ರೀಕೃಷ್ಣನ ಬಳಿಗೆ ಹೋಗಿ ಏನಾದರೂ ದ್ರವ್ಯವನ್ನು ಬೇಡಿಕೊಂಡು ಬನ್ನಿರಿ" ಎಂದು ಹೇಳಿದಳು. ಈ ಪ್ರಕಾರ ಸುದಾಮನ ಹೆಂಡತಿಯ ಆಗ್ರಹವು ಬಹಳವಾಗಲು ಅವನು ಒಂದು ದಿವಸ "ಪುಣ್ಯಶ್ಲೋಕನ ದರ್ಶನವನ್ನಾದರೂ ತೆಗೆದುಕೊಂಡು ಬರೋಣ" ಎಂದು ವಿಚಾರ ಮಾಡಿ ಶ್ರೀಕೃಷ್ಣನನ್ನು ಕಾಣಲಿಕ್ಕೆ ಹೋಗಬೇಕೆಂದು ತನ್ನ ಮನಸ್ಸಿನಲ್ಲಿ ನಿಶ್ಚಯ ಮಾಡಿ ತನ್ನ ಹೆಂಡತಿಯು ಭಿಕ್ಷೆ ಬೇಡಿಕೊಂಡ ಬಂದಿದ್ದ ಎರಡು ಮುಷ್ಟಿ ಅವಲಕ್ಕಿಯನ್ನು ತನ್ನ ದೋತರದ ಚುಂಗಿನಲ್ಲಿ ಕಟ್ಟಿಕೊಂಡು ದ್ವಾರಕೆಗೆ ಹೋಗಿ ಶ್ರೀಕೃಷ್ಣನ ವೈಭವಸಂಪನ್ನ ಮಂದಿರದೊಳಗೆ ಹೋದನು. ಆ ಮಂದಿರದ ಒಂದು ರಂಗಮಹಾಲಿನೊಳಗೆ ಶ್ರೀಕೃಷ್ಣನು ರುಕ್ಮಿಣಿಯ ಕೈಯಿಂದ ಗಾಳಿಯನ್ನು ಬೀಸಿಕೊಳ್ಳುತ್ತ ಒಂದು ಪರ್ಯಂಕದ ಮೇಲೆ ಕುಳಿತಿದ್ದನು. ಇದು ಸುದಾಮನ ದೃಷ್ಟಿಗೆ ಬಿತ್ತು. ಸುದಾಮನು ಬಂದದ್ದಾದರೂ ಶ್ರೀಕೃಷ್ಣನ ದೃಷ್ಟಿಗೆ ಬಿತ್ತು. ಆಗ ಶ್ರೀಕೃಷ್ಣನು ಆನಂದವುಳ್ಳವನಾಗಿ ಚಟಕ್ಕನೆ ತನ್ನ ಪರ್ಯಂಕದಿಂದ ಜಿಗಿದು ಅವನಿಗೆ ಎದುರಾಗಿ ಹೋಗಿ— "ಮಿತ್ರಾ, ಬಹಳ ವರ್ಷಗಳ ನಂತರ ನೀನು ದರ್ಶನವನ್ನು ಕೊಟ್ಟೆ" ಎಂದು ಅನ್ನುತ್ತ ಅವನಿಗೆ ಆಲಿಂಗನವನ್ನು ಕೊಟ್ಟನು. ಆ ಕಾಲಕ್ಕೆ ಅವರಿಬ್ಬರ ಕಣ್ಣುಗಳಿಂದಲೂ ಆನಂದಾಶ್ರುಗಳು ಸುರಿದವು. ಈ ಪ್ರಕಾರ ಶ್ರೀಕೃಷ್ಣನು ಸುದಾಮನಿಗೆ ಆಲಿಂಗನವನ್ನು ಕೊಟ್ಟ ನಂತರ ಸುದಾಮನನ್ನು ಕರೆದುಕೊಂಡು ಹೋಗಿ ತನ್ನ ಪರ್ಯಂಕದ ಮೇಲೆ ಕುಳ್ಳಿರಿಸಿ ಅವನ ಪಾದ ಪ್ರಕ್ಷಾಲನ ಮಾಡಿ, ಅವನನ್ನು ಮಧುಪರ್ಕದಿಂದ ಪೂಜಿಸಿ, ಅವನಿಗೆ ಅಂತಃಕರಣಪೂರ್ವಕವಾಗಿ ಸ್ವಾಗತ ಮಾಡಿದನು. ಇದನ್ನು ನೋಡಿ ಅಂತಃಪುರದೊಳಗಿನ ಜನರಿಗೆ ಈ ಬ್ರಾಹ್ಮಣನು ಯಾರಿರಬೇಕೆಂದು ಬಹಳ ದಿಗಿಲು ಬಿತ್ತು. ಆದರೆ ಮುಂದೆ ಅವರವರೊಳಗೆ ಓದುಮನೆಯೊಳಗಿನ (ಗುರುಗೃಹದೊಳಗಿನ) ಮಾತುಕಥೆಗಳು ನಡೆದ ನಂತರ ಇವರಿಬ್ಬರೂ ಮುಂಚೆ ಕೂಡಿ ಕಲಿತವರೆಂದು ಎಲ್ಲರಿಗೆ ಸ್ಪಷ್ಟವಾಗಿ ತಿಳಿದುಬಂತು. ಈ ಭಾಷಣವಾಗುವಾಗ್ಗೆ ಶ್ರೀಕೃಷ್ಣನು ಸುದಾಮನನ್ನುದ್ದೇಶಿಸಿ—"ಸುದಾಮಾ, ನೀನು ಗುರುಗೃಹದಿಂದ ಹೋದ ಬಳಿಕ ಮದುವೆ ಮಾಡಿ



ಶ್ರೀಕೃಷ್ಣನು ಸುದಾಮನನ್ನು ಸತ್ಕರಿಸಿದ್ದು. (ಪುಟ ೧೯೬)

ಕೊಂಡೆಯಾ? ನಿನ್ನ ವಿರಕ್ತತನವು ಸಂಸಾರದಲ್ಲಿಯೂ ಸ್ಥಿರವಾಗಿರುತ್ತದೆಂದು ಕಾಣುತ್ತದೆ. ನಾವಿಬ್ಬರೂ ಗುರುಗೃಹದಲ್ಲಿದ್ದಾಗ ಕಟ್ಟಿಗೆಯನ್ನು ತರಲಿಕ್ಕೆ ಅಡವಿಗೆ ಹೋಗಿ ಭಯಂಕರವಾದ ಮಳೆಯಲ್ಲಿ ಸಿಕ್ಕು ರಾತ್ರಿಯೆಲ್ಲ ಆ ಅಡವಿಯೊಳಗೆ ಕಷ್ಟಪಟ್ಟ ಸಂಗತಿಯೂ, ಗುರುಗಳು ನಮ್ಮನ್ನು ಹುಡುಕುತ್ತ ಬಂದ ಸಂಗತಿಯೂ ನಿನಗೆ ನೆನಪಾಗುತ್ತದೋ? ಅಹಹ! ಏನು ಆ ಚಿಕ್ಕಂದಿನೊಳಗಿನ ಆನಂದದ ದಿವಸಗಳು!" ಎಂದು ನುಡಿದನು. ಈ ಪ್ರಕಾರ ಅವರವರೊಳಗೆ ಕೆಲವು ಹೊತ್ತು ಮಾತುಕಥೆಗಳು ನಡೆದ ನಂತರ ಶ್ರೀಕೃಷ್ಣನು ಸುದಾಮನಿಗೆ— "ಮಿತ್ರಾ, ನನ್ನ ಅತ್ತಿಗೆಯು ನನಗೆ ಕೊಡಲಿಕ್ಕೆ ಏನಾದರೂ ಕಳಿಸಿರುತ್ತಾಳೋ? ಕೊಡು ನೋಡೋಣ. ನೀನು ನನಗೆ ಅಂತಃಕರಣದಿಂದ ಏನಾದರೂ ಅಲ್ಪಸ್ವಲ್ಪ ಕೊಟ್ಟರೂ ನಾನು ಸ್ವೀಕಾರ ಮಾಡುತ್ತೇನೆ. ಏನು ತಂದಿರುತ್ತೀ ತೋರಿಸು" ಎಂದು ಹೇಳಿದನು. ಸುದಾಮನು ಶ್ರೀಕೃಷ್ಣನ ಆಗ್ರಹವನ್ನು ನೋಡಿ ನಾಚ ನಾಚುತ್ತ ತಾನು ತಂದಿದ್ದ ಅವಲಕ್ಕಿಯ ಗಂಟನ್ನು ಅವನ ಮುಂದೆ ಇಟ್ಟನು. ಆಗ ಶ್ರೀಕೃಷ್ಣನು ಆ ಗಂಟನ್ನು ಬಿಚ್ಚಿ ಅದರೊಳಗಿನ ಒಂದು ಮುಷ್ಟಿ ಅವಲಕ್ಕಿಯನ್ನು ಬಾಯೊಳಗೆ ಹಾಕಿಕೊಂಡು ಸುದಾಮನಿಗೆ–"ಅಹಹಾ, ಈ ಅವಲಕ್ಕಿಯು ಎಷ್ಟು ರುಚಿಕರ ಇರುತ್ತವೆ! ಇಂಥ ಅವಲಕ್ಕಿಯನ್ನು ನಾನು ಹಿಂದೆ ಎಂದೂ ತಿಂದಿಲ್ಲ" ಎಂದು ಹೇಳಿ ಇನ್ನೊಂದು ಮುಷ್ಟಿ ಅವಲಕ್ಕಿಯನ್ನು ತೆಗೆದುಕೊಳ್ಳುತಕ್ಕವನಿದ್ದನು. ಅಷ್ಟರಲ್ಲಿ ರುಕ್ಮಿಣಿಯು ಬಂದು ಶ್ರೀಕೃಷ್ಣನ ಕೈಹಿಡಿದು "ಪ್ರಿಯಾ, ಈಗ ನೀವು ಒಂದು ಮುಷ್ಟಿ ಅವಲಕ್ಕಿಯನ್ನು ತಿಂದಿದ್ದರಿಂದ ನಿಮಗೆ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸಂತುಷ್ಟತೆಯಾಯಿತು. ಇನ್ನು ನನಗೆ ನನ್ನ ಪಾಲಿನ ಒಂದು ಮುಷ್ಟಿ ಅವಲಕ್ಕಿಯನ್ನು ಕೊಡಿರಿ" ಎಂದು ಕೇಳಿದಳು. ಈ ಪ್ರಕಾರ ಆ ಪತಿಪತ್ನಿಯರ ಪ್ರೇಮವನ್ನೂ ಸರಳ ಸ್ವಭಾವವನ್ನೂ ನೋಡಿ ಸುದಾಮನು ಆನಂದಪಟ್ಟನು. ಈ ಪ್ರಕಾರ ಅವರಿಬ್ಬರೂ ಆ ರಾತ್ರಿಯನ್ನು ಆನಂದದಿಂದ ಕಳೆದ ತರುವಾಯ ಮರುದಿವಸ ರುಕ್ಮಿಣಿ ಮೊದಲಾದ ಯಾದವ ಸ್ತ್ರೀಯರು ಸುದಾಮನಿಗೆ ಸ್ನಾನಾದಿಕಗಳಿಂದ ಸೇವೆಯನ್ನು ಮಾಡಿ ಸುಗ್ರಾಸಭೋಜನವನ್ನು ಮಾಡಿಸಿದರು. ಆ ಮೇಲೆ ಸುದಾಮನು ತನ್ನ ಊರಿಗೆ ಹೋಗಲಿಕ್ಕೆ ಹೊರಟನು. ಆಗ ಶ್ರೀಕೃಷ್ಣನು

ಅವನಿಗೆ ತನ್ನ ಮನೆ ಬಿಟ್ಟು ಬಹಳ ದೂರ ಕಳಿಸಲಿಕ್ಕೆ ಹೋಗಿ ಅವನನ್ನು ತನ್ನ ಪ್ರಿಯ ವಚನಗಳಿಂದ ಸಂತುಷ್ಟಪಡಿಸಿದನು. ಸುದಾಮನು ನಾಚಿಕೆಯಿಂದ ಶ್ರೀಕೃಷ್ಣನ ಹತ್ತರ ದ್ರವ್ಯದ ಯಾಚನೆಯನ್ನು ಮಾಡಲಿಲ್ಲ. ಹಾಗೂ ಶ್ರೀಕೃಷ್ಣನು ಅವನಿಗೆ—“ ನಿನಗೆ ದ್ರವ್ಯವು ಬೇಕೇನು ? ” ಎಂದು ಕೇಳಲಿಲ್ಲ. ಸುದಾಮನು ತನ್ನ ಊರಿಗೆ ಹೋಗುವಾಗ ದಾರಿಯಲ್ಲಿ—“ ನಾನು ಮನೆಗೆ ಹೋದ ಬಳಿಕ ನನ್ನ ಬಡ ಮಡದಿ ಮಕ್ಕಳು ನನಗೆ ಶ್ರೀಕೃಷ್ಣನ ಕಡೆಯಿಂದ ಯಾಕೆ ದ್ರವ್ಯವನ್ನು ತೆಗೆದುಕೊಂಡು ಬರಲಿಲ್ಲವೆಂದು ಎಷ್ಟು ಜರಿಯುವರೋ ? ” ಎಂದು ಮೇಲಿಂದ ಮೇಲೆ ವಿಚಾರ ಮಾಡುವಲ್ಲಿ ತೊಡಗಿದನು. ಒಮ್ಮೊಮ್ಮೆ ಅವನು—“ ಶ್ರೀಕೃಷ್ಣನು ಎಷ್ಟು ದೊಡ್ಡ ಮನುಷ್ಯನು ! ಅವನು ನನ್ನನ್ನು ಮರೆತಿಲ್ಲವಷ್ಟೇ ಅಲ್ಲ, ನನಗೆ ಆಲಿಂಗನ ಕೊಟ್ಟು ನನ್ನನ್ನು ತನ್ನ ಪರ್ಯಂಕದ ಮೇಲೆ ಕುಳ್ಳಿರಿಸಿದನು ! ಅವನೂ ಅವನ ಹೆಂಡತಿಯಾದ ರುಕ್ಮಿಣಿಯೂ ನನ್ನನ್ನು ದೇವರಂತೆ ಸೇವೆಯನ್ನು ಮಾಡಿದರು! ಬಹುಶಃ ಶ್ರೀಕೃಷ್ಣನು ದರಿದ್ರನಾದ ನನಗೆ ದ್ರವ್ಯವನ್ನು ಕೊಟ್ಟರೆ ನಾನು ಉನ್ಮತ್ತನಾಗಿ ಈಶ್ವರ ಭಕ್ತಿಯನ್ನು ಬಿಟ್ಟೇನೆಂಬ ಕಾರಣದಿಂದ ನನಗೆ ಅದನ್ನು ಕೊಟ್ಟಿರಲಿಕ್ಕಿಲ್ಲ ” ಎಂದು ತನ್ನ ಮನಸ್ಸಿನಲ್ಲಿ ಸಮಾಧಾನ ಮಾಡಿಕೊಳ್ಳುತ್ತಿದ್ದನು. ಈ ಪ್ರಕಾರ ಅವನು ವಿಚಾರ ಮಾಡುತ್ತ ಮಾಡುತ್ತ ತನ್ನ ಊರಿಗೆ ಬಂದು ಮುಟ್ಟಿದನು. ಆಗ ಅವನಿಗೆ ಅವನ ಊರ ಜನರು ಊದುತ್ತ ಬಾರಿಸುತ್ತ ಬಂದು ರಥದಲ್ಲಿ ಕುಳ್ಳಿರಿಸಿಕೊಂಡು ಒಯ್ದರು. ಅವನು ತನ್ನ ಮನೆಗೆ ಹೋದ ಕೂಡಲೆ ಮುತ್ತು, ವಜ್ರ, ರತ್ನ ಮುಂತಾದ ಆಭರಣಗಳನ್ನು ಹಾಕಿಕೊಂಡ ಅವನ ಹೆಂಡತಿಯು ಅವನಿಗೆ ಆರತಿ ಮಾಡಿ ನಮಸ್ಕಾರ ಮಾಡಿದಳು. ಅವನ ಮಕ್ಕಳು ಮರಿಗಳೆಲ್ಲ ಉತ್ತಮ ವಸ್ತ್ರಗಳನ್ನು ಧರಿಸಿಕೊಂಡು ಕುಲು ಕುಲು ನಗುತ್ತ ನಿಂತಿದ್ದರು. ಮನೆಯಲ್ಲಿ ನೂರಾರು ಮಂದಿ ದಾಸದಾಸಿಯರು ನಿಂತುಕೊಂಡಿದ್ದರು. ಈ ಎಲ್ಲ ಸಂಪತ್ತಿಯನ್ನೂ ವೈಭವವನ್ನೂ ಸುದಾಮನು ಕಂಡು ತನ್ನ ಕಣ್ಣೊಳಗಿಂದ ಪ್ರೇಮಾಶ್ರುಗಳನ್ನು ಉದುರಿಸಿ—“ ಶ್ರೀಕೃಷ್ಣಾ ! ನನಗೆ ಮುಂಚಿತವಾಗಿ ಏನೂ ತಿಳಿಸದೆ ಈ ಎಲ್ಲ ವೈಭವವನ್ನು ನನಗೆ ಕೊಟ್ಟೆ! ಏನು ನಿನ್ನ ಔದಾರ್ಯವಿದು! ” ಎಂದು ಅವನನ್ನು ಬಹಳವಾಗಿ ಕೊಂಡಾಡಿದನು. ಇರಲಿ. ಈ ಪ್ರಕಾರ ಸುದಾಮನೂ

ಅವನ ಹೆಂಡತಿಯೂ ಅನೇಕ ವರ್ಷಗಳ ಪರ್ಯಂತರ ಸುಖ ಸಂಪತ್ತನ್ನು ಅನುಭವಿಸಿ ಸನ್ಮಾರ್ಗದಿಂದ ನಡೆದು ಮೋಕ್ಷಪದವನ್ನು ಹೊಂದಿದರು.

ಈ ಪ್ರಕಾರ ಶ್ರೀಕೃಷ್ಣನು ಸತ್ಪಾತ್ರರಾದ ಬ್ರಾಹ್ಮಣರನ್ನು ಅನೇಕ ರೀತಿಯಿಂದ ಸತ್ಕರಿಸುತ್ತಲೂ ಮಕ್ಕಳು ಮೊಮ್ಮಕ್ಕಳುಗಳೊಂದಿಗೆ ಸಂಸಾರ ಸುಖವನ್ನು ಅನುಭೋಗಿಸುತ್ತಲೂ, ತನ್ನ ಮುಂದಿನ ಆಯುಷ್ಯವನ್ನು ಕಳೆದನು. ಪೃಥ್ವಿಗೆ ಭಾರವಾಗಿದ್ದ ದುಷ್ಟ ಕ್ಷತ್ರಿಯರ ನಾಶವು ಭಾರತೀಯ ಯುದ್ಧದಿಂದ ಪೂರ್ಣವಾದ ಕಾರಣ ಶ್ರೀಕೃಷ್ಣನ ಅವತಾರ ಕಾರ್ಯವು ಮುಗಿಯುವ ಹೊತ್ತು ಬಂತು. ಆದರೆ ಶ್ರೀಕೃಷ್ಣನ ಪ್ರಭಾವದಿಂದ ಅವನ ವಂಶಜರು ಮತ್ತು ಅವನ ಜ್ಞಾತಿಬಂಧುಗಳು ಆದಂಥ ಯಾದವರ ಭಾರವು ಪೃಥ್ವಿಗೆ ವಿಶೇಷವಾಗಿದ್ದರಿಂದ ಅವರಿಗೂ ಪೃಥ್ವಿಯನ್ನು ಬಿಟ್ಟು ಹೋಗುವ ಪ್ರಸಂಗವು ಬಂತು. ಆದರೆ ಯಾದವರ ನಾಶವನ್ನು ಮಾಡಲಿಕ್ಕೆ ಪರಮಾತ್ಮನಿಗೆ ಪರಶತ್ರುಗಳನ್ನು ಉತ್ಪನ್ನ ಮಾಡುವ ಕಾರಣವು ಬೀಳಲಿಲ್ಲ. ಅವರ ಬುದ್ಧಿಯು ಹರಣವಾಗಿ ಅವರಲ್ಲಿ ಉತ್ಪನ್ನವಾದಂಥ ದುರ್ಗುಣಗಳೇ ಅವರ ವಿನಾಶಕ್ಕೆ ಕಾರಣವಾದವು. ಶ್ರೀಕೃಷ್ಣನು ಜೀವಂತವಿರುವಾಗ್ಗೆ ಮತ್ತು ಅವನ ಉದಾರ ಚರಿತ್ರವು ಅವರ ಮುಂದೆ ಮೂರ್ತಿಮಂತವಾಗಿ ಇರುವಾಗ್ಗೆ ಹಾಗೂ ಅವನ ದಿವ್ಯ ಉಪದೇಶವು ಅವರ ಕಿವಿಯಲ್ಲಿ ದುಮುದುಮಿಸುತ್ತಿರುವಾಗ್ಗೆ ಅವನ ವಂಶಜರೂ ಜ್ಞಾತಿಬಾಂಧವರೂ ಕಾಲವಶದಿಂದ ನಾಶವನ್ನು ಹೊಂದಿದರು. ಕಲಿಯುಗದ ಪ್ರಾದುರ್ಭಾವದ ಮೂಲಕ ಯಾದವರ ಧರ್ಮಶ್ರದ್ಧೆಯೂ ಸಾಧುಸಜ್ಜನರ ಸೇವೆಯೂ ನಷ್ಟವಾಗಿ, ಅವರು ಬ್ರಹ್ಮದ್ವೇಷವನ್ನೂ ಮದ್ಯ ಪ್ರಾಶನವನ್ನೂ ಮಾಡಹತ್ತಿದರು. ಈ ಪ್ರಕಾರ ಐಶ್ವರ್ಯದ ಶಿಖರಕ್ಕೆ ಹೋಗಿ ಮುಟ್ಟಿದ್ದ ಯಾದವರು ದುರ್ಗುಣದ ಶಿಖರಕ್ಕೆ ಹೋಗಿ ಮುಟ್ಟಿದರು. ಒಂದು ಸಾರೆ ವಿಶ್ವಾಮಿತ್ರ, ಕಣ್ವ, ನಾರದ ಮೊದಲಾದ ಮಹರ್ಷಿಗಳು ಶ್ರೀಕೃಷ್ಣನ ದರ್ಶನಕ್ಕಾಗಿ ಬಂದಿರಲು, ಯಾದವರು ಆ ಋಷಿ ಜನರ ಚೇಷ್ಟೆಯನ್ನು ಮಾಡುವದಕ್ಕಾಗಿ ಶ್ರೀಕೃಷ್ಣನ ಮಗನಾದ ಸಾಂಬನಿಗೆ ಹೆಣ್ಣುವೇಷವನ್ನು ಹಾಕಿಸಿ—“ಈ ಸ್ತ್ರೀಯು ಬಸುರಿದ್ದಾಳೆ. ಇವಳಿಗೆ ಗಂಡು ಮಗನು ಹುಟ್ಟುತ್ತಾನೋ? ಹೆಣ್ಣು ಮಗಳು ಹುಟ್ಟುತ್ತಾಳೋ?” ಎಂದು

ಕೇಳಿದರು. ಅದಕ್ಕೆ ಆ ಋಷಿಜನರು ಸಂತಾಪದಿಂದ—“ ಇವನು ಸ್ತ್ರೀಯಲ್ಲ. ಇವನು ಶ್ರೀಕೃಷ್ಣನ ಬ್ರಹ್ಮದ್ವೇಷಿ ಮಗನಾದ ಸಾಂಬನಿರುತ್ತಾನೆ. ಇವನಿಗೆ ನಾಳೆ ಒಂದು ಭಯಂಕರವಾದ ಒನಿಕೆಯು ಹುಟ್ಟುವದು. ಅದರಿಂದ ನಿಮ್ಮೆಲ್ಲ ಉನ್ಮತ್ತ ಯಾದವರ ನಾಶವಾಗುವದು ” ಎಂದು ಹೇಳಿದರು. ಆ ಪ್ರಕಾರ ಸಾಂಬನಿಗೆ ಮರುದಿವಸವೇ ಒಂದು ಒನಿಕೆಯು ಹುಟ್ಟಿತು. ಆ ಮೇಲೆ ಅವರು ಅತಿ ಖಿನ್ನರಾಗಿ ಈ ವರ್ತಮಾನವನ್ನು ತಮ್ಮ ರಾಜನಾದ ವಸುದೇವನಿಗೆ ತಿಳಿಸಿದನು. ಆಗ ಅವನು—“ ಇದನ್ನು ಪುಡಿ ಪುಡಿ ಮಾಡಿ ಸಮುದ್ರದೊಳಗೆ ಚೆಲ್ಲಿಕೊಡಿರಿ ” ಎಂದು ಹೇಳಿದನು. ಅದರಂತೆ ಆ ಯಾದವರು ಮಾಡಿ ತಮ್ಮ ಮನಸ್ಸಿನ ಸಮಾಧಾನ ಮಾಡಿಕೊಂಡರು. ಆದರೂ ಅವರು ಮದ್ಯಪ್ರಾಶನವನ್ನು ಮಾಡಲಿಕ್ಕೆ ಹತ್ತಿ ನಾಚಿಕೆಯಿಲ್ಲದೆ ಅನೇಕ ತರದ ಪಾಪಗಳನ್ನು ಮಾಡಲಿಕ್ಕೆ ಹತ್ತಿದರು. ಪಿತೃಗಳನ್ನೂ ದೇವರನ್ನೂ ನಿಂದಿಸಲಿಕ್ಕೆ ಹತ್ತಿದರು. ಪತಿಪತ್ನಿಗಳು ನಿತ್ಯದಲ್ಲಿ ಜಗಳಾಡಿ ತಮ್ಮ ಪರಸ್ಪರ ಪವಿತ್ರ ಸಂಬಂಧವನ್ನು ಮುರಕೊಳ್ಳಹತ್ತಿದರು. ಇದನ್ನು ನೋಡಿ ಶ್ರೀಕೃಷ್ಣನಿಗೆ ಒಹಳ ವ್ಯಸನವೆನಿಸಿತು. ಆಗ ಅನೇಕ ಅಪಶಕುನಗಳು ಸಂಭವಿಸಿದವು. ಅಸಂಖ್ಯ ಇಲಿಗಳು ಹಾಡುಹಗಲೇ ದಾರಿಗಳಲ್ಲಿಯೂ ಮನೆಗಳಲ್ಲಿಯೂ ಓಡಾಡಹತ್ತಿದವು. ಪಂಜರದೊಳಗಿನ ಗಿಳಿ ಮೊದಲಾದ ಸುಂದರ ಪಕ್ಷಿಗಳು ತಮ್ಮ ಮಧುರ ಶಬ್ದಗಳನ್ನು ಬಿಟ್ಟುಕೊಟ್ಟು ಕರ್ಣಕಠೋರವಾದ ಅಭದ್ರ ಶಬ್ದಗಳನ್ನು ಉಚ್ಚರಿಸಹತ್ತಿದವು. ಆಡು ಹೋತುಗಳು ನರಿ ತೋಳುಗಳಂತೆ ಕೂಗಹತ್ತಿನವು. ದೇವಾಲಯದೊಳಗಿನ ಮೂರ್ತಿಗಳ ಕಣ್ಣೊಳಗಿಂದ ಕಣ್ಣೀರು ಸುರಿಯಹತ್ತಿದವು. ಈ ಎಲ್ಲ ಅಪಶಕುನಗಳನ್ನು ನೋಡಿ ವಸುದೇವನು ಯಾದವರನ್ನು ಸುಧಾರಿಸಬೇಕೆಂದು ಆಲೋಚಿಸಿ—“ ಯಾರೂ ಮದ್ಯಪಾನ ಮಾಡಬಾರದು ” ಎಂಬದಾಗಿ ಊರೊಳಗೆ ಡಂಗುರವನ್ನು ಹೊಯ್ಸಿಸಿದನು. ಆದರೆ ಅವರು ಗುಪ್ತವಾಗಿ ಮದ್ಯಪಾನ ಮಾಡಹತ್ತಿದರು. ಆದುದರಿಂದ ಅವರ ಉನ್ಮತ್ತತನವು ಕಡಿಮೆಯಾಗಲಿಲ್ಲ.

ಆ ಯಾದವರಲ್ಲಿಯೂ ಎಷ್ಟೋ ಮಂದಿ ನಿರ್ವ್ಯಸನಿಗಳೂ, ಸತ್ವಶೀಲರೂ, ಸದಾಚಾರಿಗಳೂ ಇದ್ದರು. ಅವರಲ್ಲಿ ಉದ್ಧವನು ಅಗ್ರಗಣ್ಯನಿದ್ದನು.

ಆವನು ಶ್ರೀಕೃಷ್ಣನ ಚಿಕ್ಕಪ್ಪನಾದ ದೇವಭಾವನೆಂಬವನ ಮಗನೂ ಶ್ರೀಕೃಷ್ಣನ ಪರಮಭಕ್ತನೂ ಇದ್ದನು. ಅವನು ಶ್ರೀಕೃಷ್ಣನ ಬಳಿಗೆ ಬಂದು ಆವ ನನ್ನು ನಮಸ್ಕರಿಸಿ—“ ಪ್ರಭೋ, ನೀನು ಯಾದವ ವಂಶದ ಸಂಹಾರವನ್ನು ಮಾಡಿಸಿ ತೀವ್ರವಾಗಿ ಭೂಲೋಕವನ್ನು ಬಿಟ್ಟು ಹೋಗುವಿಯೆಂದು ಕಾಣುತ್ತದೆ. ನಾನು ನಿನ್ನನ್ನು ಬಿಟ್ಟು ಸರ್ವಥಾ ಇರಲಾರೆನು. ಆದುದರಿಂದ ನೀನು ನಿನ್ನ ಕೂಡ ನನ್ನನ್ನು ಕರಕೊಂಡು ಹೋಗು ” ಎಂದು ಪ್ರಾರ್ಥಿಸಿದನು. ಅದಕ್ಕೆ ಶ್ರೀಕೃಷ್ಣನು–“ ಉದ್ಧವಾ, ನೀನು ಹೇಳುವದು ನಿಜವಿರುತ್ತದೆ. ಈ ದ್ವಾರಕೆಯು ಇವತ್ತಿನಿಂದ ಏಳು ದಿವಸಗಳಲ್ಲಿ ಮುಳುಗಿ ಹೋಗುವದು. ಜ್ಞಾನಿಯಾದ ನೀನು ನಿರಾಶೆಯಾಗಬೇಡ. ಬದರಿಕಾಶ್ರಮಕ್ಕೆ ಹೋಗಿ ವಲ್ಕಲಗಳನ್ನು ಧಾರಣ ಮಾಡಿ ಕಂದಮೂಲಗಳನ್ನು ಸೇವಿಸಿ ನನ್ನಲ್ಲಿ ಚಿತ್ತವನ್ನಿಡು. ಅಂದರೆ ನಿನಗೆ ಪರಮಗತಿಯಾಗುವದು ” ಎಂದು ಹೇಳಿದನು. ಈ ಸಮಯದಲ್ಲಿ **ಶ್ರೀಕೃಷ್ಣನು ಉದ್ಧವನಿಗೆ ಹೇಳಿದ ಉಪದೇಶವು ಭಗವದ್ಗೀತೆಯ ಉಪದೇಶದಂತೆ ಮಹತ್ವದ್ದಾಗಿರುತ್ತದೆ. ಅದು ಭಾಗವತದ ಏಕಾದಶ ಸ್ಕಂಧದಲ್ಲಿ ಹೇಳಲ್ಪಟ್ಟಿರುತ್ತದೆ.**

ಶ್ರೀಕೃಷ್ಣನು ಉದ್ಧವನಿಗೆ ಉಪದೇಶವನ್ನು ಹೇಳಿದ ವರ್ಷ ಭಾರತ ಯುದ್ಧದ ವರ್ಷದಂತೆ ಕಾರ್ತಿಕ ವದ್ಯ ಅಮಾವಾಸ್ಯೆಯ ದಿವಸ ಸೂರ್ಯಗ್ರಹಣವಾಗಿ ದ್ವಾರಕೆಯಲ್ಲಿ ಅನೇಕ ಉತ್ಪಾತಗಳು ಸಂಭವಿಸಿದವು. ಆಗ ಶ್ರೀಕೃಷ್ಣನು ಎಲ್ಲ ಯಾದವರಿಗೆ ಪರ್ವಣಿಯ ಸ್ನಾನಕ್ಕೋಸ್ಕರ ಪ್ರಭಾಸತೀರ್ಥಕ್ಕೆ ನಡೆಯಿರೆಂದು ಹೇಳಿದನು. ಆ ಪ್ರಕಾರ ಅವರು ತಮ್ಮ ಹೆಂಡರು ಮಕ್ಕಳನ್ನು ಕಟ್ಟಿಕೊಂಡು ತಮ್ಮ ತಮ್ಮ ವೈಭವಕ್ಕನುಸರಿಸಿ ಅಲ್ಲಿಗೆ ಹೋಗಿ ಒಂದು ದಿವಸ ತಮ್ಮ ಸ್ನಾನವನ್ನು ತೀರಿಸಿಕೊಂಡು ನಾನಾ ಪ್ರಕಾರದ ಭಕ್ಷ್ಯಗಳನ್ನು ಮಾಡಿಸಿ ಊಟವನ್ನು ಮುಗಿಸಿಕೊಂಡು ಕುಳಿತ ತರುವಾಯ ಸುರಾಪಾನವನ್ನು ಮಾಡಿದರು. ಶ್ರೀಕೃಷ್ಣನ ಸಮಕ್ಷ ಬಲರಾಮ, ಕೃತವರ್ಮ, ಸಾತ್ಯಕಿ ಮೊದಲಾದವರು ಸುರಾಪಾನವನ್ನು ಮಾಡಿ ಅದರ ಮದದಲ್ಲಿ ಭಾರತ ಯುದ್ಧದ ಸಂಬಂಧವಾದ ಹಿಂದಿನ ಹಾಳುರಗಳೆಯನ್ನು ತೆಗೆದು ಒಬ್ಬರನ್ನೊಬ್ಬರು ನಿಂದಿಸಿ ಮಾತಾಡಿದರು. ಸಾತ್ಯಕಿಯು ಕೃತವರ್ಮನಿಗೆ - “ ನಿದ್ರೆ ಮಾಡುವ

ಹುಡುಗರನ್ನು ನಿನ್ನ ಹೊರತು ಯಾವ ನೀಚ ಕ್ಷತ್ರಿಯನು ಕೊಂದಾನು?" ಎಂದು ನುಡಿದನು. ಪ್ರದ್ಯುಮ್ನನು ಸಾತ್ಯಕಿಯ ಮಾತಿಗೆ ಪುಷ್ಟಿಯನ್ನು ಕೊಟ್ಟು ಮಾತಾಡಿದನು. ಆಗ ಕೃತವರ್ಮನು ಸಿಟ್ಟಿಗೆದ್ದು ಸಾತ್ಯಕಿಯ ಕಡೆಗೆ ಅಮರ್ಯಾದೆಯಿಂದ ಕೈಮಾಡಿ-"ಪ್ರಾಣಾಯಾಮ ಮಾಡಿ ಕುಳಿತಿದ್ದ ಭೂರಿ ಶ್ರವನನ್ನು ಕೊಂದ ನೀಚನಾದ ನೀನು ಇದನ್ನು ಮಾತಾಡುತ್ತೀಯಾ?" ಎಂದು ತಿರುಗಿ ಮಾತಾಡಿದನು. ಆಗ ಶ್ರೀಕೃಷ್ಣನು ಕೃತವರ್ಮನ ಕಡೆಗೆ ತಿರಸ್ಕಾರ ಮುದ್ರೆಯಿಂದ ನೋಡಿದನು. ಆ ಬಳಿಕ ಸಾತ್ಯಕಿಯು ಕೃತವರ್ಮನನ್ನುದ್ದೇಶಿಸಿ—"ಸ್ಯಮಂತಕ ಮಣಿಯನ್ನು ಕಳವು ಮಾಡಿಸಿದವನೂ, ಸತ್ರಾಜಿತನನ್ನು ಕೊಲ್ಲಿಸಿದವನೂ, ದ್ರೌಪದಿಯ ಐದುಮಂದಿ ಮಕ್ಕಳ ಕುತ್ತಿಗೆಯನ್ನು ಕೊಯ್ಯಿಸಿದವನೂ ನೀನೇ ಇರುತ್ತೀ. ಆದುದರಿಂದ ಈಗ ನಾನು ನಿನ್ನ ಮೇಲೆ ದ್ರೌಪದಿಯ ಮಕ್ಕಳ ಹಾಗೂ ಶಿಖಂಡಿ-ಪ್ರಸೇನ-ಸತ್ರಾಜಿತ ಮೊದಲಾದ ಎಷ್ಟೋ ಜನರ ಕೊಲೆಯ ಮುಯ್ಯಿಯನ್ನು ತೀರಿಸಿಕೊಳ್ಳುತ್ತೇನೆ" ಎಂದು ಉತ್ತರ ಕೊಟ್ಟವನೇ ಒಮ್ಮೆಲೆ ಎದ್ದು ತನ್ನ ಕತ್ತಿಯಿಂದ ಕೃತವರ್ಮನ ರುಂಡವನ್ನು ತುಂಡರಿಸಿದನು. ಈ ಭಯಂಕರ ಸಂಗತಿಯು ಸಂಭವಿಸಿದ್ದನ್ನು ಕೃತವರ್ಮನ ಭೋಜ-ಅಂಧಕ ಮಿತ್ರರು ನೋಡಿ ಸಾತ್ಯಕಿಯ ಮೇಲೆ ಕತ್ತಿಯನ್ನು ಎತ್ತಿದರು. ಆದರೆ ಪ್ರದ್ಯುಮ್ನ ಅನಿರುದ್ಧರು ಸಾತ್ಯಕಿಯ ಸಹಾಯಕ್ಕೆ ಹೋದರು. ಆಗ ಎರಡೂ ಪಕ್ಷದ ವೀರರು ತಮ್ಮೊಳಗೆ ಭಯಂಕರವಾಗಿ ಹೊಡದಾಡಿದರು. ಸರಾಯಿಯ ಮದದಲ್ಲಿ ಗೆಳೆಯರನ್ನು ಗೆಳೆಯರು, ಅಣ್ಣನನ್ನು ತಮ್ಮನು, ತಮ್ಮನನ್ನು ಅಣ್ಣನು, ತಂದೆಯನ್ನು ಮಗನು, ಮತ್ತು ಮಗನನ್ನು ತಂದೆಯು ನೋಡಲಿಲ್ಲ. ಸಾವಿರಾರು ಮಂದಿ ಯಾದವ ಭೋಜರು ಒಬ್ಬರಿಗೊಬ್ಬರು ಹೊಡದಾಡಿ ಸತ್ತರು. ಈ ಹೊಡದಾಟದಲ್ಲಿ ಶ್ರೀಕೃಷ್ಣನ ಮಕ್ಕಳು, ಮೊಮ್ಮಕ್ಕಳು ಮತ್ತು ಗೆಳೆಯರು ಸತ್ತದ್ದನ್ನು ನೋಡಿ ಶ್ರೀಕೃಷ್ಣನಿಗೂ ಸಿಟ್ಟು ಬಂತು. ಆಗ ಅವನು ಆ ಸಿಟ್ಟಿನಿಂದ ಸಮುದ್ರತೀರದ ಮೇಲೆ ದಪ್ಪವಾಗಿಯೂ ಉದ್ದವಾಗಿಯೂ ಬೆಳೆದಂಥ ಒಂದು ಹುಲ್ಲು ಕಡ್ಡಿಯನ್ನು ಕಿತ್ತನು. ಅದು ಕಬ್ಬಿಣದ ಒನಿಕೆಯಾಯಿತು. ಅದನ್ನು ತೆಗೆದುಕೊಂಡು ಅವನು ಸರಾಯಿಯ ಮದದಲ್ಲಿದ್ದ ಜನರನ್ನು ಹೊಡೆಯಲಿಕ್ಕೆ ಹತ್ತಿದನು. ಈ

ಪ್ರಕಾರ ಸರಾಯಿಯ ಮದದಲ್ಲಿ ಐದು ಲಕ್ಷ ಮಂದಿ ಯಾದವ, ಭೋಜ, ಅಂಧಕ, ವೃಷ್ಣಿ ವೀರರು ತಮ್ಮ ತಮ್ಮೊಳಗೆ ಹೊಡದಾಡಿ ಸತ್ತು ಹೋದರು. ಹೆಂಗಸರೂ ಹುಡುಗರೂ ಮಾತ್ರ ಜೀವಂತ ಉಳಿದರು. ಆ ಮೇಲೆ ಶ್ರೀಕೃಷ್ಣನು ಅವರೆಲ್ಲರನ್ನು ಕರಕೊಂಡು ದ್ವಾರಕೆಗೆ ಬಂದ ಒಳಿಕ ತನ್ನ ಸಾರಥಿಯಾದ ದಾರುಕನಿಗೆ--"ನೀನು ಹಸ್ತಿನಾಪುರಕ್ಕೆ ಹೋಗಿ, ಈ ಯಾವತ್ತು ಭಯಂಕರ ವೃತ್ತಾಂತವನ್ನು ಪಾಂಡವರಿಗೆ ತಿಳಿಸು. ಹಾಗೂ ಅರ್ಜುನನಿಗೆ ಇಲ್ಲಿಗೆ ಬಂದು ಯಾದವರ ಹೆಂಗಸರನ್ನೂ ಹುಡುಗರನ್ನೂ ತನ್ನ ಸಂಗಡ ಕರಕೊಂಡು ಹೋಗಲಿಕ್ಕೆ ಹೇಳು" ಎಂದು ಅಪ್ಪಣೆ ಮಾಡಿದನು. ಆಗ ದಾರುಕನು ಬಹು ದುಃಖಿತನಾಗಿ ಶ್ರೀಕೃಷ್ಣನಿಗೆ ನಮಸ್ಕಾರ ಮಾಡಿ ಅವನ ರಥವನ್ನು ಹೂಡಿಕೊಂಡು ಹಸ್ತಿನಾಪುರಕ್ಕೆ ಹೊರಟು ಹೋದನು. ಆ ನಂತರ ಶ್ರೀಕೃಷ್ಣನು ಇನ್ನೂ ಜೀವಂತವಿದ್ದ ತನ್ನ ವೃದ್ಧ ತಂದೆತಾಯಿಗಳ (ವಸುದೇವ ದೇವಕಿಯರ) ಪಾದಗಳ ಮೇಲೆ ತನ್ನ ಮಸ್ತಕವನ್ನಿಟ್ಟು—"ಬಲರಾಮನು ಅರಣ್ಯದಲ್ಲಿ ಯೋಗಾರೂಢನಾಗಿ ಕುಳಿತಿರುತ್ತಾನೆ. ನಾನೂ ಅಲ್ಲಿಗೆ ಹೋಗಿ ಯೋಗಾರೂಢನಾಗಿ ಈ ಲೋಕದಿಂದ ತೆರಳುತ್ತೇನೆ. ನಾನು ಈಗೀಗ ಅರ್ಜುನನನ್ನು ಕರೆಕಳಿಸಿರುತ್ತೇನೆ. ಅವನು ಬಂದು ಈ ಯಾವತ್ತು ಹುಡುಗರನ್ನೂ ಹೆಂಗಸರನ್ನೂ ಕರಕೊಂಡು ಹೋಗುವನು. ಅಲ್ಲಿಯ ವರೆಗೆ ನೀವು ಇವರ ರಕ್ಷಣವನ್ನು ಮಾಡಿರಿ" ಎಂದು ಹೇಳಿ ಅವರಿಗೆ ತಿರುಗಿ ನಮಸ್ಕಾರ ಮಾಡಿ ದ್ವಾರಕೆಯನ್ನು ಬಿಟ್ಟು ಅರಣ್ಯಕ್ಕೆ ಹೋದನು. ಆಗ ಯಾವತ್ತು ಯಾದವ ಹೆಂಗಸರೂ ಹುಡುಗರೂ ಎಷ್ಟು ಅತ್ತಾಗ್ಯೂ ಅವನು ಅದನ್ನು ಲಕ್ಷಿಸದೆ, ಬಲರಾಮನು ಯೋಗಾರೂಢನಾಗಿ ಕುಳಿತ ಸ್ಥಳಕ್ಕೆ ಬಂದು, ಯೋಗಮಾಯೆಯಿಂದ ಮನಸ್ಸಿನ ನಿರೋಧವನ್ನು ಮಾಡಿ ಒಂದು ಅರಳಿಯ ಗಿಡಕ್ಕೆ ಆತುಕೊಂಡು, ಎಡಗಡೆಯ ಮೊಣಕಾಲಿನ ಮೇಲೆ ಬಲಗಡೆಯ ಕಾಲನ್ನು ಇಟ್ಟುಕೊಂಡು, ಬ್ರಹ್ಮಾಸನದಲ್ಲಿ ಕುಳಿತನು. ಆಗ ಒಬ್ಬ ಬೇಡನು ಅವನ ಅಂಗಾಲನ್ನು ಒಂದು ಮೃಗದ ಬಾಯಿಯೆಂದು ತಿಳಿದು ಅವನ ಮೇಲೆ ಬಾಣ ಪ್ರಯೋಗ ಮಾಡಿದನು. ಇದರಿಂದ ಶ್ರೀಕೃಷ್ಣನು ತನ್ನ ನರದೇಹವನ್ನು ಬಿಟ್ಟು ನಿಜಧಾಮಕ್ಕೆ ಹೋದನು.

ಅತ್ತಲಾ ಪಾಂಡವರಿಗೆ ಶ್ರೀಕೃಷ್ಣನ ನಿಧನದ ಮತ್ತು ಯಾದವರ ಭಯಂಕರ ಕೊಲೆಯ ವರ್ತಮಾನವು ದಾರುಕನ ಬಾಯಿಂದ ಗೊತ್ತಾಗಲಾಗಿ ಅವರಿಗೆ ಪರಮಾವಧಿ ದುಃಖವಾಯಿತು. ಅರ್ಜುನನು ಒಂದು ಕ್ಷಣ ಸಹ ವಿಲಂಬ ಮಾಡದೆ ಶ್ರೀಕೃಷ್ಣನ ಆಜ್ಞೆಯ ಪ್ರಕಾರ ಯಾದವ ಸ್ತ್ರೀಯರನ್ನೂ ಹುಡುಗರನ್ನೂ ಹಸ್ತಿನಾಪುರಕ್ಕೆ ಕರಕೊಂಡು ಬರಲಿಕ್ಕೆ ದ್ವಾರಕೆಗೆ ಬಂದನು. ಅಲ್ಲಿ ಅವನು ಈ ಯಾವತ್ತು ಭಯಂಕರ ಸ್ಥಿತಿಯನ್ನು ನೋಡಿ ಅತಿಶಯ ದುಃಖದಿಂದ ಮೂರ್ಛಿತನಾಗಿ ನೆಲದ ಮೇಲೆ ಬಿದ್ದು, ಕೆಲವು ಹೊತ್ತಿನ ನಂತರ ಎಚ್ಚರಿಕೆಯ ಮೇಲೆ ಬಂದು, ವೃದ್ಧರಾದ ವಸುದೇವ ದೇವಕಿಯರನ್ನು ಕಾಣಲಿಕ್ಕೆ ಹೋದನು. ಆಗ ಅವರು ಪುತ್ರಶೋಕದಿಂದ ಹಾಸಿಗೆ ಹಿಡಿದಿದ್ದರು. ಅವರಿಗೆ ಅವನು ನಾನಾಪರಿಯಿಂದ ಸಮಾಧಾನ ಹೇಳಿದನು. ಆದರೆ ವಸುದೇವನು ಅರ್ಜುನನಿಗೆ - "ನೀನು ಬರುವ ದಾರಿಯನ್ನೇ ನಾನು ನೋಡುತ್ತಿದ್ದೆನು. ಈ ಎಲ್ಲ ಹುಡುಗರನ್ನೂ ಹೆಂಗಸರನ್ನೂ ನೀನು ಕರಕೊಂಡು ಹೋಗಿ ಅವರನ್ನು ಯೋಗ್ಯ ರೀತಿಯಿಂದ ರಕ್ಷಣ ಮಾಡು. ನಾನಾದರೂ ಒಂದೊಪ್ಪತ್ತಿನವನೇ. ಇನ್ನೇನೂ ನಾನು ಬಹಳ ದಿವಸ ಬದುಕಲಾರೆನು" ಎಂದು ಹೇಳಿದನು. ಆ ಬಳಿಕ ಅರ್ಜುನನು ಯಾವತ್ತರನ್ನು ಅಲ್ಲಿಂದ ಕರಕೊಂಡು ಹೋಗುವ ಸಿದ್ಧತೆಗಾಗಿ ಅಲ್ಲಿ ಉಳಿದನು. ಆಗ ಅದೇ ರಾತ್ರಿ ವಸುದೇವನು ಪುತ್ರಶೋಕದಿಂದ ಮಡೆದು ಹೋದನು. ಆ ಮೇಲೆ ಅರ್ಜುನನು ವಸುದೇವನ ಅಂತ್ಯವಿಧಿಯ ಸಂಸ್ಕಾರವನ್ನು ಸಾಂಗ ಮಾಡಿದ ಬಳಿಕ ಪ್ರಭಾಸಕ್ಷೇತ್ರಕ್ಕೆ ಹೋಗಿ, ಯಾದವರ ಯುದ್ಧಭೂಮಿಯನ್ನು ನೋಡಿಕೊಂಡು, ಅಲ್ಲಿಂದ ಬಲರಾಮ ಮತ್ತು ಶ್ರೀಕೃಷ್ಣರ ಪ್ರೇತಗಳನ್ನು ಶೋಧ ಮಾಡಿ, ವಜ್ರನ ಕೈಯಿಂದ ಅವರ ಉತ್ತರ ಕ್ರಿಯೆಗಳನ್ನು ಮಾಡಿಸಿದನು. ಆ ಬಳಿಕ ಅರ್ಜುನನು ಯಾದವ ಸ್ತ್ರೀಯರನ್ನೂ ಹುಡುಗರನ್ನೂ ಕರಕೊಂಡು ಹಸ್ತಿನಾಪುರಕ್ಕೆ ಬರುತ್ತಿರುವಾಗ ದಾರಿಯಲ್ಲಿ ಕಳ್ಳರು ಅವರನ್ನು ಸುಲಿದುಕೊಳ್ಳಲಿಕ್ಕೆ ಬಂದರು. ಆಗ ಅರ್ಜುನನು ತನ್ನ ಗಾಂಡೀವ ಧನುಷ್ಯವನ್ನು ಕೈಯಲ್ಲಿ ತೆಗೆದುಕೊಂಡು ಅದಕ್ಕೆ ತನ್ನ ಅಸ್ತ್ರಗಳನ್ನು ಹೂಡಬೇಕೆನ್ನುವಷ್ಟರಲ್ಲಿ ಅವನಿಗೆ ಒಂದೂ ಅಸ್ತ್ರದ ನೆನಪಾಗಲಿಲ್ಲ. ಇದಲ್ಲದೆ ಅವನ ಹತ್ತರ ಅಕ್ಷಯ್ಯವಾದ ಬಾಣಗಳ ಬತ್ತಳಿಕೆಯಿದ್ದರೂ ಆ ಅವನ

ಬತ್ತಳಿಕೆಯಲ್ಲಿ ಒಂದೂ ಬಾಣವು ಇದ್ದಿಲ್ಲ. ಆಗ ಅವನು ತನ್ನ ಧನುಷ್ಯದ ತುದಿಯಿಂದಲೇ ಆ ಕಳ್ಳರನ್ನು ಹೊಡೆಯಲಿಕ್ಕೆ ಹತ್ತಿದನು. ಶ್ರೀಕೃಷ್ಣನು ದೇಹ ವಿಟ್ಟದ್ದರಿಂದ ಅವನೊಡನೆ ತನ್ನ ಪರಾಕ್ರಮವು ನಷ್ಟವಾಯಿತೆಂದು ನಾಚಿ ಕೊಂಡು ತನ್ನ ಮೋರೆಯನ್ನು ಬಾಗಿಸಿ ತನ್ನ ಮತ್ತು ತನ್ನ ಸೇವಕರ ಕೈಯಿಂ ದಾದಷ್ಟು ಯಾದವ ಸ್ತ್ರೀಯರ ಮತ್ತು ಯಾದವ ಹುಡುಗರ ಹತ್ತಿರ ಇದ್ದ ಸಾಮಾನುಗಳನ್ನೂ ದ್ರವ್ಯವನ್ನೂ ರಕ್ಷಣ ಮಾಡಿದನು. ಈ ರೀತಿಯಿಂದ ಅರ್ಜುನನು ಯಾದವ ಸ್ತ್ರೀಯರನ್ನೂ ಹುಡುಗರನ್ನೂ ಕರಕೊಂಡು ಹಸ್ತಿನಾ ಪುರಕ್ಕೆ ಬಂದು ಮುಟ್ಟಿದ ಬಳಿಕ ಧರ್ಮರಾಜನು ಶ್ರೀಕೃಷ್ಣನ ಮೊಮ್ಮಗನಾದ ವಜ್ರನಿಗೆ ಇಂದ್ರಪ್ರಸ್ಥದಲ್ಲಿಯೂ, ಅರ್ಜುನನ ಮೊಮ್ಮಗನಾದ ಪರೀಕ್ಷಿತನಿಗೆ ಹಸ್ತಿನಾಪುರದಲ್ಲಿಯೂ ರಾಜ್ಯಸ್ಥಾಪನೆಯನ್ನು ಮಾಡಿಕೊಟ್ಟನು ರುಕ್ಮಿಣಿ, ಗಾಂಧಾರಿ, ಶೈವ್ಯಾ, ಹೈಮವತಿ ಮತ್ತು ಜಾಂಬವತಿ ಈ ಐದು ಮಂದಿ ಶ್ರೀಕೃಷ್ಣನ ಪಟ್ಟರಾಣಿಯರು ಸಹಗಮನವನ್ನು ಮಾಡಿದರು. ಸತ್ಯಭಾಮಾ, ಲಕ್ಷಣಾ ಮತ್ತು ಮಿತ್ರವಿಂದಾ ಈ ಮೂರು ಮಂದಿ ರಾಣಿಯರು ತಪಸ್ಸನ್ನು ಮಾಡಲಿಕ್ಕೆ ಅರಣ್ಯಕ್ಕೆ ಹೊರಟು ಹೋದರು. ಆ ಮೇಲೆ ಪಾಂಡವರು ದ್ರೌಪ ದೀ ಸಹಿತರಾಗಿ ಶ್ರೀಕೃಷ್ಣನ ವಿಯೋಗದ ಮೂಲಕ ಸ್ವರ್ಗಾರೋಹಣವನ್ನು ಮಾಡಿದರು.

---

# ೯. ಉಪಸಂಹಾರ.



ಶ್ರೀಕೃಷ್ಣನ ಜನ್ಮವಾಗುವ ಮುಂಚೆ ಹಿಂದುಸ್ಥಾನದಲ್ಲಿಯ ಆರ್ಯರ ಸ್ಥಿತಿಯು ಅತ್ಯಂತ ಉತ್ಕರ್ಷವನ್ನು ಹೊಂದಿತ್ತು. ಹಾಗೂ ಯಾವತ್ತು ಕಡೆಗೆ ಶಾಂತಿಯೂ ಸೌಖ್ಯವೂ ನೆಲೆಗೊಂಡಿದ್ದವು. ಆದರೆ ಯಾವದೂ ದೇಶವು ಕಡೆತನಕ ಉನ್ನತಿಯಿಂದಲೇ ಇರುವದು ಅಸಂಭವವಿರುತ್ತದೆ. ಚಕ್ರ ದ ಗತಿಯು ಉಚ್ಚ ಬಿಂದುವಿಗೆ ಹೋಗಿ ಮುಟ್ಟಿದ ಬಳಿಕ ಅದು ಕೆಳಗೆ ಬರು ವದು ಅಪರಿಹಾರ್ಯವಿರುವಂತೆ ಜಗತ್ತಿನ ಗತಿಯಾದರೂ ಉಚ್ಚನೀಚವಾಗು

ವದು ಅಪರಿಹಾರ್ಯವಿರುತ್ತದೆ. ಯುರೋಪಖಂಡದಲ್ಲಿ ಈಗ ಕೆಲವು ವರ್ಷಗಳ ಹಿಂದೆ ಜರ್ಮನಿಯ ಕೇಸರನ ದುರಾಗ್ರಹದ ಮೂಲಕ ಭಯಂಕರವಾದ ಮಹಾ ಯುದ್ಧವು ನಡೆದು ಯುರೋಪಖಂಡದಲ್ಲಿಯ ಅನೇಕ ರಾಷ್ಟ್ರಗಳು ನಿಕೃಷ್ಟ ಸ್ಥಿತಿಯನ್ನು ಹೊಂದಿದಂತೆ ಶ್ರೀಕೃಷ್ಣನ ಕಾಲಕ್ಕೆ ದುರ್ಯೋಧನನ ದುರಾಗ್ರಹದ ಮೂಲಕ ಕ್ಷತ್ರಿಯ ವೀರರಾದ ಪಾಂಡವ ಕೌರವರೊಳಗೆ ಭಯಂಕರವಾದ ಮಹಾಯುದ್ಧವು ನಡೆದು ಹಿಂದುಸ್ಥಾನಕ್ಕೆ ನಿಕೃಷ್ಟ ಸ್ಥಿತಿಯು ಪ್ರಾಪ್ತವಾಯಿತು. ಶ್ರೀಕೃಷ್ಣನ ಕಾಲಕ್ಕೆ ಹಿಂದುಸ್ಥಾನವು ನೀತಿ, ಶೌರ್ಯ, ವಿದ್ಯೆ ಮುಂತಾದವುಗಳಿಂದ ಸುಧಾರಣೆಯ ಶಿಖರಕ್ಕೆ ಹೋಗಿ ಮುಟ್ಟಿತ್ತು. ಆದರೆ ಭಾರತೀಯ ಯುದ್ಧದಿಂದ ಕಲಿಯುಗವು ಆರಂಭವಾದ್ದರಿಂದ ಲಕ್ಷಾವಧಿ ಮನುಷ್ಯರು ಆ ಯುದ್ಧದಲ್ಲಿ ಮೃತ್ಯುಮುಖದೊಳಗೆ ಬಿದ್ದರು. ಆ ಯುದ್ಧದಿಂದ ದೇಶದಲ್ಲಿಯ ಜನಸಂಖ್ಯೆಯು ಬರೀ ಕಡಿಮೆಯಾಯಿತೆಂತಲ್ಲ, ಆದರೆ ಅದರಿಂದ ಅನೇಕ ಪ್ರಕಾರದ ಅನಿಷ್ಟ ಪರಿಣಾಮಗಳುಂಟಾದವು. ದೇಶದಲ್ಲಿಯ ಸಂಪತ್ತು ಹಾಳಾಯಿತು; ಜನರು ದುರ್ಬಲರಾದರು; ಹಾಗೂ ಜನರೊಳಗಿನ ನೀತಿಯು ಕಡಿಮೆಯಾಯಿತು. ಈ ಪ್ರಕಾರ ನಮ್ಮ ಆರ್ಯರ ಹೀನಾವಸ್ಥೆಯಾಗಲಿಕ್ಕೆ ಯಾವ ಯಾವ ಕಾರಣಗಳಾದವು ಮತ್ತು ಅವುಗಳನ್ನು ನಿವಾರಿಸುವ ಉಪಾಯಗಳು ಯಾವವು ಎಂಬುದು ಶ್ರೀಕೃಷ್ಣನ ದಿವ್ಯ ಚರಿತ್ರದ ಮೇಲಿಂದಲೂ, ಅವನು ಮಾಡಿದ ಗೀತೋಪದೇಶದ ಮೇಲಿಂದಲೂ ಯಾರಿಗಾದರೂ ಚೆನ್ನಾಗಿ ಲಕ್ಷ್ಯದಲ್ಲಿ ಬಾರದೆ ಇರದು.

ಯಾವದೊಂದು ದೇಶದ ಸಾಮಾಜಿಕ, ನೈತಿಕ ಮತ್ತು ಧಾರ್ಮಿಕ ಉನ್ನತಿಯಾಗಬೇಕಾದರೆ ಆ ದೇಶದ ಜನರು ಪ್ರವೃತ್ತಿ ಮತ್ತು ನಿವೃತ್ತಿ ಈ ಎರಡೂ ಮಾರ್ಗಗಳನ್ನು ಯೋಗ್ಯ ರೀತಿಯಿಂದ ಅವಲಂಬಿಸಬೇಕಾಗುತ್ತದೆ. ಆ ಪ್ರಕಾರ ಮಾಡದಿದ್ದರೆ ಆ ದೇಶವು ನಿಕೃಷ್ಟ ಸ್ಥಿತಿಗೆ ಬರುವದು ನಿಶ್ಚಯವೇಸರಿ. ಯಾವ ನೇಮವು ಒಬ್ಬ ವ್ಯಕ್ತಿಗೆ ಸಂಬಂಧವಿರುತ್ತದೋ ಅದೇ ನೇಮವು ಒಂದು ದೇಶಕ್ಕೆ ಅಥವಾ ರಾಷ್ಟ್ರಕ್ಕೆ ಸಂಬಂಧವಿರುತ್ತದೆ. ಮನುಷ್ಯನು ಬರೀ ತನ್ನ ಉದ್ಯೋಗ, ಸಾಹಸ, ಬುದ್ಧಿ ಮೊದಲಾದ ಪ್ರವೃತ್ತಿಯ (ಅಧಿಭೌತಿಕ) ಸದ್ಗುಣಗಳಿಂದ ಉನ್ನತಿಯನ್ನು ಹೊಂದಲಾರನು. ಅವನಲ್ಲಿ ಧರ್ಮ, ನೀತಿ,

ತಪಸ್ಸು, ನಿರಪೇಕ್ಷಬುದ್ಧಿ ಮೊದಲಾದ ನಿವೃತ್ತಿಯ (ಆಧ್ಯಾತ್ಮಿಕ) ಸದ್ಗುಣಗಳು ಸಹ ಇರುವದು ಅತ್ಯವಶ್ಯವಿರುತ್ತದೆ. ನೈತಿಕ ಮತ್ತು ಧಾರ್ಮಿಕ ತತ್ವಗಳ ಆಚರಣೆಯನ್ನು ಬಿಟ್ಟು ತನ್ನ ಉದ್ಯೋಗ, ಬುದ್ಧಿ ಮತ್ತು ಸಾಹಸಗಳ ಕಸುವಿನಿಂದ ತನ್ನ ಉನ್ನತಿಯನ್ನು ಮಾಡಿಕೊಳ್ಳಲಿಕ್ಕೆ ಯತ್ನಿಸುವವನ ಮೂರ್ಖತನವೂ, ಅಸ್ತಿಭಾರವನ್ನು ಸರಿಯಾಗಿ ಹಾಕದೆ ಕಟ್ಟಡವನ್ನು ಕಟ್ಟಿಸುವವನ ಮೂರ್ಖತನವೂ ಒಂದೇ ಇರುವವು. ಆದುದರಿಂದ ಯಾವದೇ ಮನುಷ್ಯನಲ್ಲಿ ಅಥವಾ ರಾಷ್ಟ್ರದಲ್ಲಿ ಆಧಿಭೌತಿಕ ಮತ್ತು ಆಧ್ಯಾತ್ಮಿಕ ಇವೆರಡೂ ಸದ್ಗುಣಗಳು ಅತವ್ಯಶ್ಯವಾಗಿ ಇರತಕ್ಕದ್ದು.

ಶ್ರೀಕೃಷ್ಣ ಚರಿತ್ರವನ್ನು ಓದುವವರಿಗೆ ಶ್ರೀಕೃಷ್ಣನಂಥ ಅದ್ವಿತೀಯ ಪುರುಷನು ಇಡೀ ಜಗತ್ತಿನಲ್ಲಿ ಇಂದಿನ ತನಕ ಯಾರೂ ಆಗಲಿಲ್ಲವೆಂದು ಸ್ಪಷ್ಟವಾಗಿ ಕಾಣುವದು. ಶ್ರೀಕೃಷ್ಣನಲ್ಲಿದ್ದಂಥ ಅಲೌಕಿಕ ಪರಾಕ್ರಮವನ್ನೂ ಅಪ್ರತಿಮ ಬುದ್ಧಿಕೌಶಲ್ಯವನ್ನೂ, ಅಸಾಮಾನ್ಯ ಸ್ವಾರ್ಥತ್ಯಾಗವನ್ನೂ ಯಾವ ಐತಿಹಾಸಿಕ ಮಹಾಪುರುಷನಲ್ಲಿಯೂ ಕಾಣುವದು ಅಶಕ್ಯವಿರುತ್ತದೆ. **ನೆಪೋಲಿಯನ್ ಬೋನಾಪಾರ್ಟನು** ಅತ್ಯಂತ ಬುದ್ಧಿಸಂಪನ್ನನು ಮತ್ತು ಪರಾಕ್ರಮಿಯು ಇದ್ದಾಗ್ಯೂ ಅವನಲ್ಲಿ ಸ್ವಾರ್ಥಪರಾಯಣತೆಯು ತುಂಬಿತ್ತು. ಅವನು ಒಬ್ಬ ಸಾಮಾನ್ಯ ಮನುಷ್ಯನಿದ್ದರೂ ತನ್ನ ಪರಾಕ್ರಮ, ತನ್ನ ಕೌಶಲ್ಯ ಮತ್ತು ಸಾಹಸಗಳಿಂದ ಚಕ್ರವರ್ತಿಯಾದನೆಂಬದು ನಿಜವು. ಆದರೆ ಕೊನೆಗೆ ಅವನ ಗತಿಯು ಏನಾಯಿತು? ಅವನು **ಸೆಂಟ ಹೆಲಿನಾ** ಎಂಬ ಒಂದು ಅಪ್ರಸಿದ್ಧವಾದ ನಡುಗಡ್ಡೆಯೊಳಗೆ ಕಾರಾಗೃಹದ ಯಾತನೆಯನ್ನು ಅನುಭೋಗಿಸುತ್ತ ಸತ್ತು ಹೋದನು. ಆದರೆ ನಮ್ಮ ಚರಿತ್ರನಾಯಕನು ಮಹಾಸ್ವಾರ್ಥತ್ಯಾಗಿಯು ಇದ್ದ ಕಾರಣ ಅವನು ಮೊದಲಿನಿಂದ ಕಡೆತನಕ ಐಶ್ವರ್ಯದಿಂದಲೂ ವೈಭವದಿಂದಲೂ ತನ್ನ ಆಯುಷ್ಯವನ್ನು ಕಳೆದು ಮಹಾಸಾತ್ವಿಕ ಮತ್ತು ಧರ್ಮಿಷ್ಠ ತಪಸ್ವಿಯಂತೆ ಯೋಗಾರೂಢನಾಗಿ ಇಚ್ಛಾಮರಣವನ್ನು ಪಡೆದನು. ಅವನು ಕೈಕೊಂಡ ಯಾವ ಕಾರ್ಯದಲ್ಲಿಯೂ ಅಪಜಯವು ಅಥವಾ ನಿರಾಶೆಯು ಉಂಟಾಗಲಿಲ್ಲ. ಅವನು ಮಾಡಿದ ಯಾವತ್ತು ಕಾರ್ಯಗಳಲ್ಲಿ ತಪ್ಪದೆ ಜಯವು ಉಂಟಾಗುತ್ತಿತ್ತು. ಅವನಲ್ಲಿ **ನೇಪೋಲಿಯನ್ ಬೋನಾಪಾರ್ಟನಂಥ**

ಬುದ್ಧಿ ಕೌಶಲ್ಯವು ಮತ್ತು ಪರಾಕ್ರಮವು ಇದ್ದುದಲ್ಲದೆ **ಗ್ಲ್ಯಾಡಸ್ಟನ್** ಮತ್ತು **ಬಿಸ್ಮಾರ್ಕರಲ್ಲಿ** ಇದ್ದಂಥ ಮುತ್ಸದ್ದಿತನವು ಸಹ ಇತ್ತು. ಮೇಲಾಗಿ ಅವನು **ವಾಶಿಂಗಟನ್, ಅಬ್ರಾಹಿಮಲಿಂಕನ್** ಮತ್ತು **ಪ್ರಸಿಡೆಂಟ ವುಯಿಲ್ಸನ್** ಇವರು ನಿರಪೇಕ್ಷ ಬುದ್ಧಿಯಿಂದ ಮಾಡಿದ ರಾಜಕೀಯ ಕೆಲಸಗಳಿಗಿಂತ ಎಷ್ಟೋ ಪಾಲು ಹೆಚ್ಚಿಗೆ ಉದಾತ್ತವಾದ ರಾಜಕೀಯ ಕೆಲಸಗಳನ್ನು ಮಾಡಿದನು. ಅಂದಮೇಲೆ ನಮ್ಮ ಚರಿತ್ರನಾಯಕನಿಗೆ ಸಮಾನರಾದ ರಾಜಕಾರಣಪಟುಗಳು ಯಾವ ದೇಶದಲ್ಲಿಯೂ ಇವತ್ತಿನ ವರೆಗೆ ಆಗಲಿಲ್ಲವೆಂದು ಹೇಳಿದರೆ ಏನೂ ಅತಿಶಯೋಕ್ತಿಯಾಗದು. ಇದಲ್ಲದೆ ಅವನು ರಾಜಕಾರಣದಲ್ಲಿ ಮಹಾಬಲ್ಲಿದನಿದ್ದಂತೆ ಪಾರಮಾರ್ಥಿಕ ವಿಷಯದಲ್ಲಿಯೂ ಮಹಾ ಬಲ್ಲಿದನಿದ್ದನು. ಅವನಲ್ಲಿ **ಶ್ರೀ ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯ, ಬುದ್ಧ, ಬಸವ, ಕ್ರಿಸ್ತ, ಮುಹಮ್ಮದ ಪೈಗಂಬರ** ಮೊದಲಾದ ಧರ್ಮಸ್ಥಾಪಕರಲ್ಲಿದ್ದಂಥ ನಿಶ್ಚಯ, ಸೌಜನ್ಯ, ಬುದ್ಧಿವಾದ ಮೊದಲಾದ ಯಾವತ್ತು ಸದ್ಗುಣಗಳು ಇದ್ದವು. ಆದುದರಿಂದ ನಮ್ಮ ಚರಿತ್ರನಾಯಕನ ಯೋಗ್ಯತೆಯು ಅದ್ವಿತೀಯವಾಗಿರುವದೆಂದು ತಾನೇ ಒಡೆದು ಕಾಣುತ್ತದೆ.

ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಗೀತೋಪದೇಶವಂತೂ **ಭಗವದ್ಗೀತೆ**ಯೆಂಬ ಹೆಸರಿನಿಂದ ಜಗತ್ಪ್ರಸಿದ್ಧವಿರುತ್ತದೆ. ಅದು ಸಕಲ ಜಗತ್ತಿನ ಜ್ಞಾನಭಾಂಡಾರವಿರುತ್ತದೆಂದರೂ ಸಲ್ಲುವದು. ಅದು ಸಂಸಾರಿಕರಿಗೂ ಸಾಧುಗಳಿಗೂ ಕೂಡಿಯೇ ಉಪಯೋಗವುಳ್ಳದ್ದಿರುತ್ತದೆ. ಈ ಪರಮ ತತ್ವಜ್ಞಾನದ ಗ್ರಂಥದಲ್ಲಿ ಶ್ರೀಕೃಷ್ಣನು ಉಪದೇಶ ಮಾಡಿದ **ಕರ್ಮಯೋಗ**ದಂಥ ಪರಮತತ್ವಜ್ಞಾನವು ಜಗತ್ತಿನೊಳಗಿನ ಯಾವ ತತ್ವಜ್ಞಾನದ ಗ್ರಂಥಗಳಲ್ಲಿಯೂ ಸಿಗಲಾರದು. ಅದು ಯಾವತ್ತು ಕಾಲದಲ್ಲಿ ಮತ್ತು ಯಾವತ್ತು ದೇಶದಲ್ಲಿ ಯಾವತ್ತು ಜನರು ಮಾನ್ಯಮಾಡುವಂಥಾದ್ದು ಇರುತ್ತದೆ. ಅದೇನಂದರೆ:—" **ಕರ್ಮವು ಸಿದ್ಧಿಗೆ ಹೋಗುತ್ತದೋ ಇಲ್ಲೋ ಎಂಬ ವಿಚಾರವನ್ನು ನಾವು ಮನಸ್ಸಿನಲ್ಲಿ ತಂದು ನಮ್ಮ ಮನಸ್ಸನ್ನು ಹೊಯ್ದಾಡಗೊಡದೆ ಪರಮೇಶ್ವರನಲ್ಲಿ ವಿಶ್ವಾಸವಿಟ್ಟು ' ನಾವು ಪರಮೇಶ್ವರನ ಇಚ್ಛೆಯ ಪ್ರಕಾರ**

**ಈ ಕರ್ಮವನ್ನು ಮಾಡಿ ಅವನಿಗೇ ಅದನ್ನು ಅರ್ಪಣ ಮಾಡುತ್ತೇವೆ ' ಎಂಬ ಬುದ್ಧಿಯಿಂದ ಕರ್ಮವನ್ನು ಮಾಡತಕ್ಕದ್ದು "** ಈ ಉಪದೇಶವು ಎಷ್ಟು ಉದಾತ್ತವಾದದ್ದು ಮತ್ತು ಮಹತ್ವವಾದದ್ದು ಇರುತ್ತದೆಂಬುದನ್ನು ಪ್ರತಿಯೊಬ್ಬರು ವಿಚಾರ ಮಾಡತಕ್ಕದ್ದು. ಇಂಥ ಅಮೌಲ್ಯ ಉಪದೇಶವನ್ನು ಯಾವ ತತ್ವಜ್ಞಾನಿಯೂ ಇಂದಿನ ತನಕ [illegible] ಉಪದೇಶವನ್ನು ಯಾರು ಚೆನ್ನಾಗಿ ತಿಳಿದುಕೊಂಡು ನಡೆಯುತ್ತಾರೋ ಅವರಿಗೆ ದುಃಖವು ಅಥವಾ ನಿರಾಶೆಯು ಎಂದಿಗೂ ಆಗಲಾರದು. ಅವರು ದುಃಖಸಮುದ್ರವನ್ನು ನಿಸ್ಸಂದೇಹದಿಂದ ದಾಟಿ ಪಾರಾದರೆಂತಲೇ ತಿಳಿಯತಕ್ಕದ್ದು. ಇನ್ನೊಂದು ಮಹತ್ವದ ಉಪದೇಶವೇನಂದರೆ:— **" ಕರ್ಮವನ್ನು ಪೂರ್ಣವಾಗಿ [illegible]ವದು ಮತ್ತು ಇಂದ್ರಿಯಗಳ ವ್ಯವಹಾರವನ್ನು ಪೂರ್ಣವಾಗಿ [illegible]ರೋಧ ಮಾಡುವದು ಅಶಕ್ಯವಿರುತ್ತದೆ. ಆದುದರಿಂದ ಧರ್ಮ ಮತ್ತು ನೀತಿ ಇವೆರಡನ್ನೂ ಅನುಸರಿಸಿ ಜಗತ್ತಿನಲ್ಲಿಯ ಭೌತಿಕ ಸುಖವನ್ನು ನಿಯಮಯುಕ್ತವಾಗಿ ಅನುಸರಿಸತಕ್ಕದ್ದು. ಅ[illegible]ರಿ ಸದಾಚಾರದಿಂದ ಗೃಹಸ್ಥಾಶ್ರಮದಲ್ಲಿ ಇರುವದು ಸನ್ಯಾಸಾಶ್ರಮದಂತೆ ಪುಣ್ಯಪ್ರದವಿರುವದು. "**

**ಸಾರಾಂಶ**—ಈ ಗೀತೋಪದೇಶವು ವ್ಯವಹಾರಜ್ಞರಿಗೆ ಬುದ್ಧಿಯನ್ನೂ, ಮುಮುಕ್ಷುಗಳಿಗೆ ಮೋಕ್ಷವನ್ನೂ ಕೊಡುತ್ತದೆ. ದುಃಖಿತರಿಗೂ ನಿರಾಶೆಯಾದವರಿಗೂ ಸಮಾಧಾನವನ್ನು ಮತ್ತು ಧೈರ್ಯವನ್ನು ಕೊಡುತ್ತದೆ. ಈ ಗೀತೋಪದೇಶವು ಶ್ರೀಕೃಷ್ಣ ಚರಿತ್ರದಲ್ಲಿ ಅಂತರ್ಗತವಾಗಿದ್ದು ನಾವು ಶ್ರೀಕೃಷ್ಣ ಚರಿತ್ರವನ್ನೂ ಗೀತೋಪದೇಶವನ್ನೂ ಎಷ್ಟು ವರ್ಣಿಸಿದರೂ ಕಡಿಮೆಯೇ ಸರಿ. ಆದುದರಿಂದ ನಮ್ಮ ವಾಚಕರು ಈ ಚರಿತ್ರದಲ್ಲಿ ಓತಪ್ರೋತವಾಗಿರುವ ಅಮೃತವನ್ನು ಪಾನ ಮಾಡಿ ಐಹಿಕ ಮತ್ತು ಪಾರಮಾರ್ಥಿಕ ಇವೆರಡೂ ದೃಷ್ಟಿಯಿಂದ ತಮ್ಮ ಲಾಭವನ್ನು ಮಾಡಿಕೊಳ್ಳತಕ್ಕದ್ದೆಂದು ಅವರಿಗೆ ನಾವು ಬಹಳ ಆಗ್ರಹಪೂರ್ವಕವಾಗಿ ಹೇಳಿ ಇಲ್ಲಿಯೇ ವಿರಮಿಸುತ್ತೇವೆ.

---

# ಐತಿಹಾಸಿಕ ಟಿಪ್ಪಣಿ.

(ಶ್ರೀಯುತ ಚಿಂ. ವಿ. ವೈದ್ಯ ಇವರ ಗ್ರಂಥದ ಆಧಾರದಿಂದ)



| ವೃತ್ತಾಂತ. | ಕಾಲ. | | ವಯಸ್ಸು. |
|---|---|---|---|
| | ಶಾ. ಶ. ಮುಂಚೆ. | ಕ್ರಿ. ಶ. ಮುಂಚೆ. | ಕೃಷ್ಣನದು. |
| ಶ್ರೀಕೃಷ್ಣ ಜನ್ಮ. | ೩೨೬೩ ಶ್ರಾ. ವ. ೮ ಬುಧವಾರ ರೋ. | ೩೧೮೫ | |
| ಕಂಸವಧ. | ೩೨೪೪ | ೩೧೬೭ | ೧೮ |
| ರುಕ್ಮಿಣೀ ವಿವಾಹ. | ೩೨೩೮ | ೩೧೬೦ | ೨೫ |
| ಪ್ರದ್ಯುಮ್ನನ ಜನ್ಮ. | ೩೨೩೬ | ೩೧೫೮ | ೨೭ |
| ದ್ರೌಪದೀ ಸ್ವಯಂವರ. | ೩೨೨೦ | ೩೧೪೨ | ೪೩ |
| ಅರ್ಜುನನು ತೀರ್ಥಯಾತ್ರೆಗೆ ಹೋದದ್ದು. | ೩೨೧೦ | ೩೧೩೨ | ೫೩ |
| ಸುಭದ್ರಾಹರಣ. | ೩೧೯೮ | ೩೧೨೦ | ೬೫ |
| ಅಭಿಮನ್ಯುವಿನ ಜನ್ಮ. | ೩೧೯೬ | ೩೧೧೮ | ೬೭ |
| ರಾಜಸೂಯಯಜ್ಞ. | ೩೧೯೫ | ೩೧೧೬ | ೬೯ |
| ಭಾರತೀಯ ಯುದ್ಧ. | ೩೧೮೦ ಮಾ. ಶು. ೧೪ | ೩೧೦೧ | ೮೩ |
| ಶ್ರೀಕೃಷ್ಣನ ನಿರ್ಯಾಣ. | ೩೧೪೪ ಮಾ. | ೩೦೬೫ | ೧೧೯ |

ಕಲಿಯುಗದ ಆರಂಭವು ಭಾರತೀಯ ಯುದ್ಧಕ್ಕಿಂತ ಒಂದು ವರ್ಷದ ಮುಂಚೆ ಅಂದರೆ ಶಾ. ಶ. ಮುಂಚೆ ೩೦೨೯ ಚೈ. ಶು. ಪ್ರತಿಪದೆಯ ದಿವಸ ಆಯಿತು. ಭಾರತೀಯ ಯುದ್ಧಕ್ಕಿಂತ ೧೫ ವರ್ಷಗಳ ಮುಂಚೆ ರಾಜಸೂಯ ಯಜ್ಞವು ನೆರವೇರಿತು. ಶ್ರೀಕೃಷ್ಣನು ರಾಜಸೂಯಯಜ್ಞದ ಕಾಲಕ್ಕೆ ೬೮ ವರ್ಷದವನು, ಅಂದರೆ ಭಾರತೀಯ ಯುದ್ಧದ ಕಾಲಕ್ಕೆ ೮೩ ವರ್ಷದವನು ಇದ್ದನು. ಶ್ರೀಕೃಷ್ಣನು ಅರ್ಜುನನಿಗಿಂತ ೧೮ ವರ್ಷಗಳಿಂದ ಹಿರಿಯನಿದ್ದನು. ವಸುದೇವನು ಶ್ರೀಕೃಷ್ಣನ ಜನ್ಮದ ಕಾಲಕ್ಕೆ ೪೦ ವರ್ಷದವನು ಮತ್ತು ತನ್ನ ಮರಣದ ಕಾಲಕ್ಕೆ ೧೪೧ ವರ್ಷದವನು ಇದ್ದನು.

**—: ಸ ಮಾ ಪ್ತ . :—**